# ಏಕಾಂಕ ಸಂಗ್ರಹ

ಭಾಗ: 2

ಸಂಪಾದಕ

ಸಿಂಧುವಳ್ಳಿ ಅನಂತಮೂರ್ತಿ



ಸಾಹಿತ್ಯ ಅಕಾದೆಮಿ

*Ekanka Sangraha* II Series (Anthology of Kannada One-Act Plays) compiled by Sindhuvally Ananthamurthy, Sahitya Akademi, New Delhi, 1986, Rs. 25.


*First Published*: 1986

**ಸಾಹಿತ್ಯ ಅಕಾದೆಮಿ**

ಪ್ರಧಾನ ಕಾರ್ಯಾಲಯ :
ರವೀಂದ್ರಭವನ, ೩೫, ಫಿರೋಜಶಾಹ ರಸ್ತೆ, ನವದೆಹಲಿ—೧೧೦ ೦೦೧.

ಪ್ರಾದೇಶಿಕ ಕಾರ್ಯಾಲಯಗಳು :

೨೯; ಎಲ್ಡಾಮ್ಸ್ ರಸ್ತೆ, ತೇನಾಂಪೇಟ್, ಮದ್ರಾಸ್—೬೦೦ ೦೧೮.
ಬ್ಲಾಕ್ V—ಬಿ, ರವೀಂದ್ರ ಸರೋಬರ್ ಸ್ಟೇಡಿಯಮ್, ಕಲಕತ್ತಾ-೭೦೦ ೦೨೯.
೧೭೨, ಮುಂಬಯಿ ಮರಾಠಿ ಗ್ರಂಥ ಸಂಗ್ರಹಾಲಯ ಮಾರ್ಗ, ದಾದರ್,
ಮುಂಬಯಿ ೪೦೦ ೦೧೪.

Rs. 25.

ಮುದ್ರಕರು: ಡಯೋಸೀಸನ್ ಪ್ರೆಸ್, ಮದ್ರಾಸ್-೬೦೦ ೦೦೭.

# ಪರಿವಿಡಿ

ಕೊನೆಯ ರಕ್ಷಾಪುಟದಲ್ಲಿ ಕಾಣಿಸಿರುವ ಶಿಲ್ಪಕಲೆಯಲ್ಲಿ ಮೂವರು ಭವಿಷ್ಯವಾದಿಗಳು ಭಗವಾನ್ ಬುದ್ಧನ ತಾಯಿ ರಾಣಿ ಮಾಯಾಳ ಕನಸನ್ನು ರಾಜ ಶುದ್ಧೋದನನಿಗೆ ವಿವರಿಸುವ ದೃಶ್ಯವಿದೆ. ಅವುಗಳ ಕೆಳಗೆ ಆ ವಿವರಣೆಯನ್ನು ಬರೆದುಕೊಳ್ಳುತ್ತಿರುವ ಬರಹಗಾರ ಕುಳಿತಿದ್ದಾನೆ. ಬಹುಶಃ ಇದುವೇ ಭಾರತದ ಬರವಣಿಗೆಯ ಕಲೆಯನ್ನು ಕುರಿತ ಪ್ರಥಮ ಸಚಿತ್ರ ದಾಖಲೆಯಾಗಿದೆ.

ಸ್ಥಳ : ನಾಗಾರ್ಜುನಕೊಂಡದಿಂದ-ಕ್ರಿ. ಪೂ. ಎರಡನೆಯ ಶತಮಾನ

ಕೃಪೆ : ನ್ಯಾಷನಲ್ ಮ್ಯೂಸಿಯಂ, ನವದೆಹಲಿ,

# ಅರಿಕೆ

ಕೇಂದ್ರ ಸಾಹಿತ್ಯ ಅಕಾಡೆಮಿಯ ಅಪೇಕ್ಷೆಗೆ ಅನುಗುಣವಾಗಿ ಈ ಏಕಾಂಕ ಸಂಗ್ರಹವನ್ನು ಸಿದ್ಧಗೊಳಿಸಿದ್ದೇನೆ. ಈಗಾಗಲೇ ಅಕಾಡೆಮಿ ಶ್ರೀರಂಗರ ಸಂಪಾದಕತ್ವದಲ್ಲಿ ಒಂದು ಸಂಗ್ರಹವನ್ನು ಪ್ರಕಟಿಸಿದ್ದು, ಇದು ಎರಡನೆಯ ಸಂಗ್ರಹವಾಗಿದೆ. ಆ ಸಂಕಲನದಲ್ಲಿ ಪ್ರಕಟಗೊಂಡಿರುವ ನಾಟಕಕಾರರ ಯಾವ ನಾಟಕವನ್ನೂ ಇಲ್ಲಿ ಆಯ್ಕೆ ಮಾಡಿಲ್ಲ. ಆದರೆ ಆಯ್ಕೆ ಮಾಡುವಲ್ಲಿ ಒತ್ತು ಈಚಿನ ನಾಟಕಕಾರರಮೇಲಿದ್ದ ನಾಟಕ ಸಾಹಿತ್ಯದ ಬೆಳವಣಿಗೆ ಹಾಗು ರಂಗದ ಬೆಳವಣಿಗೆಯನ್ನು ಗಮನಿಸಿ ಸಂಗ್ರಹ ಸಿದ್ಧವಾಗಿದೆ—ಎನ್ನುವುದು ಇದನ್ನು ಅವಲೋಕಿಸಿದಾಗ ವ್ಯಕ್ತವಾಗುತ್ತದೆ.

ಈ ಸಂಗ್ರಹವನ್ನು ಸಿದ್ಧಗೊಳಿಸುವಾಗ ಸಾಮಾನ್ಯವಾಗಿ ಲಭ್ಯವಿರುವ ಎಲ್ಲರ ನಾಟಕಗಳ ಮೇಲೆ ಕಣ್ಣುಹಾಯಿಸಿರುತ್ತೇನೆ. ಆದರೆ ಮುಖ್ಯವಾಗಿ ರಂಗವನ್ನು ಗಂಭೀರವಾಗಿ ತೆಗೆದುಕೊಂಡವರ ನಾಟಕಗಳಿಗೇ ಇಲ್ಲಿ ಪ್ರಾಶಸ್ತ್ಯ ಸಿಕ್ಕಿದೆ ಎನ್ನುವುದನ್ನು ನಾನಿಲ್ಲಿ ಹೇಳಬಯಸುತ್ತೇನೆ. ಕಾದಂಬರಿಯನ್ನು ಬಿಟ್ಟರೆ ರಚನೆಯ ದೃಷ್ಟಿಯಿಂದ, ನಾಟಕಗಳಿಗೆ ಕನ್ನಡದಲ್ಲಿ ಕೊರತೆ ಇಲ್ಲ. ಆದರೆ, ನಮ್ಮ ಪ್ರತಿಭಾವಂತ ನಾಟಕಕಾರರಲ್ಲಿ ಹೆಚ್ಚಿನವರು ಬೇರೆ ಬೇರೆ ಮಾಧ್ಯಮಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿರುವುದರಿಂದ, ಈಚೆಗೆ ಕನ್ನಡದಲ್ಲಿ ಒಳ್ಳೆಯ ನಾಟಕಗಳು ಅಷ್ಟಾಗಿ ಬರುತ್ತಿಲ್ಲ. ನಾಡಿನ ಬೇರೆ ಬೇರೆ ಭಾಗಗಳಲ್ಲಿ ರಂಗ ಚಟುವಟಿಕೆ ಚೆನ್ನಾಗಿದ್ದು, ಸಮರ್ಥನಾಟಕಗಳ ಕೊರತೆಯಿಂದ ಹವ್ಯಾಸಿಗಳು ಅನುವಾದಗಳಿಗೆ ಹಾಗೂ ರೂಪಾಂತರಗಳಿಗೆ ಮರೆ ಹೊಕ್ಕಿದ್ದಾರೆ. ಅಲ್ಲದೆ ಕನ್ನಡದ ಕಾದಂಬರಿ, ಸಣ್ಣಕಥೆಗಳೂ ನಾಟಕರೂಪವನ್ನು ತಾಳುತ್ತಿವೆ. ನಾಟಕ ಸಾಹಿತ್ಯ ಹಾಗು ರಂಗಭೂಮಿಯ ದೃಷ್ಟಿಗಳಿಂದ ಈ ಪರಿಸ್ಥಿತಿ ಹಿತಕರವಾಗಿಲ್ಲ. ಹೀಗಿದ್ದೂ ಒಟ್ಟನಲ್ಲಿ ನೋಡಿದಾಗ ಕನ್ನಡದಲ್ಲಿ ಹೆಮ್ಮೆಪಡುವ ಕೆಲವಾದರೂ ನಾಟಕಗಳು ಬಂದಿವೆ, ಕೆಲವು ನಾಟಕಗಳೂ ಕನ್ನಡದಿಂದ ಇತರ ಕೆಲವು ಭಾರತೀಯ ಭಾಷೆಗಳಿಗೆ ಅನುವಾದವಾಗಿವೆ. ಆದರೆ ಇಷ್ಟರಿಂದಲೇ ನಾವು ಸಮಾಧಾನ ಪಡಬೇಕಾಗಿಲ್ಲ. ನಾಟಕ ರಚನೆಗೂ, ರಂಗಕ್ಕೂ ಪರಸ್ಪರ ಸಂಬಂಧ ಮೊದಲಿನಿಂದಲೂ ಇದೆ. ಈಚೆಗಂತೂ ಇವುಗಳ ಸಂಬಂಧ ಗಣನೀಯ ಪ್ರಮಾಣದಲ್ಲಿ ಹೆಚ್ಚಾಗಿದೆ. ರಂಗಚಟುವಟಿಕೆ ಹೆಚ್ಚಾಗಿದ್ದು ಹೊಸ ನಾಟಕಗಳಿಗೆ ಬೇಡಿಕೆ ಇರುವಾಗ, ನಿರೀಕ್ಷೆಗೆ ಅನುಗುಣವಾಗಿ ಸ್ವಂತ ನಾಟಕಗಳು ಇಲ್ಲದೇ ಹೋದಲ್ಲಿ, ರಂಗಚಟುವಟಿಕೆಯ ಮೇಲೆ ಪರಿಣಾಮ ಆಗದೆ ಇರುವುದಿಲ್ಲ. ಕನ್ನಡದಲ್ಲಿ ಮೂರು ಸಾವಿರಕ್ಕೂ ಮಿಕ್ಕು ನಾಟಕಗಳಿವೆ ಎಂದು ಹೇಳುವಾಗ ಆಡಲು ನಾಟಕಗಳ ಕೊರತೆ ಎಲ್ಲಿ? ಎನ್ನುವ ಇನ್ನೊಂದು ವಾದವೂ ಇದೆ. ಆದರೆ ಸೀಮಿತ ಪ್ರೇಕ್ಷಕರಿರುವುದರಿಂದ, ಆಡುವವರು ಹೊಸ ನಾಟಕಗಳನ್ನು

ಬಯಸುವುದು ತಪ್ಪೇನಲ್ಲ. ಈಗ ನಾವು ಒಂದು ಸಂಕ್ರಮಣ ಕಾಲದಲ್ಲಿದ್ದೇವೆ. ಜನ ನಾಟಕ ಪ್ರಯೋಗಗಳಿಗೆ ಸ್ಪಂದಿಸುತ್ತಿರುವಾಗ, ಕನ್ನಡದಲ್ಲಿ ಸ್ವಂತ ನಾಟಕಗಳು ನಿರೀಕ್ಷಿಸಿದ ಪ್ರಮಾಣದಲ್ಲಿ ಇಲ್ಲ ಎನ್ನುವುದನ್ನು ಒಪ್ಪಿಕೊಂಡು, (ಈ ಒಪ್ಪಿಗೆ, ಕನ್ನಡದಲ್ಲಿ ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಒಳ್ಳೆಯ ನಾಟಕಗಳು ರಚಿತವಾಗಲಿ ಎನ್ನುವ ಉದ್ದೇಶದಿಂದ) ಕನ್ನಡದಲ್ಲಿ ಸ್ವಂತ ನಾಟಕಗಳು ರಚನೆಯಾಗುವಂತೆ ವಾತಾವರಣ ಸೃಷ್ಟಿಯಾಗಬೇಕಾಗಿದೆ. ಈ ಕೆಲಸವನ್ನು ಸರ್ಕಾರ, ಅಕಾದೆಮಿ, ವಿಶ್ವವಿದ್ಯಾನಿಲಯಗಳು ಹಾಗು ಇನ್ನಿತರ ಸಂಸ್ಥೆಗಳು ಮಾಡಬೇಕು. ಈ ಒಂದು ಕೆಲಸಕ್ಕೆ ಅಗತ್ಯವಾದ ಪರಿಸರವನ್ನು ಸೃಷ್ಟಿಸಬೇಕು. ಇಂಥ ಪರಿಸರಗಳು ಬರೆಯುವ ವರಿಗೆ ಉತ್ಸಾಹದಾಯಕವಾಗಿರಬೇಕು. ಹಾಗೆ ಮಾಡಿದಲ್ಲಿ ಕನ್ನಡದಲ್ಲಿ ಇನ್ನು ಮುಂದೆ ಹೆಚ್ಚು ಪ್ರಮಾಣದಲ್ಲಿ ನಾಟಕಗಳು ರಚನೆಯಾಗಲು ಸಾಧ್ಯವಾಗುವು ದೇನೋ! ಇಲ್ಲದಿದ್ದಲ್ಲಿ ನಾಟಕರಚನೆ ಕುಂಠಿತವಾಗುವುದರ ಜತೆಯಲ್ಲೇ ರಂಗ ಚಟುವಟಿಕೆಗಳೂ ಕುಂಠಿತವಾಗುವ ಭಯವಿದೆ.

ಇಲ್ಲಿ ಆಯ್ಕೆಮಾಡಿರುವ ನಾಟಕಗಳ ಬಗೆಗೆ ಒಂದೆರಡು ಮಾತು. ಈ ಸಂಕಲನದಲ್ಲಿ ಸೇರಿರುವ ಏಕಾಂಕಗಳೆಲ್ಲವೂ ಶ್ರೇಷ್ಠ ಏಕಾಂಕಗಳು ಎಂದು ನನ್ನ ಅಭಿಪ್ರಾಯವಲ್ಲ. ಇವು ರಂಗಭೂಮಿ ಬೆಳೆದು ಬಂದ ರೀತಿಯನ್ನು ಗುರುತಿಸುವಲ್ಲಿ, ರಂಗ ಹಾಗೂ ಸಾಹಿತ್ಯಕ್ಷೇತ್ರದಲ್ಲಿ ನುರಿತವರಿಂದ ರಚಿತವಾದ ಉತ್ತಮ ಏಕಾಂಕಗಳು ಇವು ಎನ್ನುವ ಮಾತನ್ನಷ್ಟೆ ಹೇಳಬಯಸುತ್ತೇನೆ. ಅಂದರೆ ರಂಗದ ಒಂದು ನಡೆಯನ್ನು ಹಾಗು ರಂಗವನ್ನು ಗಂಭೀರವಾಗಿ ತೆಗೆದುಕೊಂಡವರನ್ನು ಪ್ರತಿನಿಧಿಸುವ ಸಂಕಲನ ಇದು ಎನ್ನುವ ಮಾತು ಇಲ್ಲಿ ಮುಖ್ಯ.

ಈ ಸಂಗ್ರಹದಲ್ಲಿ ಬೇರೆಯವರ ಏಕಾಂಕಗಳನ್ನೂ ಸೇರಿಸಬಹುದಿತ್ತು, ಇಲ್ಲಿ ಸೇರಿಸಿರುವವರ ಬೇರೆ ಯಾವುದಾದರೂ ಏಕಾಂಕವನ್ನು ಸೇರಿಸಬಹುದಿತ್ತು ಎನ್ನುವ ಮಾತನ್ನು ಯಾರಾದರೂ ಹೇಳಲು ಸಾಧ್ಯ. ಎಲ್ಲ ಸಂಕಲನಗಳೂ ಸಂಪಾದಕನ ವೈಯಕ್ತಿಕ ಅಭಿರುಚಿಯನ್ನು ಅವಲಂಬಿಸಿರುವುದರಿಂದ ಈ ಅಭಿಪ್ರಾಯಭೇದ ಇರಲು ಸಾಧ್ಯ. ಕನ್ನಡ ನಾಟಕ ಸಾಹಿತ್ಯ ಹಾಗು ರಂಗ ಬೆಳೆದು ಬಂದ ರೀತಿ ಯನ್ನು ಗುರುತಿಸುವ ಇದೊಂದು ಪ್ರಾತಿನಿಧಿಕ ಸಂಕಲನ ಎಂದಾಗ, ಇನ್ನೂ ಕೆಲವರು ಈ ದಿಕ್ಕಿನಲ್ಲಿ ಒಳ್ಳೆಯ ಕೆಲಸ ಮಾಡುತ್ತಿರುತ್ತಾರೆ, ಅವರಿಂದಲೂ ಒಳ್ಳೆಯ ನಾಟಕಗಳು ರಚಿತವಾಗುತ್ತಿವೆ ಎಂದು ತಿಳಿಯಬೇಕು.

ಈ ಸಂಕಲನವನ್ನು ಸಿದ್ಧಪಡಿಸಲು ನನಗೆ ಅವಕಾಶ ಮಾಡಿಕೊಟ್ಟವರು ಕೇಂದ್ರ ಸಾಹಿತ್ಯ ಅಕಾದೆಮಿ. ಅದಕ್ಕಾಗಿ ಅವರಿಗೆ ನನ್ನ ವಂದನೆಗಳು ಸಲ್ಲಲೇ ಬೇಕು. ಅಕಾದೆಮಿ ನನಗೆ ಈ ಕೆಲಸ ವಹಿಸಿದರೂ, ಎಲ್ಲ ಹಂತಗಳಲ್ಲೂ ನನಗೆ ಆತ್ಮೀಯತೆಯಿಂದ ಸಹಾಯ ಮಾಡಿರುವವರು ಡಾ. ಹಾ. ಮಾ. ನಾಯಕ ಅವರು. ಅವರ ಸಹಾಯ ದೊಡ್ಡದು ಎಂದಷ್ಟೇ ಹೇಳಬಲ್ಲೆ. ಬೇರೆ ಬೇರೆ ಹಂತಗಳಲ್ಲಿ

ಸಹಾಯ ಮಾಡಿರುವವರು ಡಾ. ಡಿ. ಎ. ಶಂಕರ್, ಶ್ರೀ ಎಚ್. ಕೆ. ರಾಮನಾಥ್ ಹಾಗು ಶ್ರೀ ಹೊರೆಯಾಲ ದೊರೆಸ್ವಾಮಿ. ಇವರುಗಳ ಸಹಾಯಕ್ಕೆ ನಾನು ಕೃತಜ್ಞ. ಈ ಸಂಗ್ರಹವನ್ನು ಸಹೃದಯರು ಮೆಚ್ಚಿಯಾರು ಎಂದು ನಂಬಿದ್ದೇನೆ.

ವಿಶ್ವವಿದ್ಯಾನಿಲಯ ಲಲಿತಕಲಾ ಕಾಲೇಜು
ಮೈಸೂರು ವಿಶ್ವವಿದ್ಯಾನಿಲಯ
ಮಾನಸಗಂಗೋತ್ರಿ
ಮೈಸೂರು—570 009
ಜುಲೈ 10, 1981

ಸಿಂಧುವಳ್ಳಿ ಅನಂತಮೂರ್ತಿ

# ಮುನ್ನುಡಿ

ಕನ್ನಡದಲ್ಲಿ ಆಯ್ದ ನಾಟಕ ಸಂಗ್ರಹಗಳು ಬಹಳವಾಗಿ ಬಂದಿಲ್ಲ. ಮನೋಹರ ಗ್ರಂಥಮಾಲೆ ವಿ. ಕೃ. ಗೋಕಾಕರ ಸಂಪಾದಕತ್ವದಲ್ಲಿ ಪ್ರಕಟಿಸಿರುವ 'ಕೋಲ್ಮಿಂಚು', ದಕ್ಷಿಣ ಭಾರತ ಪುಸ್ತಕ ಸಂಸ್ಥೆ ಶ್ರೀರಂಗ ಹಾಗೂ ನಾ. ಕಸ್ತೂರಿ ಸಂಪಾದಕತ್ವದಲ್ಲಿ ಪ್ರಕಟಿಸಿರುವ 'ಏಕಾಂಕ ಸಂಗ್ರಹ', ಕೇಂದ್ರ ಸಾಹಿತ್ಯ ಅಕಾಡೆಮಿ ಶ್ರೀರಂಗರ ಸಂಪಾದಕತ್ವದಲ್ಲಿ ಪ್ರಕಟಿಸಿರುವ 'ಏಕಾಂಕ ಸಂಗ್ರಹ', ಬೆಂಗಳೂರು ವಿಶ್ವವಿದ್ಯಾನಿಲಯ ಕೆ. ಮರುಳಸಿದ್ದಪ್ಪನವರ ಸಂಪಾದಕತ್ವದಲ್ಲಿ ಪ್ರಕಟಿಸಿರುವ 'ಕನ್ನಡ ನಾಟಕ ವಿಮರ್ಶೆ', ಸುರುಚಿ ಪ್ರಕಾಶನ ಡಾ. ಹಾ. ಮಾ. ನಾಯಕ ಹಾಗೂ ಡಾ. ಸಿಂಧುವಳ್ಳಿ ಅನಂತಮೂರ್ತಿ ಅವರ ಸಂಪಾದಕತ್ವದಲ್ಲಿ ಪ್ರಕಟಿಸಿರುವ 'ಹೊಸ ಸಂವೇದನೆಯ ನಾಟಕಗಳು'—ಇವೇ ಮೊದಲಾದುವು ಈ ವರೆವಿಗೆ ಪ್ರಕಟಗೊಂಡಿರುವ ನಾಟಕ ಸಂಗ್ರಹಗಳಲ್ಲಿ ಮುಖ್ಯವಾದುವು ಎನ್ನಿಸುತ್ತದೆ. 'ಕನ್ನಡ ನಾಟಕ ವಿಮರ್ಶೆ' ಹಾಗೂ 'ಹೊಸ ಸಂವೇದನೆಯ ನಾಟಕಗಳು'—ಉಳಿದ ಸಂಗ್ರಹಗಳಿಗಿಂತ ಬೇರೆಯಾಗಿವೆ. ಉಳಿದವುಗಳು ಕನ್ನಡ ನಾಟಕ ಬೆಳೆದು ಬಂದ ಬಗೆಯನ್ನು ಹಾಗೂ ಸಾಹಿತ್ಯಿಕವಾಗಿ ಮುಖ್ಯವಾದುವುಗಳನ್ನು ಪ್ರತಿನಿಧಿಸುವ ಸಂಗ್ರಹಗಳು ಎಂದು ಹೇಳಿದರೆ ತಪ್ಪಾಗಲಾರದೇನೋ. ಕನ್ನಡ ನಾಟಕದ ಬೆಳವಣಿಗೆಯ ದೃಷ್ಟಿಯಿಂದ ವಸ್ತುವಿನ ವೈವಿಧ್ಯದ ದೃಷ್ಟಿಯಿಂದ, ವಿಮರ್ಶಾತ್ಮಕ ಪರಿಚಯದೊಡನೆ 'ಕನ್ನಡ ನಾಟಕ ವಿಮರ್ಶೆ' ಒಂದು ಬೇರೆ ಬಗೆಯದೇ ಆದ ಸಂಕಲನ. ಕಳೆದ ದಶಕದಲ್ಲಿ ರಂಗಭೂಮಿಯಲ್ಲಿ ಹೊಸ ಬಗೆಯ ಚಟುವಟಿಕೆ ಕಂಡುಬಂದಿತು. ಹೊಸ ವಿಚಾರ, ಆಲೋಚನೆ, ತಂತ್ರ ಇವೇ ಮೊದಲಾದವುಗಳಿಂದ ಕೂಡಿದ ನಾಟಕಗಳು ರಂಗದ ಮೇಲೆ ಪ್ರಯೋಗಗೊಂಡವು. ಈ ದೃಷ್ಟಿಯಿಂದ ರಚಿತವಾದ ನಾಟಕಗಳೇ ಹೊಸ ಬಗೆಯ ನಾಟಕಗಳು. ಇವುಗಳಲ್ಲಿ ಮುಖ್ಯವಾದವುಗಳನ್ನು ಆರಿಸಿ ಸಂಕಲಿರುವ. 'ಹೊಸ ಸಂವೇದನೆಯ ನಾಟಕಗಳು ನಮ್ಮ ನಾಟಕದ ಬೆಳವಣಿಗೆಯನ್ನೂ, ತೀರ ಈಚಿನ ಮಜಲನ್ನೂ ಪ್ರತಿನಿಧಿಸುತ್ತದೆ.

ಪ್ರಕೃತ ಸಂಗ್ರಹ ಈ ವರೆವಿಗೆ ಬಂದ ಎಲ್ಲ ಸಂಗ್ರಹಗಳಿಗಿಂತ ಬೇರೆಯಾಗಿದೆ. ಈ ಸಂಗ್ರಹಕ್ಕೆ ನಾಟಕಗಳನ್ನು ಆಯ್ಕೆ ಮಾಡುವಾಗ ಕನ್ನಡ ನಾಟಕದ ಬೆಳವಣಿಗೆಯನ್ನು ಸಾಹಿತ್ಯಿಕವಾಗಿ ಗಮನಿಸುವುದರ ಜೊತೆಗೆ, ರಂಗದ ಬೆಳವಣಿಗೆಯನ್ನೂ ಗಮನಿಸಿದೆ. ಆದರೆ ಸಂಗ್ರಹ ಏಕಾಂಕಗಳಿಗೇ ಮೀಸಲಾಗಿದೆ. ಏಕಾಂಕ ಎಂದರೇನು? ಈ ಪ್ರಕಾರ ಕನ್ನಡದಲ್ಲಿ ಯಾವಾಗ ಪ್ರಾರಂಭವಾಯಿತು? ಈ ಪ್ರಕಾರಕ್ಕೆ ಬೇರೆ ಬೇರೆ ಸಾಹಿತ್ಯಗಳ ಸ್ಫೂರ್ತಿ ಇದೆಯೇ?—ಇವೇ ಮೊದಲಾದ ವಿಚಾರಗಳನ್ನು ಮುಂದೆ ಸ್ಥೂಲವಾಗಿ ಹೇಳಿದೆ.

ಏಕಾಂಕ ಎನ್ನುವುದೇ ಹೇಳುತ್ತದೆ—'ಒಂದು ಅಂಕದ ನಾಟಕ' ಎಂದು. ಹಾಗೆಂದರೆ ಇದು ಹಲವು ಅಂಕಗಳ ನಾಡಿಕದ ಒಂದು ಭಾಗವಲ್ಲ ಎನ್ನುವುದನ್ನು ತಿಳಿಯಬೇಕು. ಪೂರ್ಣ ಪ್ರಮಾಣದ ನಾಟಕಕ್ಕೆ ಹೇಗೆ ಒಂದು ರೂಪ ಇದೆಯೋ ಹಾಗೆಯೇ ಏಕಾಂಕಕ್ಕೂ ಒಂದು ರೂಪವಿದೆ. ಪೂರ್ಣಪ್ರಮಾಣದ ನಾಟಕದ ವ್ಯಾಪ್ತಿ ದೊಡ್ಡದು; ಪಾತ್ರಗಳ ಸಂಖ್ಯೆ ಹೆಚ್ಚಾಗಿರುತ್ತದೆ; ಒಂದಕ್ಕಿಂತ ಹೆಚ್ಚು ಪಾತ್ರಗಳು ಮುಖ್ಯವಾಗುತ್ತವೆ; ಘಟನೆಗಳ ಸರಪಳಿಯೇ ಇರುತ್ತದೆ. ನಾಟಕದಲ್ಲಿ ಪರಾಕಾಷ್ಠೆ (Climax) ಯನ್ನು ಮುಟ್ಟಬೇಕಾದರೆ ಹೆಚ್ಚಿನ ಅವಧಿ ಬೇಕಾಗುತ್ತದೆ. ಕಥಾಸಂವಿಧಾನದಲ್ಲಿ ವಿಸ್ತಾರವಿದ್ದು, ಪಾತ್ರಗಳು ಹೆಚ್ಚಾಗಿದ್ದು, ಹಲವು ಘಟನೆಗಳಿರುವಾಗ, ಪೂರ್ಣಪ್ರಮಾಣದ ನಾಟಕಗಳನ್ನು ಬೆಳಸಿಕೊಂಡು ಹೋಗಿ, ಅದಕ್ಕೆ ಒಂದು ರೂಪಕೊಡಲು ಸಾಧ್ಯವಿದೆ. ಆದರೆ ಏಕಾಂಕದ ರೂಪಸ್ವರೂಪಗಳೇ ಬೇರೆ.

ಪೂರ್ಣಪ್ರಮಾಣದ ನಾಟಕದಲ್ಲಿರುವಂತೆ ಏಕಾಂಕದಲ್ಲಿಯೂ ವಸ್ತು, ಪಾತ್ರಗಳು, ಸನ್ನಿವೇಶ, ಸಂಭಾಷಣೆ ಇವೆಲ್ಲ ಇದ್ದರೂ ಎಲ್ಲದಕ್ಕೂ ಒಂದೇ ಸಮನಾಗಿ ಒತ್ತು ಇರುವುದಿಲ್ಲ. ಅಂದರೆ ಏಕಾಂಕದಲ್ಲಿನ ಎಲ್ಲ ಅಂಗಗಳಿಗೂ ಒಂದೇ ಸಮನಾಗಿ ಪ್ರಾಮುಖ್ಯತೆ ಇರುವುದಿಲ್ಲ. ಒಂದು ಅಂಗಕ್ಕೆ ಪ್ರಾಮುಖ್ಯತೆ ಇದ್ದರೆ, ಮತ್ತೊಂದು ಅಂಗಕ್ಕೆ ಪ್ರಾಮುಖ್ಯತೆ ಇರುವುದಿಲ್ಲ ಎನ್ನುವುದು ಇಲ್ಲಿನ ಅರ್ಥ. ನಾಟಕ ಬೇಗ ಸಾಗಬೇಕಾಗಿರುವುದರಿಂದ, ಹೇಳಬೇಕಾದ್ದನ್ನೆಲ್ಲ ಸಂಗ್ರಹವಾಗಿ, ಧ್ವನಿಪೂರ್ಣವಾಗಿ ಹೇಳಬೇಕಾಗುತ್ತದೆ. ಪ್ರಧಾನರಸ ಹಾಗೂ ಪೋಷಕರಸಗಳು ಎಂದು ವಿಂಗಡಿಸಿ ಹೇಳಲು ಆಗುವುದಿಲ್ಲ. ನಾಟಕದ ವಸ್ತುವಿಗಿಂತಲೂ ರಚನಾರೀತಿ ಹಾಗೂ ತಂತ್ರ ಕೌಶಲಕ್ಕೆ ಹೆಚ್ಚು ಪ್ರಾಮುಖ್ಯವಿದೆ. ಏಕಾಂಕದಲ್ಲಿ ಹಲವು ಅಂಕಗಳ ನಾಟಕದಲ್ಲಿ ಇದ್ದಂತೆ ಕಥಾಸಂವಿಧಾನದಲ್ಲಿ ವಿಸ್ತಾರವಿಲ್ಲ; ಸನ್ನಿವೇಶವೂ ಒಂದೇ, ಮುಖ್ಯ ಪಾತ್ರವೂ ಒಂದೇ. ಪರಾಕಾಷ್ಠೆಯನ್ನು ಮುಟ್ಟಲು ಹೆಚ್ಚು ಸಮಯವಿರುವುದಿಲ್ಲ. ಉದ್ದುದ್ದ ಸಂಭಾಷಣೆಗಳು ಇರಲು ಸಾಧ್ಯವಿಲ್ಲ. ಸಂಭಾಷಣೆ ಚಿಕ್ಕದಾಗಿದ್ದು, ಅಷ್ಟು ಮಾತುಗಳಲ್ಲೇ ಸತ್ವವಿರಬೇಕಾಗುತ್ತದೆ. ನಾಟಕ ನಿಧಾನವಾಗಿ ಸಾಗದೆ ಬೇಗನೆ ಸಹೃದಯಿಗಳಿಗೆ ಗ್ರಹಿಕೆಯುಂಟಾಗಿ, ನಾಟಕ ಅವರನ್ನು ತನ್ನ ಜೊತೆಯಲ್ಲಿ ಕೊಂಡೊಯ್ಯಬೇಕು. ಎರಡರಿಂದ ಮೂರು ಘಂಟೆಗಳು ಪೂರ್ಣ ಪ್ರಮಾಣದ ನಾಟಕ ಪ್ರಯೋಗಗಳಿಗೆ ಸಿಕ್ಕಿದರೆ, ಏಕಾಂಕಗಳಿಗೆ ಸಿಗುವುದು ಕೇವಲ ಮೂವತ್ತರಿಂದ ನಲವತ್ತೈದು ನಿಮಿಷಗಳು ಮಾತ್ರ. ಹಲವು ಅಂಕಗಳ ನಾಟಕವನ್ನು ನೋಡಿದರೆ ಯಾವ ಪರಿಣಾಮ ಆಗುತ್ತದೋ, ಅದೇ ಪರಿಣಾಮ ಏಕಾಂಕದ ಪ್ರಯೋಗವನ್ನು ನೋಡಿದಾಗಲೂ ಆಗಬೇಕು. ಅಂದಮೇಲೆ ಹಲವು ಅಂಕಗಳ ನಾಟಕವನ್ನು ಬರೆಯುವುದು, ಆಡುವುದು ಸುಲಭವೆಂದಾಗಲಿ, ಏಕಾಂಕವನ್ನು ಬರೆಯುವುದು ಆಡುವುದು ಕಷ್ಟವೆಂದಾಗಲಿ ಅರ್ಥವಲ್ಲ. ಹಲವು ಅಂಕಗಳ ನಾಟಕಗಳನ್ನು ಬರೆಯುವ ಕಲೆ ಒಂದಾದರೆ, ಏಕಾಂಕ ನಾಟಕವನ್ನು ಬರೆಯುವ ಕಲೆಯೇ ಬೇರೆ. ಎರಡರ ಸ್ವರೂಪವೂ ಬೇರೆ ಬೇರೆ ಆಗಿರುವಾಗ ಒಂದನ್ನು ಇನ್ನೊಂದರೊಡನೆ ಹೋಲಿಸುವುದು ಅನುಚಿತವಾಗಬಹುದು.

ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಉದ್ದಕ್ಕೂ ಒಂದು ಕಾಲದಲ್ಲಿ ಸಂಸ್ಕೃತ ಹಾಗೂ ಇನ್ನೊಂದು ಕಾಲದಲ್ಲಿ ಪಾಶ್ಚಾತ್ಯ ಸಾಹಿತ್ಯದ ಪ್ರಭಾವವಿರುವುದನ್ನು ನಾವು ಗಮನಿಸುತ್ತಾ ಬಂದಿದ್ದೇವೆ. ಎಲ್ಲ ಪ್ರಕಾರಗಳ ಮೇಲೆ ಆದಂತೆ ಏಕಾಂಕದ ಮೇಲೂ ಈ ಸಾಹಿತ್ಯಗಳ ಪ್ರಭಾವ ಆಗಿಲ್ಲದೆ ಇಲ್ಲ. ಮೊದಲು ಸಂಸ್ಕೃತದ ಹಿನ್ನೆಲೆಯನ್ನು ನೋಡೋಣ. ಭರತ ದಶರೂಪಕಗಳಲ್ಲಿ ಭಾಣ, ವೀಥಿ, ಅಂಕ, ಪ್ರಹಸನ ಹಾಗೂ ವ್ಯಾಯೋಗ ಎಂಬ ಈ ಐದು ಏಕಾಂಕ ಪ್ರಕಾರಗಳನ್ನು ಹೇಳಿದ್ದಾನೆ. ಆದ್ದರಿಂದ ಭರತನ ಕಾಲಕ್ಕೇ ಏಕಾಂಕ ರೂಪಗೊಂಡಿತ್ತು ಎನ್ನುವುದು ಕಂಡು ಬರುತ್ತದೆ. ಭಾಸನ ದೂತವಾಕ್ಯ, ಮಧ್ಯಮ ವ್ಯಾಯೋಗ, ದೂತಘಟೋತ್ಕಚ, ಕರ್ಣಭಾರ ಹಾಗೂ ಊರುಭಂಗ—ಈ ಐದು ಏಕಾಂಕಗಳು ಪ್ರಸಿದ್ಧವಾಗಿವೆ. ಭಾಸನ ಏಕಾಂಕಗಳನ್ನು ಓದಿದಾಗ ಅವು ಎಲ್ಲ ಕಾಲಕ್ಕೂ ಅನುಕರಣೀಯ ಎಂದು ಹೇಳಬಹುದು.

ಪಾಶ್ಚಾತ್ಯ ಸಾಹಿತ್ಯದಲ್ಲಿ ಪೂರ್ಣಪ್ರಮಾಣದ ನಾಟಕಗಳು ತಮ್ಮ ಸ್ಥಾನವನ್ನು ಗೊತ್ತುಪಡಿಸಿಕೊಳ್ಳುವುದಕ್ಕೆ ಮೊದಲು ಚಿಕ್ಕ ಚಿಕ್ಕ ದೃಶ್ಯಗಳು ಪ್ರಕಟಗೊಂಡಿದ್ದವು. ಅವುಗಳೇ ಮಿಸ್ಟರಿ ಹಾಗೂ ಮಿರಕಲ್ ನಾಟಕಗಳು. ಸಾಧುಸಂತರ ಜೀವನ ಚರಿತ್ರೆ ಹಾಗೂ ಬೈಬಲ್ಲಿನ ಕಥೆಗಳೇ ಈ ದೃಶ್ಯಗಳಿಗೆ ಮೂಲ ಸಾಮಗ್ರಿ. ಧಾರ್ಮಿಕ ಹಿನ್ನೆಲೆಯಲ್ಲಿ ಮೊದಲಿಗೆ ದೃಶ್ಯಗಳಾಗಿ ಕಾಣಿಸಿಕೊಂಡು, ಕಾಲಾನುಕ್ರಮದಲ್ಲಿ ದೃಶ್ಯಮಾಲೆಗಳಾಗಿ ಅಭಿನಯಿಸಲ್ಪಟ್ಟವು. ಧಾರ್ಮಿಕ ವಾತಾವರಣದಲ್ಲೇ ಬಂದ ಈ ದೃಶ್ಯ ಹಾಗೂ ದೃಶ್ಯಮಾಲೆಗಳು ಮುಂದೆ ಲೌಕಿಕವಾಗತೊಡಗಿದವು. ಕಾಲಕ್ರಮೇಣ ಇವಕ್ಕೆ ಒಂದು ಕಲಾಸ್ವರೂಪವೂ ಸಿಕ್ಕಿತು. ಈ ಸ್ವರೂಪದಿಂದ ಮುಂದೆ ಇವುಗಳೇ ಏಕಾಂಕಗಳು ಎನ್ನಿಸಿಕೊಂಡವು. ಏಕಾಂಕಗಳ ಮುಂದಿನ ಬೆಳವಣಿಗೆಯೇ ಹಲವು ಅಂಕಗಳ ನಾಟಕ. ಹದಿನಾರನೇ ಶತಮಾನದಲ್ಲಿ ಆರಂಭವಾದ ಈ ಬೆಳೆ, ಹದಿನೇಳು, ಹದಿನೆಂಟನೆಯ ಶತಮಾನಗಳಲ್ಲಿ ರಂಗಭೂಮಿಯಿಂದ ಮರೆಯಾಯಿತು. ಮತ್ತೆ Curtain raiser ರೂಪದಲ್ಲಿ ಹತ್ತೊಂಬತ್ತನೆಯ ಶತಮಾನದಲ್ಲಿ ಕಾಣಿಸಿಕೊಂಡು, ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿ ಹವ್ಯಾಸಿಗಳ ಪ್ರಯತ್ನ ಹಾಗೂ ಪರಿಶ್ರಮಗಳಿಂದ ತನ್ನ ಸ್ವಂತಿಕೆಯ ಮೂಲಕ ಸಾಹಿತ್ಯ ಹಾಗೂ ರಂಗಭೂಮಿಗಳಲ್ಲಿ ಪ್ರಮುಖ ಸ್ಥಾನವನ್ನು ಪಡೆದುಕೊಂಡಿತು. ಏಕಾಂಕ ನಾಟಕದಲ್ಲೇ ರುದ್ರನಾಟಕ, ಹರ್ಷನಾಟಕ, ಪ್ರಹಸನ ಮೊದಲಾದ ಪ್ರಕಾರಗಳೂ, ಸ್ತ್ರೀಪಾತ್ರಗಳನ್ನು ಮಾತ್ರ ಉಳ್ಳ ನಾಟಕಗಳೂ, ರಂಗ ಹಾಗೂ ಸಾಹಿತ್ಯ ಕ್ಷೇತ್ರದಲ್ಲಿ ಆಸಕ್ತಿ ಉಳ್ಳವರ ಪ್ರಯೋಗಗಳಿಂದ ರೂಪುಗೊಂಡವು. ಬರ್ನಾರ್ಡ್ ಷಾ, ಗಾಲ್ಸ್‌ವರ್ದಿ, ಯೇಟ್ಸ್, ಬ್ಯಾರಿ, ಸಿಂಗ್ ಇವರೇ ಮೊದಲಾದವರು ಏಕಾಂಕಗಳ ರಚನೆ ಹಾಗೂ ಬೆಳವಣಿಗೆಗೆ ಕಾರಣರಾಗಿದ್ದಾರೆ.

ಕನ್ನಡ ಏಕಾಂಕ ಪ್ರಕಾರ ಬಹುಮಟ್ಟಿಗೆ ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದಲೇ ರೂಪುಗೊಂಡದ್ದು. ಕಂಪನಿ ನಾಟಕಗಳಿಂದ ಬೇಸತ್ತಿದ್ದ ಸಮಯದಲ್ಲಿ,

ವಿದ್ಯಾವಂತಜನ ತಾವೂ ನಾಟಕ ಪ್ರಯೋಗಗಳಲ್ಲಿ ಪಾಲ್ಗೊಳ್ಳಬೇಕೆಂಬ ಆಸೆ ಹೊಂದಿದ್ದಾಗ ಪಾಶ್ಚಾತ್ಯ ಸಾಹಿತ್ಯದಲ್ಲಿದ್ದ ಏಕಾಂಕಗಳ ಮಾದರಿಯಲ್ಲಿ ಕನ್ನಡದಲ್ಲಿಯೂ ಏಕಾಂಕಗಳು ರಚಿತವಾದುವು. ಪಾಶ್ಚಾತ್ಯ ಸಾಹಿತ್ಯದಲ್ಲಿ ಇದ್ದಂತೆ ಇಲ್ಲೂ ದೃಶ್ಯ ಹಾಗೂ ದೃಶ್ಯಮಾಲೆಗಳಿವೆ. ಉದಾಹರಣೆಗೆ ಮಾಸ್ತಿ ಅವರ 'ಶಾಂತಾ', 'ಸಾವಿತ್ರಿ', 'ಉಷಾ', ಕುವೆಂಪು ಅವರ 'ಯಮನಸೋಲು', 'ಜಲಗಾರ' ಇವೇ ಮೊದಲಾದ ದೃಶ್ಯಗಳನ್ನೂ ದ. ರಾ. ಬೇಂದ್ರೆಯವರ 'ಉದ್ಧಾರ' ದೃಶ್ಯ ಮಾಲೆಯನ್ನೂ ಇಲ್ಲಿ ಹೆಸರಿಸಬಹುದು. ದೃಶ್ಯ ಅಥವಾ ದೃಶ್ಯಮಾಲೆಯಾಗಿರಲಿ ಇಲ್ಲವೆ ಏಕಾಂಕವಾಗಿರಲಿ ಇವೆಲ್ಲದರ ಉದ್ದೇಶ ಒಂದೇ. ವಸ್ತುನಿರೂಪಣೆಯನ್ನು ಅಲ್ಪಾವಧಿಯಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಮಾಡುವುದು. ಈ ದೃಶ್ಯ ಹಾಗೂ ದೃಶ್ಯಮಾಲೆಗಳನ್ನು ಏಕಾಂಕ ನಾಟಕದ ಮುನ್ಸೂಚನೆ ಎಂದು ಹೇಳಿದರೆ ತಪ್ಪಾಗಲಾರದು. ಕಾಲಕಳೆದಂತೆ, ಈ ಪ್ರಕಾರದಲ್ಲಿ ಹಲವು ಪ್ರಯೋಗಗಳಾದುವು. ದುರಂತ, ಸುಖಾಂತ, ಪ್ರಹಸನ, ಗೀತನಾಟಕಗಳು, ಸಾಮಾಜಿಕ, ಪೌರಾಣಿಕ, ಐತಿಹಾಸಿಕ ಇವೇ ಮೊದಲಾದ ವಸ್ತುಗಳನ್ನು ಆಧರಿಸಿ ರಚನೆಯಾದುವು—ಇದೊಂದು ಘಟ್ಟ.

ಈ ಘಟ್ಟದಲ್ಲಿ ಏಕಾಂಕ ನಾಟಕಗಳನ್ನು ಬರೆಯುವುದರ ಮೂಲಕ ತಮ್ಮ ಕೊಡುಗೆಗಳನ್ನು ನೀಡಿದ ಮೊದಲ ಪಂಕ್ತಿಯ ಸಾಹಿತಿಗಳೆಂದರೆ ಕೈಲಾಸಂ, ಶ್ರೀರಂಗ, ಶಿವರಾಮ ಕಾರಂತ, ದ. ರಾ. ಬೇಂದ್ರೆ, ಸಂಸ, ನಾ. ಕಸ್ತೂರಿ, ಅ. ನ. ಕೃ. ಇವರೇ ಮೊದಲಾದವರು. ಇವರುಗಳ ರಚನೆಗಳಲ್ಲಿ ತಂತ್ರ ಹಾಗೂ ವಸ್ತು ವೈವಿಧ್ಯಗಳನ್ನು ಗುರುತಿಸಬಹುದು. ಸಂಸ ಮೈಸೂರು ಇತಿಹಾಸವನ್ನು ಕುರಿತು 'ಬಿರುದಂತೆಂಬರ ಗಂಡ' ಎಂಬ ನಾಟಕವನ್ನು ರಚಿಸಿದರು. ಭಾಷಾ ಪ್ರಯೋಗದ ದೃಷ್ಟಿಯಿಂದ, ಸನ್ನಿವೇಶ ರಚನೆಯ ದೃಷ್ಟಿಯಿಂದ, ಪ್ರಯೋಗ ತಂತ್ರಗಳ ದೃಷ್ಟಿಯಿಂದ ಈ ನಾಟಕ ಆಕರ್ಷಣೀಯವಾಗಿದೆ. ಅಲ್ಲದೆ ಏಕಾಂಕ ನಾಟಕ ಪ್ರಕಾರಕ್ಕೆ ಒಂದು ಮಾದರಿಯಾಗಿದೆ. ಇದೇ ಸಂದರ್ಭದಲ್ಲಿ ಅ. ನ. ಕೃ. ಅವರ 'ಅನುಗ್ರಹ' ನಾಟಕವನ್ನು ಹೆಸರಿಸಬಹುದು. ಕೈಲಾಸಂ ಹಾಗೂ ಶ್ರೀರಂಗ ಏಕಕಾಲದಲ್ಲಿ ಸಾಮಾಜಿಕ ವಸ್ತುಗಳನ್ನು ಆಯ್ದುಕೊಂಡು ನಾಟಕ ರಚನೆಗೆ ಕೈಹಾಕಿದರು. ಇಬ್ಬರೂ ಪಾಶ್ಚಾತ್ಯ ದೇಶಗಳಿಗೆ ಹೋಗಿ ಬಂದವರು; ಅಲ್ಲಿನ ಸಾಹಿತ್ಯ ಹಾಗೂ ರಂಗಭೂಮಿಗಳಿಂದ ನೇರವಾಗಿ ಪ್ರೇರಿತರಾದವರು. ಕೈಲಾಸಂ ಹಳೆಯ ಮೈಸೂರು ಭಾಗದಲ್ಲಿ ನಿಂತು, ಆ ಭಾಗದ ಮಧ್ಯಮ ವರ್ಗದ ವಿದ್ಯಾವಂತರ ಮನೆ ಮಾತಿನ ಶೈಲಿಯಲ್ಲೇ, ಆ ವರ್ಗದ ಸಮಸ್ಯೆಗಳನ್ನು ಎತ್ತಿಕೊಂಡು ನಾಟಕಗಳನ್ನು ರಚಿಸಿದರು. ಇವರು ಎತ್ತಿಕೊಂಡ ಸಮಸ್ಯೆಗಳು ಅಂದು ಸಾಮಾಜಿಕವಾಗಿ ಪೆಡಂಭೂತಗಳಾಗಿದ್ದವು. ಇವರ ನಾಟಕಗಳ ಪ್ರಯೋಗಗಳು ಅಂದು ಸಾಮಾಜಿಕವಾಗಿ ಹೆಚ್ಚು ಪರಿಣಾಮ ಉಂಟುಮಾಡಿದವು. 'ಟೊಳ್ಳು ಗಟ್ಟಿ', 'ಬಹಿಷ್ಕಾರ', 'ಗಂಡಸ್ಕತ್ರಿ', 'ಬಂಡ್ವಾಳಿಲ್ಲದ ಬಡಾಯಿ', ಇವೇ ಮೊದಲಾದ ನಾಟಕಗಳನ್ನೂ ಇಲ್ಲಿ ಮುಖ್ಯವಾಗಿ ಗಮನಿಸಬಹುದು. ಶ್ರೀರಂಗರು ಉತ್ತರ ಕರ್ನಾಟಕದ ಆಡುಮಾತನ್ನು ಬಳಸಿ,

ಸಮಾಜದ ಪಿಡುಗುಗಳನ್ನು ವಸ್ತುವನ್ನಾಗಿಸಿಕೊಂಡರು. ತಮ್ಮ ಕೆಲವು ನಾಟಕಗಳಿಗೆ ಅವರು ರಾಜಕಾರಣಿಗಳನ್ನೇ, ಸಮಾಜ ಸುಧಾರಕರ ಸೋಗಿನವರನ್ನೇ ಬಳಸಿಕೊಂಡರು. ವ್ಯಂಗ್ಯ ಹಾಗೂ ಹರಿತವಾದ ಮಾತುಗಳಿಂದ ಸಮಾಜವನ್ನು ಚುಚ್ಚಿದರು, ಮೂದಲಿಸಿದರು. ಸಮಾಜದಲ್ಲಿ ಕಾಣುವ ಪರಂಪರಾಗತ ದೋಷಗಳನ್ನು ಎತ್ತಿ ತೋರಿಸಿದರು. ಈ ಸಂದರ್ಭದಲ್ಲಿ ಅವರ 'ಸಂಪದ್ಧರ್ಮ', 'ಊರ್ಧ್ವಮೂಲ, ಅಧಃಶಾಖ', 'ನಿರುತ್ತರ ಕುಮಾರ' ಇವೇ ಮೊದಲಾದ ನಾಟಕಗಳನ್ನು ಹೆಸರಿಸಬಹುದು. ಕೈಲಾಸಂ, ಶ್ರೀರಂಗರಂತೆಯೇ, ಕವಿ ದ. ರಾ. ಬೇಂದ್ರೆ ಕೂಡ ತಮ್ಮ ವ್ಯಂಗ್ಯ ಧ್ವನಿಗಳ ಮೂಲಕ, ಹಾಸ್ಯದ ಮೂಲಕ ಸಮಾಜವನ್ನು ತಿದ್ದುವ, ಗೇಲಿ ಮಾಡುವ ನಾಟಕಗಳನ್ನು ಬರೆದರು; ಅಣಕಿಸಿದರು. ಅವರ 'ಜಾತ್ರೆ', 'ಸಾಯೋ ಆಟ' ಮೊದಲಾದ ಏಕಾಂಕಗಳನ್ನು ಇದಕ್ಕೆ ಉದಾಹರಣೆಗೆಂದು ನೋಡಬಹುದು. ಬೇಂದ್ರೆ, ಶ್ರೀರಂಗ, ಕೈಲಾಸಂ ತಮ್ಮ ಏಕಾಂಕಗಳಿಗೆ ಗದ್ಯವನ್ನು ಮಾಧ್ಯಮವಾಗಿ ಬಳಸಿಕೊಂಡರೆ, ಶಿವರಾಮ ಕಾರಂತರು ಗೀತವನ್ನೇ ಮಾಧ್ಯಮವನ್ನಾಗಿ ಬಳಸಿಕೊಂಡು ನಾಟಕಗಳನ್ನು ರಚಿಸಿದರು. ಗೀತರೂಪಕಗಳ ಒಂದು ಪರಂಪರೆಯನ್ನೇ ಆರಂಭಿಸಿದರು. ನಾಟಕದಲ್ಲಿ ಗದ್ಯಕ್ಕಿಂತಲೂ ಕೆಲವು ಸಾರಿ ಗೀತಮಾಧ್ಯಮ ಹೆಚ್ಚು ಪರಿಣಾಮಕಾರಿಯಾಗಬಲ್ಲುದು. ಅದು ನಾಟಕದ ವಸ್ತುವನ್ನೂ ಅವಲಂಬಿಸಿರುತ್ತದೆ. ಹೆಚ್ಚು ಭಾವ ತೀವ್ರತೆಯನ್ನುಂಟುಮಾಡುವ ವಸ್ತುವಾಗಿದ್ದಲ್ಲಿ ಗೀತಮಾಧ್ಯಮ ಏಕಾಗ್ರತೆಯನ್ನು ಪರಿಣಾಮಕಾರಿಯಾಗಿ ತರಬಲ್ಲುದು. ಉದಾಹರಣೆಗೆ 'ಕಿಸಾಗೌತಮಿ', 'ಸೋಮಿಯ ಸೌಭಾಗ್ಯ' ಇವೇ ಮೊದಲಾದುವನ್ನು ನೆನೆಸಬಹುದು. ಶಿವರಾಮ ಕಾರಂತರಂತೆಯೇ ಪು. ತಿ. ನ. ಗೀತ ನಾಟಕಗಳನ್ನು ರಚಿಸಿದ್ದಾರೆ. ಇವರು ಸಾಮಾನ್ಯವಾಗಿ ಪೌರಾಣಿಕ ವಸ್ತುಗಳನ್ನೇ ತಮ್ಮ ನಾಟಕಗಳಿಗೆ ವಸ್ತುವನ್ನಾಗಿ ಮಾಡಿಕೊಂಡಿದ್ದಾರೆ. ಇವುಗಳಲ್ಲಿ ಸಂಗೀತಕ್ಕೆ ಪ್ರಾಧಾನ್ಯವಿದ್ದು ಭಾವತೀವ್ರತೆಯನ್ನು ಸಶಕ್ತವಾಗಿ ಉಳಿಸಿಕೊಳ್ಳಲಾಗಿದೆ. 'ಹರಿಣಾಭಿಸರಣ', 'ಶಬರಿ' ಮೊದಲಾದ ನಾಟಕಗಳನ್ನು ಈ ಸಂದರ್ಭದಲ್ಲಿ ಹೆಸರಿಸಬಹುದು. ಕುವೆಂಪು ಅವರ ಪದ್ಯನಾಟಕಗಳು ತೀರ ಸಂಗೀತಮಯವೂ ಆಗದೆ, ತೀರ ಗದ್ಯವೂ ಆಗದೆ ಸರಳ ರಗಳೆಯಲ್ಲಿರುವ ಏಕಾಂಕ ನಾಟಕಗಳು. ವಸ್ತುವನ್ನು ಸುಂದರವಾಗಿ, ಸರಳವಾಗಿ ನಿರೂಪಿಸುತ್ತವೆ. ಉದಾಹರಣೆಗೆ, 'ಯಮನಸೋಲು', 'ವಾಲ್ಮೀಕಿಯ ಭಾಗ್ಯ' ಇವೇ ಮೊದಲಾದುವು.

ಮೇಲೆ ತಿಳಿಸಿರುವ ನಾಟಕಕಾರರೇ ಅಲ್ಲದೆ ಇನ್ನೂ ಹಲವರು ಕನ್ನಡದಲ್ಲಿ ಏಕಾಂಕ ರಚನೆಗೆ ಕೈಹಾಕಿದರು. ಇವರುಗಳೆಲ್ಲರೂ ಹೆಚ್ಚಾಗಿ ಸಾಮಾಜಿಕ ವಸ್ತುಗಳನ್ನೇ ತಮ್ಮ ನಾಟಕಗಳಿಗೆ ಆಯ್ಕೆ ಮಾಡಿಕೊಂಡರು. ಸ್ಕೂಲು, ಕಾಲೇಜು ಹಾಗೂ ಇನ್ನಿತರ ಸಂಘ ಸಂಸ್ಥೆಗಳಲ್ಲಿ ಈ ಬಗೆಯ ಏಕಾಂಕಗಳು ಪ್ರಯೋಗಿಸಲ್ಪಟ್ಟವು. ಸಾಮಾನ್ಯವಾಗಿ ತಿಳಿಹಾಸ್ಯ ಪ್ರಧಾನವಾದ ಸಾಮಾಜಿಕ ಸಮಸ್ಯೆಗಳನ್ನು ಚಿತ್ರಿಸುವ ಏಕಾಂಕಗಳನ್ನೇ ಆ ದಿನಗಳಲ್ಲಿ ಎಲ್ಲೆಲ್ಲೂ ನೋಡಬಹುದಾಗಿದ್ದಿತು. ಈ ನಾಟಕಗಳನ್ನು

ಅಂದು ಆಡಲು ಕಷ್ಟವೇ ಆಗುತ್ತಿರಲಿಲ್ಲ. ಸಾಹಿತ್ಯದ ದೃಷ್ಟಿಯಿಂದ ಸರಳವಾದ ನಾಟಕ. ತಂತ್ರಪ್ರಧಾನವಿಲ್ಲದ್ದರಿಂದ, ಹೆಚ್ಚಿನ ರಂಗಸಲಕರಣೆಗಳೇನೂ ಈ ನಾಟಕಗಳನ್ನು ಆಡಲು ಬೇಕಿರಲಿಲ್ಲ. ನಿರ್ದೇಶಕನ ಪಾತ್ರವೂ ಇಲ್ಲ. ಸರಳವಾದ, ನೇರವಾದ ನಾಟಕ. ಹೀಗೆ ರಚನೆಯಾದ ಪ್ರದರ್ಶನಗೊಂಡ ನಾಟಕಗಳು ಸ್ವತಂತ್ರವೂ ಹೌದು, ರೂಪಾಂತರಗಳೂ ಹೌದು. ಅಷ್ಟಾಗಿ ಅನುವಾದಿತ ನಾಟಕಗಳು ಈ ಬಗೆಯವು ಆಗಿರಲಿಲ್ಲ. ಸ್ವತಂತ್ರ ನಾಟಕಗಳು ರಚನೆ ಆಗುವುದರ ಜೊತೆಗೆ, ಅದೇ ಮಾದರಿಯ ಪಾಶ್ಚಾತ್ಯನಾಟಕಗಳು ನಮ್ಮ ಸಮಾಜಕ್ಕೆ ಒಗ್ಗುವ ರೀತಿಯಲ್ಲಿ ರೂಪಾಂತರಗೊಂಡು ರಂಗದ ಮೇಲೆ ಬಂದವು. ಆ ದಿಕ್ಕಿನಲ್ಲಿ ಕೆಲಸ ಮಾಡಿದ ಮುಖ್ಯ ನಾಟಕಕಾರರೆಂದರೆ ವರ್ತವಾಣಿ, ಎನ್ಕೆ, ಕ್ಷೀರಸಾಗರ, ಕೈವಾರ ರಾಜಾರಾವ್, ಎ. ಎಸ್. ಮೂರ್ತಿ, ನಾ. ಕಸ್ತೂರಿ, ಟಿ. ಸುನಂದಮ್ಮ, ದಾಶರಥಿ ದೀಕ್ಷಿತ್, ಎಚ್. ಕೆ. ರಂಗನಾಥ್, ಎಸ್. ಎನ್. ಶಿವಸ್ವಾಮಿ—ಇವರೇ ಮೊದಲಾದವರು.

1960 ರಿಂದ ಈಚೆಗೆ ರಂಗಭೂಮಿಯಲ್ಲಿ ಬಹಳವಾಗಿ ಬದಲಾವಣೆ ಆಗಿದೆ ಅಲ್ಲಿಯವರೆಗೆ ಸಾಹಿತ್ಯಕೃತಿಯಾಗಿ ನಾಟಕಕ್ಕೆ ಒತ್ತು ಇದ್ದಿತೇ ಹೊರತು, ರಂಗ ಕೃತಿಯಾಗಿ ಇರಲಿಲ್ಲ. ಈಗ ನಾಟಕಕಾರನ ಜತೆಗೆ ನಿರ್ದೇಶಕನೂ ಕಾಣಿಸಿಕೊಂಡ. ಈ ದಶಕದಲ್ಲಿ, ಇತರ ಎಲ್ಲ ಸಾಹಿತ್ಯ ಪ್ರಕಾರಗಳಿಗಿಂತ ನಾಟಕ ರಚನೆಯಲ್ಲಿ ಹೊಸತನ ಹೆಚ್ಚಾಗಿ ಕಂಡುಬಂದಿತು ಎಂದು ಹೇಳಬಹುದು. ಎಂದಿನಂತೆ ಪಾಶ್ಚಾತ್ಯ ಪ್ರಭಾವ ನಮ್ಮ ನಾಟಕಕಾರರನ್ನು ಚೆನ್ನಾಗಿಯೇ ಆವರಿಸಿತು. ನಮ್ಮ ಬಹುಪಾಲು ನಾಟಕಕಾರರು ವಿದ್ಯಾವಂತ ಮಧ್ಯಮವರ್ಗದ ಜನ. ಇವರಿಗೆ ಹಿಂದಿನಿಂದ ಬಂದ ನಂಬಿಕೆಗಳ ಮೇಲಾಗಲಿ, ಮೌಲ್ಯಗಳ ಮೇಲಾಗಲಿ ಅಷ್ಟಾಗಿ ಶ್ರದ್ಧೆಯಿಲ್ಲ. ಕಾರಣ: ಇವು ಅವರ ಪಾಲಿಗೆ ಕೇವಲ ಅರ್ಥಹೀನ. ಈ ಹೊತ್ತಿನ ರಾಜಕೀಯ ಹಾಗೂ ಆರ್ಥಿಕ ಪರಿಸ್ಥಿತಿ, ಸಾಮಾಜಿಕ ಸ್ಥಿತಿಗತಿ, ಲೈಂಗಿಕ ಸಮಸ್ಯೆ ಇವೇ ಮೊದಲಾದವುಗಳ ಹಿನ್ನೆಲೆಯಲ್ಲಿ ನಾಟಕಕಾರರ ದೃಷ್ಟಿಯೇ ಬೇರೆಯಾಯಿತು. ಆದ್ದರಿಂದ ಈ ಹೊತ್ತು ನಾಟಕಗಳನ್ನು ರಚನೆ ಹಾಗೂ ಪ್ರಯೋಗದ ದೃಷ್ಟಿಯಿಂದ ಬೇರೆ ಬೇರೆಯಾಗಿ ನೋಡಬೇಕಾಗಿದೆ. ಹಿಂದೆಂದಿಗಿಂತಲೂ ನಾಟಕ ರಚನೆಯಲ್ಲಿ ವೈವಿಧ್ಯ ಹಾಗೂ ಸಂಕೀರ್ಣತೆಯನ್ನು ಈ ಅವಧಿಯಲ್ಲಿ ಕಾಣಬಹುದಾಗಿದೆ.

ನಾಟಕಕಾರರ ಮೇಲೆ ಪಾಶ್ಚಾತ್ಯ ಸಾಹಿತ್ಯದ ಪ್ರಭಾವ ಹಾಗೂ ಸುತ್ತಲಿನ ಪರಿಸರದ ಪ್ರಭಾವಗಳ ಪರಿಣಾಮವಾಗಿ ನವ್ಯನಾಟಕಗಳು ರಚನೆಯಾದವು. ಈ ನಾಟಕಗಳಲ್ಲಿ ಪ್ರಧಾನವಾಗಿ ಕಾಣುವುದು ಅಸಂಗತ ತತ್ವದ ಪ್ರಭಾವ. ಈ ನಾಟಕಗಳಲ್ಲಿ ಪ್ರೇಕ್ಷಕರಿಗೆ ಮುಂದೆ ಏನಾಗುತ್ತದೆ ಎಂಬುದರ ಕುತೂಹಲವಿಲ್ಲದೆ ನಾಟಕ ಏನನ್ನು ಹೇಳುತ್ತದೆ, ಅರ್ಥೈಸುತ್ತದೆ ಎಂಬುದರ ಬಗ್ಗೆ ಕುತೂಹಲ ವುಂಟಾಗುತ್ತದೆ. ಈ ಕುತೂಹಲ ನಾಟಕ ಮುಗಿದ ನಂತರವೂ ಇರುತ್ತದೆ. ಇದು ಪ್ರೇಕ್ಷಕನಿಂದ ಪ್ರೇಕ್ಷಕನಿಗೆ ಬೇರೆ ಬೇರೆಯಾದ ಅರ್ಥವನ್ನು ಕೊಡುವ, ಸಮಸ್ಯೆಗಳಿಗೆ

ಬೇರೆ ಬೇರೆಯಾದ ಪರಿಹಾರಗಳನ್ನು ಸೂಚಿಸುವ ಬುದ್ಧಿ ನಾಟಕರಂಗವಾಗಿದೆ. ಈ ನಾಟಕ ಪಂಥಕ್ಕೆ ಒಳಗಾದವರು ಹೆಚ್ಚಿಗೆ ಏಕಾಂಕಗಳನ್ನೇ ಬರೆದರು ಎನ್ನುವುದು ಗಮನಾರ್ಹವಾಗಿದೆ. ಪಿ. ಲಂಕೇಶ, ಚಂದ್ರಶೇಖರ ಪಾಟೀಲ, ಚಂದ್ರಕಾಂತ ಕುಸನೂರ, ನ. ರತ್ನ ಇವರೇ ಮೊದಲಾದವರ ನಾಟಕಗಳು ಈ ಪ್ರಕಾರದಲ್ಲಿ ಮುಖ್ಯವಾಗಿವೆ. ಶ್ರೀರಂಗ, ಚಂದ್ರಶೇಖರ ಕಂಬಾರ, ಗಿರೀಶ ಕಾರ್ನಾಡ ಇವರುಗಳು ಹೊಸ ಸಂವೇದನೆಯ ಪೂರ್ಣಪ್ರಮಾಣದ ನಾಟಕಗಳನ್ನೂ ಏಕಾಂಕಗಳೊಡನೆ ರಚಿಸಿದ್ದಾರೆ. ಇವರೆಲ್ಲರ ನಾಟಕಗಳಲ್ಲಿ ವಸ್ತು, ವ್ಯಾಖ್ಯಾನ ಹಾಗೂ ತಂತ್ರದ ದೃಷ್ಟಿಯಿಂದ ಹೊಸತನವನ್ನು ನೋಡಲು ಸಾಧ್ಯವಿದೆ. ಇಲ್ಲಿಯೇ ಅವರು ರಚನೆಯ ದೃಷ್ಟಿಯಿಂದ ಒಂದು ಮೆಟ್ಟಲು ಮುಂದೆ ಹೋಗಿರುವುದನ್ನೂ ಕಾಣಬಹುದಾಗಿದೆ. ಅಸಂಗತ ತತ್ವದ ತಳಹದಿಯ ಮೇಲೆ ನಾಟಕಗಳು ರಚನೆಯಾಗುತ್ತಿದ್ದಂತೆಯೇ ಪಾಶ್ಚಾತ್ಯ ಸಾಹಿತ್ಯದ ಪ್ರಭಾವದ ಜೊತೆಗೆ, ನಮ್ಮದೇ ಆದ ಜನಪದ ರಂಗಭೂಮಿಯ ವಿವಿಧ ಪ್ರಕಾರಗಳ ಪ್ರಭಾವದ ಪರಿಣಾಮದಿಂದ ನಮ್ಮ ನಾಟಕಕಾರರು ಎಪಿಕ್ ಥಿಯೇಟರ್ ಮಾದರಿಯ ನಾಟಕಗಳನ್ನು ಬರೆಯತೊಡಗಿದರು. ಅವುಗಳೆಂದರೆ ಕಂಬಾರರ 'ಜೋಕುಮಾರಸ್ವಾಮಿ', ಕಾರ್ನಾಡರ 'ಹಯವದನ' ಇವೇ ಮೊದಲಾದುವು.

ಎಂಬತ್ತರ ದಶಕದ ಹೊತ್ತಿಗೆ ಅಸಂಗತ ನಾಟಕಗಳ ರಚನೆ ನಿಲ್ಲತೊಡಗಿ ಈ ಹೊತ್ತು ಆ ಪ್ರಕಾರದಲ್ಲಿ ನಾಟಕಗಳೇ ರಚನೆಯಾಗುತ್ತಿಲ್ಲ ಎಂದು ಹೇಳಬಹುದು. ಈ ಪ್ರಕಾರಗಳಲ್ಲಿ ಬಂದ ನಾಟಕಗಳ ಸಂಖ್ಯೆ ಕಡಿಮೆಯಾದರೂ, ವೈಯಕ್ತಿಕವಾಗಿ ಹಾಗೂ ಸಾಹಿತ್ಯಿಕವಾಗಿ ಕೆಲವು ಒಳ್ಳೆಯ ಅಸಂಗತ ನಾಟಕಗಳು ಬಂದಿವೆ. ಅಸಂಗತ ನಾಟಕಗಳ ರಚನೆ ನಿಲ್ಲಲು ಪಾಶ್ಚಾತ್ಯ ಎಪಿಕ್ ಥಿಯೇಟರ್ ಹಾಗೂ ನಮ್ಮ ಜಾನಪದ ಪ್ರಕಾರಗಳ ಪ್ರಭಾವ ನಾಡಿನ ನಾಟಕಕಾರರು ಹಾಗೂ ಪ್ರೇಕ್ಷಕರ ಮೇಲೆ ಆಗಿರುವುದೂ ಕಾರಣವಿರಬಹುದು. ಎಪಿಕ್ ಥಿಯೇಟರ್ ಮಾದರಿಯ ಸ್ವತಂತ್ರ ನಾಟಕಗಳು ಕನ್ನಡದಲ್ಲಿ ಹೆಚ್ಚಾಗಿ ಬರದಿದ್ದರೂ, ಬಂದವು ಓದುಗರ ಮೇಲೆ, ಅದಕ್ಕಿಂತ ಹೆಚ್ಚಾಗಿ ಪ್ರೇಕ್ಷಕರ ಮೇಲೆ ಬಹಳ ಪರಿಣಾಮವನ್ನುಂಟುಮಾಡಿವೆ. ಹಾಡು, ಮಾತು, ಕುಣಿತಗಳಿಂದ ಕೂಡಿದ, ನಮ್ಮ ಜೀವನಕ್ಕೆ ಹತ್ತಿರವಾದ ನಾಟಕಗಳು ನಮ್ಮ ಅಭಿರುಚಿ, ಸಂವೇದನೆಗಳಿಗೆ ಹತ್ತಿರವಾಗಿ ನಿಂತಿವೆ ಎನ್ನುವುದು ಈಗ ಸ್ಪಷ್ಟವಾಗಿದೆ.

ಅರವತ್ತರಿಂದ ಎಂಬತ್ತರ ದಶಕದಲ್ಲೇ ಕನ್ನಡ ರಂಗಭೂಮಿಯಲ್ಲಿ ಬೀದಿ ನಾಟಕಗಳೂ ನಮ್ಮ ಗಮನ ಸೆಳೆದಿವೆ. ಎಲ್ಲ ಬಗೆಯ ನಾಟಕ ಪ್ರಕಾರಗಳಂತೆ ಬೀದಿ ನಾಟಕಗಳ ಮೇಲೂ ಪಾಶ್ಚಾತ್ಯ ಪ್ರಭಾವವಿದೆ. ಹಾಗೆಯೇ ನಮ್ಮ ಜಾನಪದ ಪ್ರಕಾರಗಳಾದ 'ದೊಂಬರಾಟ', 'ಕೋಲೆ ಬಸವನ ಆಟ' ಮೊದಲಾದ ಆಟಗಳ ಪ್ರಭಾವವಿರಲು ಸಾಕು. ಈ ಪ್ರಕಾರ ಬಂದ ಹೊಸತರಲ್ಲಿ ಸ್ವಲ್ಪ ವಿಚಿತ್ರವಾಗಿ ಕಾಣಿಸಿರಬೇಕು. ಮೇಲಿಂದ ಮೇಲೆ ಪ್ರಯೋಗಗಳು ಆದಮೇಲೆ ಜನ ಬೀದಿ

ನಾಟಕಗಳನ್ನು ಒಪ್ಪಿಕೊಂಡಿದ್ದಾರೆ. ಈ ಪ್ರಕಾರದ ನಾಟಕಗಳಿಗೆ ಒದಗುವ ಪ್ರೇಕ್ಷಕರು ಸಂಖ್ಯೆಯ ಹಾಗೂ ಪ್ರತಿಕ್ರಿಯೆಯ ದೃಷ್ಟಿಯಿಂದ ಬೇರೆಯೇ ಆಗಿರುತ್ತಾರೆ. ಈ ನಾಟಕಗಳನ್ನು ಆಸೆಯಿಂದ ನೋಡಲು ಬರುವವರು ಜನಸಾಮಾನ್ಯರು. ಮೇಲುವರ್ಗದವರಿಗೆ ಏನಿದ್ದರೂ ಕುತೂಹಲ, ಅಷ್ಟೆ. ತಮ್ಮ ಜೀವನಕ್ಕೆ, ಪರಿಸರಕ್ಕೆ ಹೊಂದುವಂತಹ ನಾಟಕಗಳಾದರೆ ಅಂತಹ ಪ್ರಯೋಗಗಳಿಗೆ ಪ್ರೇಕ್ಷಕರು ಸ್ಪಂದಿಸುತ್ತಾರೆ. ವಸ್ತುವಿನ ಆಯ್ಕೆ ಬಹುಸಂದರ್ಭಗಳಲ್ಲಿ ತೀರ ಸಮಕಾಲೀನ ಮಾತ್ರವಲ್ಲ ದೈನಂದಿನ ಕೂಡ. ಶಿಷ್ಟನಾಟಕಗಳು ಯಾವ ಬಗೆಯ ರಂಗ ಸಿದ್ಧತೆಗಳಿಂದ ಕೂಡಿ ಪ್ರಯೋಗಗೊಳ್ಳುತ್ತವೆಯೋ, ಆ ಬಗೆಯಲ್ಲಿ ಬೀದಿ ನಾಟಕಗಳು ಪ್ರಯೋಗಗೊಳ್ಳುವುದಿಲ್ಲ. ಸರಳ ರಂಗಸಜ್ಜಿಕೆ ಹಾಗೂ ಸಲಕರಣೆಗಳೊಂದಿಗೆ ಬೀದಿ ನಾಟಕಗಳನ್ನು ಆಡಬೇಕು. ಕಾರಣ : ನಾಟಕದ ವಸ್ತು, ಸಿದ್ಧತೆಗೆ ಸಿಗುವ ಸಮಯ, ಪ್ರಯೋಗದ ಸ್ಥಳ ಇವೇ ಮೊದಲಾದವುಗಳನ್ನು ಈ ಪ್ರಯೋಗಗಳು ಅವಲಂಬಿಸಿರುತ್ತವೆ. ಅನೇಕ ಸಲ ಇವು ಆಶುನಾಟಕಗಳೂ ಆಗಿರುತ್ತವೆ. ಮೇಲಿನ ವಿವರಣೆಗಳಿಗೆ ಅನುಗುಣವಾಗಿ ನಮ್ಮಲ್ಲಿ ಬೀದಿ ನಾಟಕಗಳು ಪ್ರಯೋಗವಾಗುತ್ತಾ ಬಂದಿವೆ. ಎ. ಎಸ್. ಮೂರ್ತಿ, ವಿಜಯಾ ಇವರೇ ಮೊದಲಾದವರ ನಾಟಕಗಳನ್ನು ಬೆಂಗಳೂರಿನ ನಾನಾ ಭಾಗಗಳಲ್ಲಿ ಅಂದರೆ ವಿವಿಧ ಅಭಿರುಚಿ, ವಿವಿಧ ಪರಿಶ್ರಮ, ಅನುಭವ ಇರುವ ಜನಗಳ ನಡುವೆ ಪ್ರಯೋಗಿಸಿ ಬೆಂಗಳೂರಿನ ಚಿತ್ರಾ ನಾಟಕ ತಂಡ ಜನಮೆಚ್ಚುಗೆ ಪಡೆದಿದೆ. ಹಾಗೆಯೇ ಅವರು ತಮ್ಮ ಈ ಬಗೆಯ ನಾಟಕಗಳನ್ನು ಮೈಸೂರು, ಉಡುಪಿ, ಕುಶಾಲನಗರ, ಹಾಸನ, ಮಂಡ್ಯ, ಚನ್ನಪಟ್ಟಣ ಇವೇ ಮೊದಲಾದ ಊರಿನ ಬೇರೆ ಬೇರೆ ಸ್ಥಳಗಳಲ್ಲಿ ಆಡಿ ಬಗೆಬಗೆಯ ಜನರಿಂದ ವೈವಿಧ್ಯಮಯ ಪ್ರತಿಕ್ರಿಯೆಗಳನ್ನು ಪಡೆದುಕೊಂಡಿದ್ದಾರೆ. ಇದೇ ದಿಕ್ಕಿನಲ್ಲಿ ಗಮನಾರ್ಹವಾಗಿ ಕೆಲಸ ಮಾಡಿರುವ ಮತ್ತೊಂದು ತಂಡವೆಂದರೆ ಸಮುದಾಯ ಇವರೂ ಕೂಡ ನಾಡಿನ ಬೇರೆ ಬೇರೆ ಕಡೆಗಳಲ್ಲಿ ನಾಟಕಗಳನ್ನು ಪ್ರಯೋಗಿಸಿ ಜನರನ್ನು ಎಚ್ಚರಿಸಿದ್ದಾರೆ. ರಾಜಕೀಯವಾಗಿ, ಸಾಮಾಜಿಕವಾಗಿ ಆಗುವ ಅನ್ಯಾಯಗಳನ್ನು ಜನತೆಯ ಮುಂದೆ ಇಟ್ಟು ಕಣ್ಣು ತೆರೆಯುವಂತೆ ಮಾಡಿದ್ದಾರೆ. ಇವರ ಪ್ರಯೋಗಗಳಲ್ಲಿ 'ಬೆಲ್ಚಿ', 'ಪತ್ರಿ ಸಂಗಪ್ಪನ ಕೊಲೆ', 'ಫಸ್ನಾ' ಮುಂತಾದ ನಾಟಕಗಳನ್ನು ಉದಹರಿಸಬಹುದು. ಬೀದಿ ನಾಟಕಗಳನ್ನು ಪ್ರಯೋಗಿಸಲು ಹೊರಟಿರುವ ಮತ್ತೊಂದು ಮುಖ್ಯ ತಂಡವೆಂದರೆ ರಾಗ್ ಕಲಾವಿದರು. ಅನಕ್ಷರಸ್ಥರೇ ತುಂಬಿರುವ, ಸಾಮಾನ್ಯರಲ್ಲಿ ಎಚ್ಚರ ಮೂಡಿಸುವ ಅಗತ್ಯವಿರುವ ನಾಡಿನಲ್ಲಿ ಇಂಥ ನಾಟಕಗಳು ಪರಿಣಾಮಕಾರಿಯಾಗಿ ಕೆಲಸ ಮಾಡಬಲ್ಲವು ಎನ್ನುವುದು ವಾಸ್ತವ ಸಂಗತಿ. ಇವು ನಿತ್ಯಜೀವನದ ಸಂಕಷ್ಟಗಳ ನಿವಾರಣೆಗೆ ಮದ್ದನ್ನು ಒದಗಿಸಬಲ್ಲವು, ಸಾಮಾನ್ಯರನ್ನು ಆಲೋಚನೆಗೆ ಹಚ್ಚಬಲ್ಲವು, ಸ್ವಾರ್ಥಸಾಧಕರನ್ನು ಬಯಲಿಗೆ ಎಳೆಯಬಲ್ಲವು ಎನ್ನುವುದೂ ನಿಜವೇ. ಒಟ್ಟಿನಲ್ಲಿ ಸಾಮಾನ್ಯರಿಗೆ ಸುಲಭವಾಗಿ ತಿಳಿವಳಿಕೆ ಕೊಡುವ ನಾಟಕಗಳಿವು. ಎಂದಿನಂತೆ ರಂಗಮಂದಿರದಲ್ಲಿ ಆಗುವ ಶಿಷ್ಟ ಪ್ರಯೋಗಗಳಿಗೆ, ಸಾಮಾನ್ಯರು ಹಾಗೂ ಅವರಿಗಿಂತ ಕೆಳಗಿನವರು ಹೋಗರು.

ತಾವಾಗಿಯೇ ಬಯಸಿ ವಿಚಾರ ಪ್ರಚೋದನೆ ಮಾಡುವಂಥ, ಬುದ್ಧಿಯನ್ನು ಕೆಣಕುವಂಥ, ನಮ್ಮ ಸುತ್ತುಮುತ್ತು ಏನೆಲ್ಲಾ ಅನ್ಯಾಯ ನಡೆಸಿ, ನಮ್ಮನ್ನು ಶೋಷಣೆ ಮಾಡುವವರನ್ನು ಪರಿಚಯ ಮಾಡಿಕೊಡುವ ನಾಟಕಗಳನ್ನು ನೋಡಲು ಅವರು ಹುಡುಕಿಕೊಂಡು ಹೋಗುವುದಿಲ್ಲ. ಅನಾಯಾಸವಾಗಿ, ತಾವು ಇರುವಲ್ಲೇ ನಾಟಕ ಆದಾಗ ಅವರು ಕುತೂಹಲಕ್ಕಾದರೂ ಹೋಗಿ ನೋಡುತ್ತಾರೆ. ಈ ಬಗೆಯ ನಾಟಕಗಳಿಗೆ ಮೊದಲು ಮೂಗು ಮುರಿದ ಜನ ಆಮೇಲೆ ಮೆಚ್ಚುತ್ತಾರೆ; ಕಣ್ಣು ತೆರೆಯುತ್ತಾರೆ. ಈ ದಿಸೆಯಲ್ಲಿ ಬೀದಿ ನಾಟಕಗಳು ಹೆಚ್ಚು ಪರಿಣಾಮಕಾರಿಯಾಗಿ ಕೆಲಸ ಮಾಡಿವೆ ಎಂಬ ಮೆಚ್ಚುಗೆಯನ್ನು ವ್ಯಕ್ತಪಡಿಸಲೇಬೇಕಾಗಿದೆ. ನಮ್ಮ ಪರಿಸರದಲ್ಲಿ ಬೀದಿ ನಾಟಕಗಳು ಇನ್ನೂ ಪರಿಣಾಮಕಾರಿಯಾದ ಪಾತ್ರವಹಿಸುವುದು ಸಾಧ್ಯ.

ಮೂಕ ನಾಟಕಗಳು ಕನ್ನಡ ಜಾಯಮಾನಕ್ಕೇ ಹೊಸದು. ಕಂಪನಿ ನಾಟಕಗಳ ಉಚ್ಛ್ರಾಯ ಕಾಲದಲ್ಲಂತೂ ನಾಟಕ ಎಂದರೆ ಮಾತೇ ಎಂಬ ಅನುಭವವಿದ್ದಿತು. ಕಾಲಕ್ರಮೇಣ ಮಾತು ಸ್ವಲ್ಪ ಕಡಿಮೆಯಾಗಿತ್ತು. ಇತ್ತೀಚಿನ ರಂಗಪ್ರಯೋಗಗಳಲ್ಲಿ ಮಾತಿನಂತೆ ಉಳಿದ ಪ್ರಯೋಗಾಂಗಗಳ ಕಡೆಗೂ ಗಮನ ಕೊಡಲಾಗಿದೆ. ಈ ಪ್ರಕಾರ ಕನ್ನಡ ರಂಗದಲ್ಲಿ ತನ್ನ ಸ್ಥಾನವನ್ನು ಇನ್ನೂ ಗುರುತಿಸಿಕೊಳ್ಳಬೇಕಾಗಿದೆ.

ಈ ವರೆವಿಗೆ ಕನ್ನಡ ರಂಗಭೂಮಿ ನಡೆದು ಬಂದಿರುವ ದಾರಿಯನ್ನು ತುಂಬ ಸ್ಥೂಲವಾಗಿ ಅವಲೋಕಿಸಲಾಯಿತು. ಇದರೊಂದಿಗೆ ನಾಟಕ ಸಾಹಿತ್ಯವೂ ಹೇಗೆ ಬೆಳೆದು ಬಂದಿತು ಎಂಬುದನ್ನೂ ಸ್ವಲ್ಪಮಟ್ಟಿಗೆ ಗಮನಿಸಬಹುದಾಗಿದೆ. ಅರವತ್ತರ ದಶಕದಿಂದ ರಂಗಕ್ಕೂ ನಾಟಕಕ್ಕೂ ನಿಕಟ ಸಂಬಂಧವಿರುವುದನ್ನು ನೋಡಿದ್ದೇವೆ. ಪ್ರಕೃತ ಸಂಕಲನದಲ್ಲಿ ಹದಿನಮೂರು ನಾಟಕಗಳನ್ನು ಆಯ್ದು ಸಂಗ್ರಹಿಸಿರುತ್ತೇನೆ. ಇವೆಲ್ಲವೂ ಏಕಾಂಕಗಳೇ. ರಂಗ ಸಾಹಿತ್ಯ ಹಾಗೂ ಕನ್ನಡದ ಮುಖ್ಯ ನಾಟಕ ಕಾರರು—ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಈ ಸಂಗ್ರಹ ಸಿದ್ಧವಾಗಿದೆ. ಇನ್ನು ಮುಂದೆ ಇಲ್ಲಿ ಆಯ್ಕೆಮಾಡಿರುವ ನಾಟಕಗಳ ಬಗೆಗೆ ಒಂದೆರಡು ಮಾತು ಗಳನ್ನು ಹೇಳಬಹುದು.

ಕೈಲಾಸಂ ನಂತರ ಹಳೆಯ ಮೈಸೂರು ಭಾಗದಲ್ಲಿ ಎದ್ದು ಕಾಣಿಸಿದ ನಾಟಕ ಕಾರರೆಂದರೆ ಪರ್ವತವಾಣಿ. ಇವರ ರಂಗಭೂಮಿ ಅನುಭವದ ವ್ಯಾಪ್ತಿ ದೊಡ್ಡದು. ನಟರಾಗಿ, ನಿರ್ದೇಶಕರಾಗಿ, ನಾಟಕಕಾರರಾಗಿ ಕನ್ನಡ ರಂಗಕ್ಕೆ ಇವರು ನೀಡಿರುವ ಕಾಣಿಕೆ ದೊಡ್ಡದು. ಅಗ್ರಪಂಕ್ತಿಗೆ ಸೇರಿದ ಪಾಶ್ಚಾತ್ಯ ನಾಟಕಕಾರರ ನಾಟಕಗಳನ್ನು ಅನುವಾದ ಇಲ್ಲವೇ ರೂಪಾಂತರದ ಮೂಲಕ ಕನ್ನಡಕ್ಕೆ ತಂದಿದ್ದಾರೆ. ಇವರ ಕೆಲಸ ಅಷ್ಟಕ್ಕೇ ಸೀಮಿತಗೊಂಡಿಲ್ಲ. ಅದಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಸ್ವತಂತ್ರ ನಾಟಕಗಳನ್ನು ರಚಿಸಿರುತ್ತಾರೆ. ಕನ್ನಡ ರಂಗಭೂಮಿಯನ್ನು ಜೀವಂತವಾಗಿ

ಉಳಿಸಿಕೊಂಡು ಬರುವುದರಲ್ಲಿ ಇವರ ನಾಟಕಗಳು ಪ್ರಮುಖ ಪಾತ್ರವಹಿಸಿವೆ. ವಸ್ತುವೈವಿಧ್ಯ, ರಂಗತಂತ್ರ, ಹಾಸ್ಯ, ವ್ಯಂಗ್ಯ, ಚಮತ್ಕಾರಗಳಿಂದ ಕೂಡಿದ ಸಂಭಾಷಣೆ ಎಲ್ಲಕ್ಕಿಂತ ಹೆಚ್ಚಾಗಿ ರಂಗಪ್ರಜ್ಞೆ ಇವರ ನಾಟಕಗಳ ಲಕ್ಷಣವಾಗಿವೆ. ಪರ್ವತವಾಣಿ ಅವರಲ್ಲಿನ ನಟ ಹಾಗೂ ನಿರ್ದೇಶಕ ಶಕ್ತಿಗಳು ರಂಗಕ್ಕೆ ಯೋಗ್ಯ ನಾಟಕಗಳನ್ನು ಒದಗಿಸಿವೆ.

ಇಲ್ಲಿ ಆರಿಸಿಕೊಂಡಿರುವ ಅವರ ನಾಟಕ 'ಮುಕುತಿ ಮೂಗುತಿ'. ಇದೊಂದು ಚಿಕ್ಕ, ಚೊಕ್ಕ ಕೃತಿ. ಜನಜನಿತವಾಗಿ ಬಂದಿರುವ ಪುರಂದರ ದಾಸರ ಪೂರ್ವ ಕಥೆಯನ್ನೇ ಆಧರಿಸಿ ಈ ನಾಟಕ ರಚಿಸಿದ್ದಾರೆ. ಈ ನಾಟಕದ ನಾಯಕನನ್ನು ಎಚ್ಚರಿಸಲು ಹರಿಯೇ ಸತತ ಪ್ರಯತ್ನ ನಡಸಿ, ವಿಫಲನಾಗಿ, ಷಾಕ್ ಟ್ರೀಟ್‌ಮೆಂಟ್ ಕೊಟ್ಟು, ಇಹದ ಹುಚ್ಚನ್ನು ಬಿಡಿಸುತ್ತಾನೆ. ಈ ಷಾಕ್ ಟ್ರೀಟ್‌ಮೆಂಟನ್ನೇ 'ಪವಾಡ' ಎನ್ನುವುದು. ಪವಾಡದಲ್ಲಿ ಜನರಿಗೆ ನಂಬಿಕೆ ಹೋಗುತ್ತಿದೆ. ಅದರಲ್ಲಿ ನಂಬಿಕೆ ಬರುವಂತೆ ಎಚ್ಚರಿಸಲು ಬರೆದ ನಾಟಕ ಇದು ಎಂದು ಹೇಳುವುದು ಯುಕ್ತ ವಲ್ಲ. ಸಮಾಜವನ್ನು ತಿದ್ದಬೇಕೆಂಬ ಅಪೇಕ್ಷೆಯಿಂದಲೇ ಈ ಬಗೆಯ ಘಟನೆಯುಳ್ಳ ವಸ್ತುವನ್ನು ಆರಿಸಿಕೊಂಡು, 'ಮುಕುತಿ ಮೂಗುತಿ' ಯನ್ನು ರಚಿಸಿದ್ದಾರೆ ಎನ್ನುವ ದೃಷ್ಟಿಯಿಂದ ಈ ನಾಟಕವನ್ನು ನೋಡಬೇಕು. ರಂಗದ ಮೇಲೆ ತರಲು ತುಂಬ ಅನುಕೂಲವಾದ ಸರಳ, ಸುಂದರ ನಾಟಕ.

ಸಾಧಾರಣವಾಗಿ ಏಕಾಂಕಗಳು ಎಂದರೆ ಸಮಯ ಕಳೆಯಲು, ಹಾಸ್ಯಪ್ರಧಾನ ವಾದ ದೃಶ್ಯ ಎಂದಿದ್ದ ಕಾಲದಲ್ಲಿ ರಚಿಸಿದ ವಿಷಾದಾಂತ ಏಕಾಂಕ 'ನಿಧಿ'. ಎನ್ಕೆ ಇದುವರೆಗೆ ಸುಮಾರು ಎಪ್ಪತ್ತೈದು ಏಕಾಂಕಗಳನ್ನು ರಚಿಸಿದ್ದಾರೆ. ಭಾಷೆ, ವಿಷಯ, ಸಮಸ್ಯೆಯ ಆಯ್ಕೆ, ತಂತ್ರ ಇವೇ ಮೊದಲಾದವುಗಳ ದೃಷ್ಟಿಯಿಂದ ಮುಖ್ಯವಾಗುವ ಇವರ ಏಕಾಂಕಗಳು ರಂಗ ಹಾಗೂ ರೇಡಿಯೋದಲ್ಲಿ ಹೆಚ್ಚಾಗಿ ಪ್ರದರ್ಶಿತವಾಗಿವೆ, ಪ್ರಸಾರಗೊಂಡಿವೆ.

ಈ ಏಕಾಂಕದಲ್ಲಿನ ಮುದುಕಿಯ ಪಾತ್ರಕ್ಕೆ ಹೆಚ್ಚು ಒತ್ತು ಇದೆ. ಹಾಗೆಯೇ ತಂತ್ರ ಪ್ರಧಾನವಾದ ಅಂದರೆ ಕತ್ತಲೆ—ಬೆಳಕಿನ ಉಪಯೋಗ ಹಾಗೂ ಶಬ್ದ ಪರಿಣಾಮಗಳ ಬಳಕೆಗೆ ಹೆಚ್ಚು ಅವಕಾಶವೂ ಇದೆ. ಈ ಚಿಕ್ಕ ನಾಟಕ ಇಷ್ಟೆಲ್ಲಾ ವೈವಿಧ್ಯವಿದ್ದರೂ ಗೊಂದಲ ತರದ ಪರಿಣಾಮ ರಮಣೀಯತೆಯನ್ನು ಪಡೆದಿದೆ. ಮನೆಯಿಂದ ಓಡಿಹೋಗಿದ್ದ ಮಗನೇ ನಿಧಿ. ಈ ನಿಧಿಯನ್ನು ಪಡೆಯಲು ಮುದುಕಿಯ ಸತತ ಪ್ರಯತ್ನದಿಂದ ಕೊನೆಗೆ ನಿಧಿ ಸಿಗುತ್ತದೆ, ನಿಧಿಗಾಗಿ ಪ್ರಯತ್ನಿಸಿದ ಮುದುಕಿ ಸಾವನ್ನಪ್ಪುತ್ತಾಳೆ. 'ಅಯ್ಯೋ ಅವ್ವಾ!...ಸಾವಿನಲ್ಲೇ ಸುಖಕಂಡೆಯಾ?' ಎನ್ನುವ ಮಗನ ಮಾತು ಮಾರ್ಮಿಕವಾಗಿದೆ. ಉತ್ತರ ಕರ್ನಾಟಕದ ಆಡುನುಡಿಯಲ್ಲಿ ರಚಿತವಾಗಿರುವ ಈ ನಾಟಕ ಪ್ರದರ್ಶನ ಹಾಗೂ ಪ್ರಸಾರ ಮಾಧ್ಯಮಗಳಲ್ಲಿ ಪರಿಣಾಮಕಾರಿಯಾಗುತ್ತದೆ.

'ಸ್ವಪ್ನದರ್ಶಿ' ಗೀತ ನಾಟಕ. ಇದು ಕೀರ್ತಿನಾಥ ಕುರ್ತಕೋಟಿ ಅವರದು. ಈ ಪ್ರಕಾರದಲ್ಲಿ ಹೆಚ್ಚು ನಾಟಕಗಳು ಬಂದಿಲ್ಲದಿದ್ದರೂ ಗಮನಾರ್ಹ ನಾಟಕಗಳು ಶಿವರಾಮಕಾರಂತ, ಪು. ತಿ. ನ. ಮೊದಲಾದವರಿಂದ ಬಂದಿವೆ. ಇದೇ ಸಾಲಿನಲ್ಲಿ ಕೀರ್ತಿನಾಥರು ರಚಿಸಿರುವ ಗೀತನಾಟಕಗಳನ್ನು ಗುರುತಿಸುವುದು ಅವಶ್ಯಕ. ಎಲ್ಲ ವಸ್ತುಗಳೂ ಗೀತ ನಾಟಕಗಳಿಗೆ ಅಳವಡುವುದಿಲ್ಲ. ಹೃದಯವನ್ನು ತಟ್ಟುವಂತಹ ವಸ್ತುಗಳು ಗೀತ ಮಾಧ್ಯಮಗಳಿಗೆ ಹೆಚ್ಚು ಅರ್ಥಪೂರ್ಣವಾಗುತ್ತವೆ. 'ಸ್ವಪ್ನದರ್ಶಿ'ಯ ಮೂಲವಸ್ತುವನ್ನು ಜಡಭರತರ 'ಕನಸು'ಗಳಿಂದ ತೆಗೆದುಕೊಂಡಿದೆ. ಇದರ ವಸ್ತು ಹಾಗೂ ಸಂಭಾಷಣೆ ಹೃದಯವನ್ನು ತಟ್ಟುವಂತಹದು. ಸಾಧಕನಿಗೆ ಹೆಜ್ಜೆ ಹೆಜ್ಜೆಗೂ ತೊಂದರೆ ತಪ್ಪಿದ್ದಲ್ಲ ಎಂಬ ನಿತ್ಯ ಸತ್ಯವನ್ನು ಸತ್ಯಕಾಮನ ಪಾತ್ರ ಚಿತ್ರಣದ ಮೂಲಕ ನಾಟಕ ಸಾರಿದೆ. ಸತ್ಯಕಾಮನ ಒಳತೋಟ ಚೆನ್ನಾಗಿ ಚಿತ್ರಿತವಾಗಿದೆ. ವಸ್ತುವಿನ ಓಟಕ್ಕೆ ಅನುಗುಣವಾಗಿ ನಾಟಕಕಾರರು ಸರಳರಗಳೆ ಹಾಗೂ ಗೀತಗಳನ್ನು ಬಳಸಿ, ಹಾಡುಗಳಿಗೆ ರಾಗವನ್ನೂ ತಿಳಿಯಿಸಿದ್ದಾರೆ. ಇದರಿಂದ ಪ್ರಯೋಗಗಳಿಗೆ ಸಹಕಾರಿಯಾಗಿದೆ. ಇದು ಒಳ್ಳೆಯ ರೇಡಿಯೋ ಹಾಗೂ ರಂಗ ನಾಟಕವಾಗಬಲ್ಲದು.

ಚಂದ್ರಕಾಂತ ಕುಸನೂರರ 'ರತ್ತೋರತ್ತೋ ರಾಯನ ಮಗಳೆ' ಒಂದು ಅಸಂಗತ ನಾಟಕ. ಮಕ್ಕಳು ಆಟವಾಡುವಾಗ ಹೇಳುವ ಹಾಡಿನ ಮೊದಲ ಸಾಲೇ 'ರತ್ತೋ ರತ್ತೋ ರಾಯನ ಮಗಳೆ'. ಸಾಮಾನ್ಯವಾಗಿ ಅಸಂಗತ ನಾಟಕಗಳಲ್ಲಿ ತಮ್ಮನ್ನು ತಾವೇ ಗುರುತಿಸಿಕೊಳ್ಳಲಾರದ ಪಾತ್ರಗಳು ಈ ನಾಟಕದಲ್ಲಿ ಇವೆ. ಆ ಪಾತ್ರಗಳೆಂದರೆ ಕ, ಕಾ, ಕಿ... ಕಥೆ ನಡೆದುಕೊಂಡು ಹೋಗುವ ರೀತಿ ಕುತೂಹಲ ವನ್ನು ಹುಟ್ಟಿಸುತ್ತದೆ. ಈ ನಾಟಕದ ಜೀವಾಳವೆಂದರೆ ಉತ್ತರ ಕರ್ನಾಟಕದ ಆಡುನುಡಿಯ ಸೊಗಡು ಹಾಗೂ ಆಕರ್ಷಕ ಪಾತ್ರಗಳು. ಕೆಲವೆಡೆ ಸಂಭಾಷಣೆ ಆಡುನುಡಿಯ ಎಲ್ಲೆಯನ್ನು ದಾಟಿ ಕಾವ್ಯಮಯವಾಗುತ್ತದೆ. ಉದಾ:

> 'ಆದ್ರ ನಿಂದೇನು? ನಿನ್ನ ನಿದ್ದೆ ಬರೇ ಕೆಸರಿನ್ಯಾಂಗಿದ್ರ ನನ್ನ ನಿದ್ದಿ ಕಮಲ್ದ್ಹಾಂಗದ ಕಮಲ್ದ್ಹಾಂಗ. ತಿಳೀತ—ನನ್ನ ನಿದ್ದಿ ಅರಳ್ತದ, ಮೊಗ್ಗಿ ಹಾಂಗ ಬಿಚ್ತದ, ಹೂವಿನ್ಹಾಂಗ ಅರಳ್ತದ ಸುವಾಸನ ನಾಸಾ ಬಿಡ್ತದ'...

ಹಾಗೆಯೇ ಆಕರ್ಷಣೀಯವಾದ ಮಾತುಗಾರಿಕೆ ಹಾಗೂ ಅಸಾಂಗತ್ಯಕ್ಕೆ ಒಂದೆರಡು ಉದಾಹರಣೆಗಳು:

> 'ಇಬ್ರೂ ಒಬ್ರಾಂಗ ಒಬ್ರಿದ್ರ ಮುಗೀತಲ್ಲ ಕತಿ, ಮತ್ಯಾಕ ತಕರಾರ ಮಾಡತೀರಿ. ನಿನ್ನ ಬಲ ಜಾಸ್ತಿ ಆಯ್ತಂದ್ರ ಇವ್ನ ತಿನ್ನು. ಅವನ ಬಲ ಜಾಸ್ತಿ ಆಯ್ತಾಂದ್ರ ನಿನ್ನ ತಿಂತಾನ. ನೀ ಇವ್ನ ತಿನ್ನು ಇವ ನಿನ್ನ ತಿಂತಾನ ಒಟ್ಟು, ಒಬ್ರಿಗೊಬ್ರು ತಿನ್ನೋ ಕೆಲಸಾನೆ ಮಾಡ್ರಿ. ಬರೇ ತಿನ್ನೋ ಕೆಲಸ.

ತಿನ್ನಕ ಸಿಕ್ತಂದ್ರು ಏನಾದ್ರೂ ತಿನ್ನಿ...ಹೆಂಡತಿನ್ನಿ ಹೇಲತಿನ್ನಿ ಕಲ್ಲ ತಿನ್ರಿ ಮಣ್ಣ ತಿನ್ರಿ ತಿನ್ರಿ ತಿನ್ರಿ ಅದೊಂದೆ ಮಾಡಿರಿ—ತಿಳಿತಾ'.

'ಒಂದಾನೊಂದು ದೇಶ, ನಮ್ಮ ವೇಶ, ಸೈನ್ಯ, ಶತೃ, ಕೋಳಿ ತತ್ತಿ, ನಮ್ಮ ಜಾತಿ ಕರಡಿ, ವನ್ಯ ಪ್ರಾಣಿ, ಸತ್ಯ, ಅಹಿಂಸಾ, ಕೊಲೆ ನಾರಾಯಣಾ, ದೇವರು, ಮಾತ್ರೆ, ಗುಳಿಗೆಹಿಪ್ಪಿ, ಗಿಪ್ಪಿಬಿದ್ದವರು, ಇಲಿಗಳ ಸ್ಪರ್ಧೆ—ಕಾವು ದಹನ ...... ನಾನು ದೇಶದ—ನೀನು--ಮಣ್ಣು'.

ಮೇಲೆ ಉದಾಹರಣೆಗಳನ್ನು ಕೊಟ್ಟಿರುವ ಉದ್ದೇಶ ಈ ನಾಟಕದ ಜೀವಾಳವೇ ಮಾತು ಗಾರಿಕೆ ಎಂಬುದನ್ನು ಸ್ಪಷ್ಟಪಡಿಸುವುದು. ಕಥೆಯ ಶೀರ್ಷಿಕೆ ಮಕ್ಕಳು ಹೇಳಿಕೊಳ್ಳುವ ಹಾಡಿಗೆ ಸಂಬಂಧಿಸಿದರೂ, ಕೆಲವೊಂದು ಸಂದರ್ಭಗಳು ಜೀವನ ದರ್ಶನವನ್ನು ಮೂಡಿ ಸುತ್ತವೆ. ಒಟ್ಟಿನಲ್ಲಿ ಹೇಳುವುದಾದರೆ ವಸ್ತು ಹಾಗೂ ತಂತ್ರದ ದೃಷ್ಟಿಯಿಂದ ಈ ನಾಟಕ ಕುತೂಹಲಕಾರಿಯಾಗಿದೆ.

'ಪುನರ್ಜನ್ಮ' ನ. ರತ್ನ ಅವರ ರೇಡಿಯೋ ನಾಟಕ. ನಾಟಕಕಾರರು ನಾಟಕದ ಉದ್ದಕ್ಕೂ ಸಂಗೀತ ಪರಿಣಾಮಗಳ ಬಗೆಗೆ ಹಾಗೂ ಶಬ್ದ ಪರಿಣಾಮಗಳ ಬಗೆಗೆ ಸ್ಪಷ್ಟವಾದ ಸೂಚನೆ ಕೊಟ್ಟಿದ್ದು ನಾಟಕದ ವಸ್ತುವಿನ ಓಟಕ್ಕೆ ಬಹಳ ಸಹಕಾರಿ ಯಾಗಿದೆ. ವಶೀಕರಣಕ್ಕೆ ಒಳಗಾದ ರಾಯಪ್ಪ ತನ್ನ ಹಿಂದಿನ ಜನ್ಮಗಳ ಕಥೆಯನ್ನು ವಿವರಿಸುತ್ತಾನೆ. ಈ ಕಥೆಗಳನ್ನು ಕೇಳುತ್ತಿದ್ದ ಮೇಜರ್ ಮತ್ತು ರಂಗಾಚಾರ್ ಅವರುಗಳಿಗೆ ಪುನರ್ಜನ್ಮ ಪ್ರಶ್ನೆಯಾಗಿಯೇ ಉಳಿಯುತ್ತದೆ. ಇಲ್ಲಿ ನಾಟಕಕಾರರು ತಾವು ಹೇಳಬೇಕಾದುದನ್ನು ತಿಳಿಸಲು ಬಳಸಿರುವ ತಂತ್ರ, ಕುತೂಹಲಕಾರಿಯಾದ ವಸ್ತುವಿಗೆ ತಕ್ಕ ನಿರೂಪಣೆ ಹಾಗೂ ಔಚಿತ್ಯಪೂರ್ಣವಾದ ಹಿನ್ನೆಲೆ ಇರುವುದರಿಂದ ಇದೊಂದು ಪರಿಣಾಮಕಾರಿ ರೇಡಿಯೋ ನಾಟಕವಾಗುತ್ತದೆ.

ಲಂಕೇಶ್ ಸಾಮಾನ್ಯವಾಗಿ ನಮ್ಮ ಜೀವನಕ್ಕೆ ಹತ್ತಿರವಾಗಿರುವ ವಸ್ತು, ಸಮಸ್ಯೆಗಳನ್ನು ತೆಗೆದುಕೊಂಡು ನಾಟಕಗಳನ್ನು ರಚಿಸಿದ್ದಾರೆ. ಇವರ ಹೆಚ್ಚಿನ ನಾಟಕಗಳು ದುರಂತದ ಧ್ವನಿಯಿಂದ ಕೂಡಿವೆ. ನಮ್ಮ ಸುತ್ತುಮುತ್ತು ಇರುವ ಅಪ್ರಾಮಾಣಿಕತೆ, ದ್ವಂದ್ವ, ಅಸೂಯೆ, ಅಸಹನೆ, ಅಶಾಂತಿ ಇವೇ ಮೊದಲಾದ ಪರಿಸ್ಥಿತಿಗೆ ಅವರು ರೋಸಿಹೋಗಿದ್ದಾರೆ ಎನ್ನುವುದು ಅವರು ನಿರ್ಮಿಸಿರುವ ಪಾತ್ರಗಳಿಂದ ಕಂಡುಬರುತ್ತದೆ. ಆ ಪಾತ್ರಗಳ ನಡವಳಿಕೆ ಅನೇಕ ಸಂದರ್ಭಗಳಲ್ಲಿ ನಮಗೆ ವಿಚಿತ್ರ ವಾಗಿ ಕಾಣಿಸಿದರೂ ಹಲವು ಸಂದರ್ಭಗಳಲ್ಲಿ ನಿಜಸ್ಥಿತಿಯನ್ನು ನಮ್ಮ ಅರಿವಿಗೆ ತಂದು ಕೊಡುತ್ತದೆ. ಲಂಕೇಶರ 'ಗಿಳಿಯು ಪಂಜರದೊಳಿಲ್ಲ' ಅವರದೇ ಸಣ್ಣ ಕಥೆಯೊಂದರ ನಾಟಕರೂಪ. ಇದು ಮಧ್ಯಮವರ್ಗದ ಬದುಕಿಗೆ ಸಂಬಂಧಿಸಿದ ವಸ್ತುವಿನ ಆಧಾರದ ಮೇಲೆ ರಚಿತವಾದ ನಾಟಕ. ವ್ಯಕ್ತಿ—ವ್ಯಕ್ತಿಗಳ ನಡುವಿನ ಸಂಬಂಧವನ್ನು ಅವಲಂಬಿಸಿ ರಚಿತವಾಗಿರುವ ಈ ನಾಟಕದ ನಾಯಕನಿಗೆ ತನ್ನಲ್ಲಿರುವ ಸಣ್ಣತನ

ಹಾಗೂ ತನ್ನ ನಂಬಿಕೆಗಳ ಅರಿವಾಗದೆ ಬೇರೆಯವರ ಬಗ್ಗೆ ಅನುಮಾನಿಸುತ್ತಾನೆ. ಇಲ್ಲೇ ಇರುವುದು ಜೀವನದ ವ್ಯಂಗ್ಯ. ಇದೇ ನಮ್ಮ ಜೀವನವನ್ನು ಪ್ರತಿಬಿಂಬಿಸುತ್ತದೆ. ನಾಟಕದ ನಾಯಕ, ಮುನಿಸ್ವಾಮಿಯ ಬಗೆಗೆ ನಡೆದುಕೊಳ್ಳುವುದು, ನಾಯಕನ ಆಚಾರ ಹಾಗು ವಿಚಾರಗಳ ನಡುವೆ ಇರುವ ಬಿರುಕನ್ನು ಎತ್ತಿತೋರಿಸುವುದರ ಜತೆಗೆ ಸುತ್ತುಮುತ್ತಲಿನ ಬದುಕಿನ ದ್ವಂದ್ವವನ್ನು ಎತ್ತಿತೋರಿಸುತ್ತದೆ.

ಲಂಕೇಶರು ಶಕ್ತಿಶಾಲಿಯಾದ ನಾಟಕಕಾರರು. ಇವರ ನಾಟಕಗಳು ಪ್ರೇಕ್ಷಕರನ್ನು ಸೆರೆಹಿಡಿದಿವೆ. ಬದುಕಿನ ವಿಶ್ಲೇಷಣೆಯನ್ನು ಉದ್ದೇಶಿಸಿದ ಇವರ ನಾಟಕಗಳಲ್ಲಿ ಪಾತ್ರಗಳು ಆಡುವ ಹರಿತವಾದ ಮಾತುಗಳು ವಸ್ತು ಮತ್ತು ವಾತಾವರಣಗಳೇ ಯಶಸ್ಸಿಗೆ ಕಾರಣವಾಗಿವೆ. ಅಂತಹ ಯಶಸ್ವೀ ನಾಟಕಗಳಲ್ಲಿ 'ಗಿಳಿಯು ಪಂಜರದೊಳಿಲ್ಲ' ಒಂದು.

ವಿಜಯಾ ಅವರ 'ಉಳ್ಳವರ ನೆರಳು' ಬೀದಿನಾಟಕ ಕನ್ನಡ ರಂಗಕ್ಕೇ ಹೊಸದೊಂದು ಆಯಾಮವನ್ನು ತಂದುಕೊಟ್ಟಿದೆ. ಬೀದಿ ನಾಟಕಗಳ ಸಾಮಾನ್ಯ ಲಕ್ಷಣಗಳನ್ನು ತುಂಬಿಕೊಂಡು ಆ ಪ್ರಕಾರದ ಉದ್ದೇಶವನ್ನು ಸಮರ್ಥವಾಗಿ ಪೂರೈಸಲು ಹೊರಟಿರುವ ನಾಟಕ ಇದು. ಕಾರ್ಮಿಕರ ಕಷ್ಟ, ನೋವು ಪ್ರತಿಭಟನೆಗಳು ಹಾಗೂ ಅವರ ನಾಯಕರ ಸ್ವಾರ್ಥ, ಪೊಳ್ಳು ಆಶ್ವಾಸನೆ, ಮೋಸದ ನಡವಳಿಕೆ ಮೊದಲಾದುವುಗಳನ್ನು ಚಿತ್ರಿಸುತ್ತ ಶೋಷಣೆಗೆ ಒಳಗಾದವರ ದುಃಸ್ಥಿತಿ ಬಗ್ಗೆ ಈ ನಾಟಕ ತಿಳುವಳಿಕೆ ನೀಡುತ್ತದೆ; ನಮ್ಮ ಪ್ರಜ್ಞೆಗೆ ಸವಾಲು ಎಸೆಯುತ್ತದೆ. ಈ ನಾಟಕದಲ್ಲಿ ವಸ್ತು ನಿರೂಪಣೆ ಹಾಗು ಸನ್ನಿವೇಶ ನಿರ್ಮಾಣಕ್ಕೆ ಮಹತ್ವವಿದೆ. ಅದು ಸಹಜವೇ. ಒಟ್ಟಿನಲ್ಲಿ ಕಾರ್ಮಿಕರ ಕಷ್ಟಪರಂಪರೆಯನ್ನು ಎತ್ತಿಹೇಳುವ, ಕಾರ್ಮಿಕರ ರಂಗಭೂಮಿಯಲ್ಲೇ ಪ್ರಯೋಗಗೊಳ್ಳುವ ಈ ನಾಟಕ ಅವರ ಮೇಲೆ ಹೆಚ್ಚು ಪರಿಣಾಮಕಾರಿಯಾಗುತ್ತದೆ; ಅವರ ಚಿಂತನೆಗೆ ಪೋಷಣೆ ನೀಡುತ್ತದೆ. ಸಾಮಾನ್ಯವಾಗಿ ನೆರಳಿನಲ್ಲಿ ಏನೂ ಬೆಳೆಯುವುದಿಲ್ಲ ಎನ್ನುತ್ತಾರೆ. ಹಾಗೆಯೇ ಉಳ್ಳವರ ನೆರಳಿನಲ್ಲಿ ಕಮರಿಕೊಳ್ಳುವ ಬದುಕನ್ನು ನಾಟಕಕಾರ್ತಿ ಇಲ್ಲಿ ಪ್ರದರ್ಶಿಸುತ್ತಾರೆ. ಕಾರ್ಖಾನೆಗಳ ಆವರಣದ ದುರಂತತೆಯ ಛಾಯೆಯನ್ನು ತುಂಬಿಕೊಂಡಿರುವ ಈ ನಾಟಕ ತನ್ನ ಉದ್ದೇಶವನ್ನು ಯಶಸ್ವಿಯಾಗಿ ಈಡೇರಿಸುತ್ತದೆ.

ಗಿರೀಶ ಕಾರ್ನಾಡರು ಕನ್ನಡದ ಮಹತ್ವದ ನಾಟಕಕಾರರಲ್ಲಿ ಒಬ್ಬರು. ಸಂಖ್ಯೆಯ ದೃಷ್ಟಿಯಿಂದ ಅವರು ರಚಿಸಿರುವ ನಾಟಕಗಳು ಕಡಿಮೆ ಆದರೂ, ಗುಣದ ಹಾಗೂ ಪ್ರಭಾವದ ದೃಷ್ಟಿಯಿಂದ ಅವು ಮಹತ್ವ ಉಳ್ಳವು. 'ಯಯಾತಿ' 'ತುಘಲಕ', 'ಹಯವದನ' ಮೊದಲಾದವು ಅವರ ಹಲವು ಅಂಕಗಳ ನಾಟಕಗಳು. ಇಲ್ಲಿ ಆಯ್ಕೆ ಮಾಡಿರುವ 'ಮಾನಿಷಾದ' ಅವರ ಒಂದೇ ಒಂದು ಏಕಾಂಕ. ಸಾಮಾನ್ಯವಾಗಿ ಗಿರೀಶ್ ಇತಿಹಾಸ ಇಲ್ಲವೆ ಪುರಾಣಗಳಿಂದ ತಮ್ಮ ನಾಟಕಗಳಿಗೆ ವಸ್ತುವನ್ನು ಆಯ್ಕೆ ಮಾಡಿಕೊಂಡು, ಸಮಕಾಲೀನ ದೃಷ್ಟಿಯಲ್ಲಿ ಅವುಗಳನ್ನು

ನೋಡಿ ವ್ಯಾಖ್ಯಾನಿಸುತ್ತಾರೆ. ಹಾಗೆಯೇ 'ಮಾನಿಷಾದ' ವಸ್ತುವನ್ನು ರಾಮಾಯಣದಿಂದ ತೆಗೆದುಕೊಂಡು ವ್ಯಾಖ್ಯಾನಿಸಿದ್ದಾರೆ.

ಅಗಸನೊಬ್ಬ ಎಚ್ಚರತಪ್ಪಿ ಆಡಿದ ಮಾತಿನಿಂದ, ಅವನ ಮನಸ್ಸಿನ ಮೇಲೆ ಏನು ಪರಿಣಾಮವಾಯಿತು ಎನ್ನುವುದನ್ನು ನಾಟಕಕಾರರು ಅಗಸನನ್ನು ಚಿತ್ರಿಸುವುದರ ಮೂಲಕ, ಸಾಮಾನ್ಯನೂ ತನ್ನ ಒಂದು ಉದ್ದೇಶವಿಲ್ಲದ ಮಾತಿನಿಂದ ಎಷ್ಟೊಂದು ನೋವನ್ನು ಅನುಭವಿಸಬೇಕಾಯಿತು ಎನ್ನುವುದನ್ನು ಧ್ವನಿಪೂರ್ಣವಾಗಿ ಚಿತ್ರಿಸಿದ್ದಾರೆ. ಅಂತೆಯೇ ನಾಟಕದ ಉದ್ದಕ್ಕೂ ವಿಯೋಗದ ಸರಮಾಲೆಯನ್ನೇ ಕಾಣುತ್ತೇವೆ. ಕ್ರೌಂಚಪಕ್ಷಿಗಳ ವಿರಹ, ರಾಮನಿಲ್ಲದ ದಶರಥನ ಸಾವು, ಲಕ್ಷ್ಮಣನ ಅರಣ್ಯವಾಸದಿಂದ ಊರ್ಮಿಳೆಯ ವಿರಹ, ಭರತನನ್ನು ಕಳೆದುಕೊಂಡ ಕೈಕೇಯಿ, ರಾಮನಿಂದ ದೂರಳಾದ ಸೀತೆ, ಅಗಸನಿಂದ ದೂರಳಾದ ಹೆಂಡತಿ, ತಂದೆ ತಾಯಿಯಂದಿರಿಂದ ದೂರವಾಗಿ ಸತ್ತ ಶ್ರವಣ—ಹೀಗೆ ವಿಯೋಗದ ಘಟನೆಗಳನ್ನು ಒಂದರಮೇಲೆ ಒಂದರಂತೆ ಕಾಣಬಹುದು. ಈ ಏಕಾಂಕದಲ್ಲಿ ನಾಟಕಕಾರರು ಅಗಸನ ಪಾತ್ರವನ್ನು ಪ್ರಧಾನವಾಗಿಸಿದ್ದಾರೆ. ವಾಲ್ಮೀಕಿ—ಅಗಸರ ಸಂಭಾಷಣೆಯ ಒಂದು ತುಣುಕನ್ನು ನೋಡಿ:

> ವಾಲ್ಮೀಕಿ—ಆ ತಪ್ಪು ನಿನ್ನದಲ್ಲ. ಭರತನೆಂದದ್ದು ನಿಜ. ಈಗ ಹಿಂದಿರುಗಿ ನೋಡಿದಾಗ ರಾಮ ಸೀತೆಯರ ಅಗಲಿಕೆ ಅನಿವಾರ್ಯವಿದ್ದಿತೆನ್ನಿಸುತ್ತದೆ. ಇಂದಿನವರೆಗೂ ನನ್ನನ್ನು ಪೀಡಿಸುತ್ತ ಬಂದ ಕ್ರೌಂಚಪಕ್ಷಿಯ ಕೂಗು ಇಷ್ಟು ಸುಲಭವಾಗಿ ಮೂಕವಾಗುವದು ಅಶಕ್ಯವಾಗಿತ್ತು ಎನ್ನಿಸುತ್ತದೆ ...... ಈಗ ಸೀತೆ ಮಣ್ಣಾಗಿದ್ದಾಳೆ. ರಾಮ ದಿಗ್ಭ್ರಾಂತನಾಗಿ ಕಲ್ಲಾಗಿದ್ದಾನೆ. ನನ್ನ ಬಳಿ ಉಳಿದಿದೆ—ನಾನು ಆ ನಿಷಾದನಿಗಿತ್ತ ಶಾಪಮಾತ್ರ...ಶಾಪಮಾತ್ರ!
>
> ಅಗಸ—ಇನ್ನು ಮುಂದೇನು ಸ್ವಾಮಿ? ರಾಮಾಯಣ ಹೀಗೆಯೇ ಕೊನೆಗೊಳ್ಳಬೇಕೆ?

ರಾಮಾಯಣದಲ್ಲಿನ ಒಂದು ಸಣ್ಣ ಘಟನೆ ಗಿರೀಶರ ಕೈಯಲ್ಲಿ ಒಂದು ಕಾಲ್ಪನಿಕ ನಾಟಕವಾಗಿ ಮೂಡಿಬಂದಿದೆ. ನಾಟಕ ಪೌರಾಣಿಕ ಸನ್ನಿವೇಶದ ಹಿನ್ನೆಲೆಯಲ್ಲಿ ರಚಿತವಾಗಿರುವುದರಿಂದ, ಸಂಭಾಷಣೆಗೆ ಉಪಯೋಗಿಸಿರುವ ಭಾಷೆ ಗಂಭೀರವಾದುದಾಗಿದೆ. ಪ್ರದರ್ಶನ ಹಾಗು ಪ್ರಸಾರಮಾಧ್ಯಮಗಳಲ್ಲಿ ಪರಿಣಾಮಕಾರಿಯಾಗಿ ಪ್ರಯೋಗವಾಗುವ ಸಾಧ್ಯತೆಯನ್ನು ಈ ನಾಟಕ ಪಡೆದಿದೆ.

ಎಂ. ಎಸ್. ಕೆ. ಪ್ರಭು ಅವರ 'ತಪ್ಪಿಸಿಕೊಂಡಿದ್ದಾರೆ' ಒಂದು ಸ್ವಾರಸ್ಯಪೂರ್ಣ ನಾಟಕ. ಮುದುಕ ಹುಡುಗನಿಗಾಗಿ ಹುಡುಕುವುದು, ಹುಡುಗ ಹುಡುಗಿಗಾಗಿ ಹುಡುಕುವುದು ನಾಟಕದ ಉದ್ದಕ್ಕೂ ನಡೆದೇ ಇದೆ. ಅವರವರ ವಯೋಧರ್ಮಕ್ಕೆ ಅನುಗುಣವಾಗಿ ಈ ಕ್ರಿಯೆ ಸಾಗುತ್ತದೆ. ಹುಡುಕುವ ಕ್ರಿಯೆ ಸ್ವಲ್ಪ ಯಾಂತ್ರಿಕ ಎನಿಸಿದರೂ ಸ್ವಾರಸ್ಯವಾಗಿದೆ. ಹೀಗೆ ಸ್ವಾರಸ್ಯವಾಗಿ ತೊಡಗುವ ನಾಟಕ, ಮೆಲ್ಲಗೆ ಗಂಭೀರವಾಗುತ್ತಾ ಹೋಗುತ್ತದೆ. ನಾಟಕದ ಅಂತ್ಯದಲ್ಲಿ ಬರುವ ಫುಟ್ ಬಾಲ್

ಆಟ, ಆ ಸಂಬಂಧದಲ್ಲಿ ಬರುವ ಕ್ರಿಯೆ ಹಾಗೂ ಮಾತುಗಳು ಫುಟ್ ಬಾಲ್ ಆಟದಂತೆ ನಮ್ಮ ಜೀವನ ಎನ್ನುವ ತತ್ವವನ್ನು ಸಾರುತ್ತವೆ. ಲಘುವಾಗಿ ಪ್ರಾರಂಭವಾದ ನಾಟಕ ನಿಧಾನಗತಿಯಲ್ಲಿ ಗಂಭೀರವಾಗಿ ಸಾಗಿ, ತತ್ವವೊಂದನ್ನು ಸಾರುವುದರ ಮೂಲಕ ಮುಕ್ತಾಯವಾಗುತ್ತದೆ. ನಾಟಕ ಧ್ವನಿಪೂರ್ಣವಾಗಿದೆ.

ಮಕ್ಕಳ ನಾಟಕವೆಂದರೆ ಮಕ್ಕಳ ವಯೋಮಿತಿಗೆ ಗ್ರಹಣಮಿತಿಗೆ ಮೀರಿದ ವಸ್ತುವುಳ್ಳ ನಾಟಕವಾಗಬಾರದು ಎನ್ನುವುದು ಅದರ ಅರ್ಥ. ಅಂದರೆ ಮಕ್ಕಳು ತಮ್ಮನ್ನು ತಾವು ಪ್ರದರ್ಶನದಲ್ಲಿ ಒಳಗುಮಾಡಿಕೊಂಡರೆ—ಈ ಪ್ರದರ್ಶನವನ್ನು ಅರ್ಥಮಾಡಿಕೊಂಡರೆ—ಆ ನಾಟಕ ಮಕ್ಕಳ ನಾಟಕವಾಗುತ್ತದೆ ಎಂದಷ್ಟೆ ಹೇಳಬಹುದು. ಇಲ್ಲಿ ಆಯ್ಕೆಮಾಡಿರುವ ಚಂದ್ರಶೇಖರ ಕಂಬಾರರ 'ಕಿಟ್ಟಿಯ ಕಥೆ' ನಿಜಕ್ಕೂ ಮಕ್ಕಳ ನಾಟಕ. ಒಂದೆರಡು ಸಂದರ್ಭಗಳಲ್ಲಿ ಬರುವ ಮಾತುಗಳು, ಮಕ್ಕಳ ವಯಸ್ಸಿಗೆ ಮೀರಿದವು ಎಂದು ಅನ್ನಿಸಿದರೂ, ಅಂತಹ ಮಾತುಗಳನ್ನು ಕೈಬಿಡುವುದರಿಂದ ನಾಟಕದ ಒಟ್ಟು ಓಟಕ್ಕೆ ಏನೂ ಬಾಧಕವಾಗುವುದಿಲ್ಲ. ಜನಪದ ಕಥೆಯ ಆಧಾರದ ಮೇಲೆ ರಚಿಸಿರುವ ಈ ನಾಟಕದ ನಾಯಕ ಇಂದಿನ ರಾಜಕೀಯ ನಾಯಕನನ್ನು ಹೋಲುತ್ತಾನೆ. ನಾಟಕದ ನಾಯಕ ಕಿಟ್ಟಿ, ಹತ್ತು ಪೈಸೆಯಲ್ಲೇ ಮದುವೆಯಾಗಬೇಕೆಂಬ ಮಹತ್ವಾಕಾಂಕ್ಷೆ ಹೊಂದಿ, (ಮಕ್ಕಳ ಸಹಜ ಸ್ವಭಾವದಂತೆ) ಗುರಿಮುಟ್ಟುವ ಮಾರ್ಗದಲ್ಲಿ ಬಂದ ಎಲ್ಲ ಸಂದರ್ಭಗಳನ್ನೂ ತನ್ನ ಸ್ವಾರ್ಥಸಾಧನೆಗೆ ಉಪಯೋಗಿಸಿಕೊಳ್ಳುವುದು ಇಂದಿನ ರಾಜಕೀಯ ನಾಯಕನ ಲಕ್ಷಣಗಳನ್ನು ಪ್ರತಿಬಿಂಬಿಸುತ್ತದೆ. ಒಂದು ಕಡೆ ಕಿಟ್ಟಿಯ ಆಸೆ ಮತ್ತೊಂದು ಕಡೆ ರಾಜಕೀಯ ನಾಯಕನ ಸ್ವಾರ್ಥಸಾಧನೆ—ಎರಡನ್ನೂ ಹೇಳುವ ಈ ನಾಟಕ, ವಸ್ತುವನ್ನು ಹೀಗೆ ಎರಡು ಸ್ತರಗಳಲ್ಲಿ ಅರ್ಥೈಸುತ್ತದೆ. ಬಯಲಾಟದ ಶೈಲಿಯ ಈ ನಾಟಕ ರಂಜನೆಯ ಮೂಲಕ ತನ್ನ ಉದ್ದೇಶವನ್ನು ಪೂರೈಸುತ್ತದೆ. ಭಾಷೆ ಸರಳವಾಗಿದ್ದು, ಮಕ್ಕಳಿಗೆ ಖುಷಿಕೊಡುವ ನಾಟಕ. ಪ್ರದರ್ಶನಕ್ಕೂ ಸಹ ಇದು ಹೇಳಿ ಮಾಡಿಸಿದಂತಿದೆ.

ಹೊಸ ಸಂವೇದನೆಗೆ ಉತ್ತರ ಕರ್ನಾಟಕದ ಆಡುನುಡಿಯನ್ನು ತೊಡಿಸಿ ನಾಟಕಗಳನ್ನು ರಚಿಸುತ್ತಿರುವ ಚಂದ್ರಶೇಖರ ಪಾಟೀಲರು ತಮ್ಮ ನಾಟಕಗಳಿಂದ ಎಲ್ಲರ ಗಮನ ಸೆಳೆದಿದ್ದಾರೆ. ಇವರು ಹೆಚ್ಚಾಗಿ ಏಕಾಂಕಗಳನ್ನೇ ರಚಿಸಿದ್ದಾರೆ. ಇವುಗಳಲ್ಲಿ ಬಹುಮಟ್ಟಿನವು ಗಂಭೀರ ಪ್ರಹಸನಗಳು. ಈ ಸಂಗ್ರಹದಲ್ಲಿರುವ 'ಟಿಂಗರ ಬುಡ್ಡಣ್ಣ' ಅವರು ರಚಿಸಿರುವ ಪ್ರಹಸನಗಳಲ್ಲಿ ಅತ್ಯುತ್ತಮ ಪ್ರಹಸನವೆನ್ನಬಹುದು. ಜನಪದ ಕಥೆಯೊಂದರ ಮೇಲೆ ರಚಿತವಾಗಿದ್ದರೂ, ಈ ನಾಟಕ ಸಮಕಾಲೀನತೆಯನ್ನು ಒಳಗೊಂಡಿದೆ. ತಾಯಿಯಿಂದ ಕಲಿತ ಮಂತ್ರದ ಬಲದಿಂದ ಒಬ್ಬೊಬ್ಬರನ್ನಾಗಿ ಕೊಂದು, ಕೊನೆಗೆ ತನ್ನನ್ನೆ ನಾಶಪಡಿಸಿಕೊಳ್ಳುವ ಬುಡ್ಡ, ಪರಮೇಶ್ವರನಿಂದ ವರ ಪಡೆದು ತಾನೇ ನಾಶವಾದ ಭಸ್ಮಾಸುರನ ಕಥೆಯನ್ನು ನೆನಪಿಗೆ ತರುತ್ತಾನೆ. ಇನ್ನೊಬ್ಬರ ದಮನಕ್ಕಾಗಿ ಸೃಷ್ಟಿಸಿಕೊಂಡ ಅಣುಬಾಂಬ್ ಮಾನವಕೋಟಿಯ ವಿನಾಶಕ್ಕೂ ಕಾರಣವಾಗಬಲ್ಲದು ಎನ್ನುವದನ್ನೂ ಸೂಚಿಸುತ್ತದೆ ಈ ನಾಟಕ.

ಗದ್ಯವೂ ಅಲ್ಲದ ಪದ್ಯವೂ ಅಲ್ಲದ 'ಪಗದ್ಯ' ಶೈಲಿಯಲ್ಲಿ ರಚಿತವಾಗಿರುವ ಈ ಸುಂದರ ಕೃತಿ ರಂಗದಮೇಲೆ ಅತ್ಯಂತ ಯಶಸ್ವಿಯಾಗಿದೆ. ವಿವಿಧ ಅರ್ಥಸ್ತರಗಳನ್ನು ಒಳಗೊಂಡಿರುವ ನಾಟಕವಾಗಿದ್ದರೂ, ನಿರ್ದೇಶಕರಿಗೆ ಒಂದು ಸವಾಲಾಗಿದ್ದರೂ, ಸುಲಭವಾಗಿ ರಂಗದಮೇಲೆ ತರಲು ಸಾಧ್ಯ ಆಗಿರುವುದೇ ಇದರ ಯಶಸ್ಸಿಗೆ ಕಾರಣ.

ಶ್ರೀನಿವಾಸರಾಜು ಅವರ 'ಬೀಗದ ಕೈ' ಒಂದು ಮೂಕ ನಾಟಕ. ಮೂಕ ನಾಟಕ ಎಂದರೆ ಮಾತೇ ಇಲ್ಲ ಎನ್ನುವುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ನಾಟಕಕಾರರು ಕೊಟ್ಟಿರುವ ಸೂಚನೆಗಳೆಲ್ಲಾ ರಂಗವಿವರಣೆಗಳು. ಈ ವಿವರಣೆಗಳು ಅಭಿನಯಕ್ಕೆ ಬಹಳ ಅನುಕೂಲವಾಗಿವೆ. ಭರತನು ಹೇಳಿರುವ ಆಂಗಿಕ, ವಾಚಿಕ, ಆಹಾರ್ಯ ಹಾಗೂ ಸಾತ್ವಿಕ ಅಭಿನಯಗಳಲ್ಲಿ ವಾಚಿಕವೊಂದನ್ನು ಬಿಟ್ಟು ಉಳಿದ ಅಭಿನಯಗಳು ಈ ನಾಟಕದಲ್ಲಿ ಅಡಕವಾಗಿವೆ. ಇವುಗಳ ಸಹಾಯದಿಂದಲೆ, ನಾಟಕ ಪ್ರಯೋಗಿಸಬೇಕಾಗಿದೆ. ಈ ನಾಟಕವನ್ನು ಪ್ರಯೋಗಿಸುವಾಗ 'ಸಂದರ್ಭವೇ' ನಾಟಕದ ಕ್ರಿಯೆಯನ್ನು ವಿವರಿಸುತ್ತಾ ಹೋಗಬೇಕು. ಈ ನಾಟಕದಲ್ಲಿ ಮಾತ ನಾಡಲು ಇರುವ ವಾತಾವರಣವನ್ನು ನರಳುವಿಕೆಯ ಮೂಲಕ ತೋರಿಸಿದ್ದಾರೆ. ಚಿಕ್ಕವನು, ದೊಡ್ಡವನು ಹಾಗು ಉಳಿದವರ ಕ್ರಿಯೆ ಬಹಳ ಚೆನ್ನಾಗಿ ಮೂಡಿಬಂದಿದೆ. ಕ್ರಿಯೆ ನಡೆಯುತ್ತಾ ಹೋದಂತೆಲ್ಲ ನಾಟಕ ಗಂಭೀರವಾಗುತ್ತಾ ಹೋಗಿ ಪರಾಕಾಷ್ಠೆಯನ್ನು ಮುಟ್ಟುತ್ತದೆ. ಇಲ್ಲಿ ನಡೆಯುವ ಘಟನೆ ಸರಳವಾಗಿದ್ದು ಯಾರ ಮನಸ್ಸನ್ನಾದರೂ ಮುಟ್ಟುತ್ತದೆ. ಮಾತು ಹೇಳಲಾರದ್ದನ್ನು ಮೌನ ಹೇಳುತ್ತದೆ ಎನ್ನುವ ಮಾತು ಈ ನಾಟಕಕ್ಕೆ ಹೆಚ್ಚು ಅರ್ಥಪೂರ್ಣವಾಗಿ ಅನ್ವಯಿಸುತ್ತದೆ. ಪಂಜರದೊಳಗಿರುವ ಬುಲ್ ಬುಲ್ ಧ್ವನಿಪೂರ್ಣವಾದ ಸಂಕೇತವಾಗಿದೆ. ನಾಟಕದ ಅಂತ್ಯವಂತೂ ಮಾರ್ಮಿಕವಾಗಿದೆ. ಕನ್ನಡ ರಂಗಭೂಮಿಗೆ ಮೂಕನಾಟಕಗಳ ಪ್ರವೇಶದಿಂದ ಹೊಸದೊಂದು ಆಯಾಮ ದೊರೆತಂತಾಗಿದೆ.

ವ್ಯಾಸ ದೇಶಪಾಂಡೆ ಅವರ 'ಮುಂದೇನ ಸಖಿ ಮುಂದೇನ' ಒಂದು ಅಸಂಗತ ನಾಟಕ. ಮಾನವ ಜೀವನದ ಅಂತಿಮ ಗುರಿಯ ಅನ್ವೇಷಣೆಗೆ ಹೊರಟ ನಾಯಕನ ಸೋಲಿನ ಚಿತ್ರಣವೇ ಈ ನಾಟಕದ ವಸ್ತು. ಖಂಬೀರ್ ಕುಮಾರ್ ತನ್ನ ಸುತ್ತುಮುತ್ತು ಇರುವ ಸ್ಥಿತಿಗತಿಗಳನ್ನು ನೋಡಿ ಗೊಂದಲಕ್ಕೆ ಒಳಗಾಗುತ್ತಾನೆ. ಈ ಅಸಹ್ಯ ಬಾಳು ಸರಿಯಲ್ಲ ಎಂದು ಆತ್ಮಹತ್ಯೆಗೆ ಪ್ರಯತ್ನಿಸಿ, ಉಭಯ ಸಂಕಟಕ್ಕೆ ಒಳಗಾಗುತ್ತಾನೆ. ಪ್ರಸ್ತುತ ರಾಜಕೀಯ, ಸಾಮಾಜಿಕ ಸನ್ನಿವೇಶಗಳ ಮೇಲೆ ಬೆಳಕು ಚೆಲ್ಲುವ ಈ ನಾಟಕ ಬದುಕಿನ ವ್ಯಂಗ್ಯವನ್ನು ಚಿತ್ರಿಸುತ್ತದೆ. ನಾಟಕಕಾರರು ಬಳಸಿರುವ ಭಾಷೆ ಚೆನ್ನಾಗಿದ್ದು, ನಿರೂಪಣೆಗಾಗಿ ಏಳು ಗೊಂಬೆಗಳನ್ನು ಉಪಯೋಗಿಸುವ ತಂತ್ರದಲ್ಲೂ ಹೊಸತನವಿದೆ. ಅನ್ವೇಷಣೆಯಲ್ಲಿ ಹೊರಟ ಈ ನಾಟಕ ಎತ್ತರದಲ್ಲಿ ಸಾಗುತ್ತದೆ. ಈ ನಾಟಕದಲ್ಲಿನ ಮುಖ್ಯ ಪಾತ್ರಗಳಾದ ಖಂಬೀರ–ಸಾರಥಿ, ಸಿದ್ಧಾರ್ಥ–ಚೆನ್ನರನ್ನು ನೆನಪಿಗೆ ತರುತ್ತಾರೆ. ಈ ಜೊತೆಯಲ್ಲಿಯೇ ಒಂದು ಧ್ವನಿಯಿದೆ ಎಂದು ಊಹಿಸಿದರೆ ತಪ್ಪಾಗಲಾರದು. ಒಟ್ಟಿನಲ್ಲಿ ಹೆಚ್ಚಿನದನ್ನು ಹೇಳಲು ಹೊರಟ ನಾಟಕ ಇದು.

## ಪಾತ್ರಗಳು

ಶೀನಪ್ಪನಾಯಕ

ಮುಸಲ್ಮಾನ ಗಿರಾಕಿ

ಕೃಷ್ಣಪ್ಪ

ವೃದ್ಧ ಬ್ರಾಹ್ಮಣ

ಸರಸ್ವತಿ ಬಾಯಿ

ಸುಬ್ರಹ್ಮಣ್ಯಾಚಾರಿ

ಇಬ್ಬರು

ಚತುರ್ಮುಖ

# I. ಮುಕುತಿ ಮೂಗುತಿ

## ದೃಶ್ಯ ೧

[ಸುಮಾರು ನಾನೂರ ಐವತ್ತು ವರ್ಷಗಳ ಹಿಂದೆ ಪುಣೆಯಿಂದ ಹದಿನೆಂಟು ಮೈಲು ದೂರದ ಪುರಂದರಗಡದಲ್ಲಿ—ಶೀನಪ್ಪ ನಾಯಕರ ಒಡವೆ ಅಂಗಡಿ. ನಾಯಕರು ಗಲ್ಲದಲ್ಲಿ ಕುಳಿತು ಒಂದು ರತ್ನವನ್ನು ಪರೀಕ್ಷಿಸುತ್ತಿರುವರು. ಎದುರಿಗೆ ಒಬ್ಬ ಮುಸಲ್ಮಾನ ಗಿರಾಕಿ ಕುತೂಹಲದಿಂದ ನೋಡುತ್ತಿರುವನು.] ನೇಪಥ್ಯದಲ್ಲಿ ಬೆಳ್ಳಿ ಬಂಗಾರ ಕೆಲಸದ ಶಬ್ದ ಕೇಳಿ ಬರುತ್ತಿರುವದು.

ಶೀನಪ್ಪ: (ಪರೀಕ್ಷೆ ಮುಗಿಸಿ) ಊಂ. ಸಾಹೇಬರೇ, ಇದು ನಿಮ್ಮ ಸುಲ್ತಾನರ ಹಾರದಲ್ಲಿ ಸೇರಲು ಯೋಗ್ಯವಾದ ರತ್ನ.

ಗಿರಾಕಿ: ನೋಡಿ, ನಾಯಕರೇ ನಾನು ಹೆಚ್ಚು ಹೇಳುವ ಅಗತ್ಯವಿಲ್ಲ. ನಮ್ಮ ಸುಲ್ತಾನರ ಮುಂಗೋಪ ತಮಗೆ ಬಲ್ಲ ವಿಷಯ. ಸ್ವಲ್ಪವಾದರೂ ಅವರಿಗೆ ಸಂಶಯ ಬಂದಿತೋ, ಅಸಮಾಧಾನವಾಯಿತೋ, ಈ ನನ್ನ ತಲೆ ಹೆಗಲನ್ನು ಬಿಡಬೇಕಾಗುತ್ತದೆ.

ಶೀನಪ್ಪ: (ನಗುತ್ತ) ಭಲೆ, ಒಪ್ಪಿದೆ. ದೇಹದಮೇಲೆ ಮನುಷ್ಯನೆನಿಸಿದವನಿಗೆ ಆಸೆ ಹೀಗಿರಬೇಕು. ಇದು ಬಿಟ್ಟು, 'ಈ ದೇಹ ಒಂದಲ್ಲ ಒಂದು ದಿನ ಹೋಗತಕ್ಕದ್ದೇ, ಈ ಎಲುಬು ಚರ್ಮದ ಪೆಟ್ಟಿಗೆ ಒಂದಲ್ಲ ಒಂದು ದಿನ ಕಟ್ಟಿಗೆಯ ಮೇಲೆ ಸುಟ್ಟು ಬೂದಿಯಾಗತಕ್ಕದ್ದೇ. ಮೋಹ ಬೇಡ'—ಎನ್ನುವ ಉಪದೇಶ ಕೇಳಿ ಕೇಳಿ, ಈ ಉಪದೇಶ ಹೇಳುವವರು ಮೊದಲು ಯಾಕೆ ದೇಹ ಬಿಟ್ಟು ಹೋಗವಲ್ಲರು ಎಂದು ನನಗೆ ಎಷ್ಟು ಸಾರಿ ಅನ್ನಿಸಿದೆಯೋ! ತಲೆ ಹೆಗಲ ಮೇಲೆಯೇ ಇರಲಿ ಎನ್ನುವ ಆಸೆ, ಬಿಟ್ಟು ಹೋದೀತು ಎನ್ನುವ ಭಯ, ನನಗೆ ತುಂಬ ಸಂತೋಷವನ್ನುಂಟು ಮಾಡಿವೆ. ಬದುಕಿನ ಬೆಲೆಯನ್ನು ತಾವು ಕಂಡುಕೊಂಡಿರುವುದಕ್ಕೆ ನನ್ನ ಧನ್ಯವಾದಗಳು! ... ಹೆದರಬೇಡಿ, ನಿಮ್ಮ ಸುಲ್ತಾನರಿಗೆ ಹೇಳಿ, ಪುರಂದರಗಡದ ಶೀನಪ್ಪ ನಾಯಕರೇ ಸ್ವತಃ ಪರೀಕ್ಷೆ ಮಾಡಿಕೊಟ್ಟಿದ್ದಾರೆ ಅಂತ ... ಅವರು—

ಗಿರಾಕಿ: ನನಗೆ ಸುಲ್ತಾನರು ಹೇಳಿದ್ದರು—'ಅಲ್ಲಿ ಇಲ್ಲಿ ಹೋಗಿ ಕಲ್ಲಿದ್ದಲು ಚೂರು ತಂದೀಯೆ, ಎಚ್ಚರಿಕೆ, ನೇರ ಪುರಂದರಗಡಕ್ಕೆ ಹೋಗಿ ಶೀನಪ್ಪ ನಾಯಕರ ಅಂಗಡಿಗೇ ಹೋಗು' ಎಂದು.

ಶೀನಪ್ಪ: (ನಗುತ್ತ) ವಿಶ್ವಾಸ, ವಿಶ್ವಾಸ. (ರತ್ನವೊಂದನ್ನು ಯೋಗ್ಯ ಪೆಟ್ಟಿಗೆಯಲ್ಲಿಟ್ಟು ಕೊಡುತ್ತಾ) ಕೊಳ್ಳಿ. ನಮ್ಮ ತಂದೆ ವರದಪ್ಪ ನಾಯಕರ ಕಾಲದಿಂದ ಇಂಥ ಹೆಸರು, ನಂಬಿಕೆ, ವಿಶ್ವಾಸ ಗಳಿಸಿ ಉಳಿಸಿಕೊಂಡು ಬಂದಿದ್ದೇವೆ.

ಗಿರಾಕಿ: ಇವನ್ನು ಸ್ವೀಕರಿಸಬೇಕು. (ಎರಡು ಹೊನ್ನಿನ ಚೀಲಗಳನ್ನು ಮುಂದಿಡುತ್ತಾ) ಸುಲ್ತಾನರು ಆಜ್ಞಾಪಿಸಿರುವರು—'ಬೆಲೆ ಕೇಳಬೇಡ, ಇವನ್ನು ಸುಮ್ಮನೆ ಕೊಟ್ಟುಬಿಡು' ಎಂದು. ಒಪ್ಪಿಸಿಕೊಳ್ಳಬೇಕು.

ಶೀನಪ್ಪ: (ನಗುತ್ತ) ಸುಲ್ತಾನರಿಗೆ ಗೊತ್ತು ರತ್ನದ ಬೆಲೆ. ನಾವು ತೃಪ್ತರಾದೆವೆಂದು ಸುಲ್ತಾನರಿಗೆ ತಿಳಿಸಿ. ವಿಶ್ವಾಸ ಇದೇ ರೀತಿ ಇರಬೇಕೆಂದೂ ತಿಳಿಸಿ.

ಗಿರಾಕಿ: ಅಗತ್ಯವಾಗಿ. ನಾನು ಬರುತ್ತೇನೆ. ನಮಸ್ಕಾರ.

ಶೀನಪ್ಪ: ನಮಸ್ಕಾರ.

(ಗಿರಾಕಿ ನಿಷ್ಕ್ರಮಿಸುವನು. ನಾಯಕರು ಹೊನ್ನಿನ ಚೀಲಗಳನ್ನು ಕಬ್ಬಿಣದ ಪೆಟ್ಟಿಗೆಯೊಳಗೆ ಸೇರಿಸುತ್ತಾ, ಎಡ ನೇಪಥ್ಯ ನೋಡುತ್ತಾ) ಕೃಷ್ಣಪ್ಪಾ, ಕೃಷ್ಣಪ್ಪಾ! (ಬಲ ನೇಪಥ್ಯದಿಂದ ಒಬ್ಬ ವೃದ್ಧ ಬ್ರಾಹ್ಮಣನು ಪ್ರವೇಶಿಸಿ, ನಿಂತು...ಹಿಂತಿರುಗಿ...ಯಾರಿಗೋ ಬಾರೆಂದು ಸನ್ನೆ ಮಾಡಲು ಒಬ್ಬ ಬಾಲಕನು ಬಂದು ನಿಲ್ಲುವನು).
ಏ ಕೃಷ್ಣಪ್ಪಾ!

ಕೃಷ್ಣಪ್ಪ: (ಪ್ರವೇಶಿಸುತ್ತಾ) ಸಾಹುಕಾರರೇ!

ಶೀನಪ್ಪ: ಆ ವಿಜಯನಗರದ ಅರಸರ ಉಂಗುರದ ಕೆಲಸ—?

ಕೃಷ್ಣಪ್ಪ: ಮುಗಿಯಿತು..., ಮೆರಗು ಕೊಡುತ್ತಿದ್ದಾರೆ— ಇವತ್ತು ಮಧ್ಯಾಹ್ನ...

ಶೀನಪ್ಪ: ನೀವೇ ಹೋಗಬೇಕು.

ಕೃಷ್ಣಪ್ಪ: ನಾನೇ ಹೋಗುತ್ತೇನೆ.

ಶೀನಪ್ಪ: ಎಚ್ಚರಿಕೆ. ರಾಯರಿಗೆ ಮುಂಗೋಪ ಹೆಚ್ಚು. ಉಂಗುರ ಮುಂದಿಟ್ಟು ದೀರ್ಘದಂಡ ಪ್ರಣಾಮ ಹಾಕಿ ಕೈಮುಗಿದು 'ಶೀನಪ್ಪ ನಾಯಕರ ಸೇವೆ' ಎನ್ನಬೇಕು. ತಿಳಿಯಿತೇ?

ಕೃಷ್ಣಪ್ಪ: ಬಲ್ಲೆ ಬಲ್ಲೆ. ಬೆಲೆ—

ಶೀನಪ್ಪ: ಕೇಳುವ ಅಗತ್ಯವಿಲ್ಲ. ಅರಸರು ನನ್ನ ಬೆಲೆ ಬಲ್ಲರು. ಕೊಟ್ಟದ್ದು ಇಸಗೊಳ್ಳಿ. ಹೆಚ್ಚೆ ಇರುತ್ತದೆ. ಹಾಗೆಂದು ಕಣ್ಣು ಅರಳಿಸಿ ಬಾಯಿ ಬಿಡಬೇಡಿ. 'ಮಹಾ ಪ್ರಸಾದ' ಎಂದು ತಲೆ ಬಾಗಿಸಿ ಈಚೆ ಬನ್ನಿ.

ಕೃಷ್ಣಪ್ಪ: ಹಾಗೆಯೇ ಮಾಡುವೆನು.

ಶೀನಪ್ಪ: ಆಮೇಲೇನು ಮಾಡುವಿರಿ? ಹೇಳಿ, ನಿಮ್ಮ ಜಾಣತನ ನೋಡೋಣ.

ಕೃಷ್ಣಪ್ಪ:—ಹಿಂದಿನಿಂದ ಮಂತ್ರಿಗಳ ಬಳಿ ಹೋಗಿ 'ನನ್ನ ಖರ್ಚು ಅಪ್ಪಣೆಯಾಗ ಬೇಕೆಂದು' ಕೇಳುತ್ತೇನೆ.

ಶೀನಪ್ಪ: ಭಲೆ! ಭಲೆ! ನನ್ನ ಲೆಕ್ಕಕ್ಕೆ —

ಕೃಷ್ಣಪ್ಪ: ಉಂಟೇ, ಸಾಹುಕಾರರೇ? ನನಗೆ ಅಷ್ಟು ಗೊತ್ತಿಲ್ಲವೇ? ಅದನ್ನು ವಸೂಲು ಮಾಡಿಯೇ ಬರುವೆನು.

ಶೀನಪ್ಪ: ಭಲೆ ಭಲೆ...ಅದು! ಸೇವಕರೆಂದರೆ ಹೀಗಿರಬೇಕು. ಹೊರಡಿ.

ಕೃಷ್ಣಪ್ಪ: ಅಪ್ಪಣೆ (ನಿಷ್ಕ್ರಮಿಸುವನು).

ಶೀನಪ್ಪ: ಉಂ. (ಇತ್ತ ತಿರುಗಿ ವೃದ್ಧ ಬ್ರಾಹ್ಮಣನನ್ನೂ ಬಾಲಕನನ್ನೂ ಕಂಡು) ಓ! ಅಯ್ಯೋ ಪ್ರಾರಬ್ಧವೇ! ಮತ್ತೆ ವಕ್ಕರಿಸಿದಿರಾ ನೀವು? ಯಾವಾಗ ಬಂದಿರಿ?

ಬ್ರಾಹ್ಮಣ: ನೀವು ಕೃಷ್ಣಪ್ಪನನ್ನು ಕರೆದಾಗ.

ಶೀನಪ್ಪ: ಅವನನ್ನು ಕೂಗಿದರೆ ನೀವು ಯಾಕೆ ಬಂದಿರೀ? ಯಾರು ನಿಮಗೆ ಒಳಗೆ ಬಿಟ್ಟವರು?

ಬ್ರಾಹ್ಮಣ: ಹಯ್ಯೋ, ನನ್ನನ್ನು ಒಳಗೆ ಬಿಡುವವರು ಯಾರು? ಹೊರಗೆ ಹೋಗುವೆನೆಂದರೆ ಬೇಡ ಎಂದು ತಡೆಯುವವರು ಯಾರು? ಹುಟ್ಟಿದಾಗಿನಿಂದಲೂ ನನ್ನ ಹಣೆ ಬರಹ ಹೀಗೇ ಆಗಿಹೋಯಿತು. ನೋಡಿ, ನಾನು ಹುಟ್ಟಿದ್ದು ಸೆರೆಮನೆ ಯಲ್ಲಂತೆ. ನಮ್ಮ ತಂದೆತಾಯಿಯರನ್ನು—ಅವರೇನು ಮಾಡಿದ್ದರೋ ಏನೋ— ಕಾರಾಗೃಹಕ್ಕೆ ಹಾಕಿದ್ದರಂತೆ. ನಮ್ಮ ಸೋದರ ಮಾವನಿಗೆ ನನ್ನ ಪ್ರಾಣದಮೇಲೆ ಹದ್ದಿನ ಕಣ್ಣಿತ್ತಂತೆ. ಇದನ್ನು ತಪ್ಪಿಸಲು ನನ್ನ ಎತ್ತಿ ಹೊರಗೆ ಹೊರಟರಂತೆ. ಯಾರೂ ತಡೆಯಲಿಲ್ಲವಂತೆ. ಆಗ ಹಾಗೆ, ಈಗ ನಾನು ಒಳಗೆ ಬರುವಾಗಲೂ, ... ಯಾಕೆ, ಶ್ರೀಮಂತರೇ ನಗುತ್ತೀರಿ?

ಶೀನಪ್ಪ: (ನಗುತ್ತ) ಅಲ್ರಿ... ವಯಸ್ಸು ಸಾಕಷ್ಟಾಗಿದೆ. ಪುರಾಣವೂ ಬೇಕಾ ದಷ್ಟು ಕೇಳಿದ್ದೀರಿ. ಆ ಕೃಷ್ಣ ದ್ವಾಪರ ಯುಗದಲ್ಲಿ ಹುಟ್ಟಿದ್ದು ಕೇಳಿ, ಹಾಗೇ—

ಬ್ರಾಹ್ಮಣ: ಹಾಗೇ ಏನು; ಹೀಗೆ ಏನು? ಹೇಗಾದರೇನು? ಈ ಕಲಿಯುಗದಲ್ಲಿ ಸತ್ಯ ಹೇಳಿದರೂ ನಂಬುವವರು ಯಾರು?—ನಂಬ ಬೇಕಾದವರೂ ತಾವು ಯಾಕೆ ಹುಟ್ಟಿದೆವು ಅನ್ನುವುದನ್ನು ಮರೆತು ಕೂತಿರುವಾಗ—ದ್ವಾಪರ ಯುಗದ್ದು ಕತೆ ಆಯಿತು ಬಿಡಿ. ಈಗ ನಾನು ಬಂದದ್ದು—

ಶೀನಪ್ಪ: ಯಥಾಪ್ರಕಾರ, ಹಳೆಯ ಕತೆ ... 'ಸಣ್ಣಮಗ, ಪ್ರಾಪ್ತವಯಸ್ಸು, ಉಪ ನಯನ ಮಾಡಬೇಕು, ಸಹಾಯಮಾಡಿ, ಹಣ ಕೊಡಿ' ಅಂತ ನನ್ನ ಪ್ರಾಣ ತೆಗೆಯೊಕ್ಕೆ—

ಬ್ರಾಹ್ಮಣ: ಶಾಂತಂ ಪಾಪಂ, ಶಾಂತಂ ಪಾಪಂ...ಆ ಉದ್ದೇಶ ನನಗಿಲ್ಲ ಶ್ರೀಮಂತರೇ. ಪ್ರಾಣ ತೆಗೆಯುವುದು ಯಾವ ಕಷ್ಟದ ಕೆಲಸ? ಎಷ್ಟು ಹೊತ್ತಿನ ಕೆಲಸ? ಬಲು ಸುಲಭ. ಬಲು ಬೇಗ. ಎಂಥೆಂಥ ಮಹಾ ಮಹಾ ವ್ಯಕ್ತಿಗಳನ್ನ, ಕನಸ್ಸಿನಲ್ಲಿಯೂ ಮನಸ್ಸಿನಲ್ಲಿಯೂ ಸಾವನ್ನು ನೆನಸದಿದ್ದವರನ್ನ, ಯಾವ ದಿಕ್ಕಿನಿಂದಲೋ, ಯಾವನೋ ಒಬ್ಬ ಹಟಾತ್ತಾಗಿ ಕಾಣಿಸಿಕೊಂಡು, ಕಣ್ಣುಮುಚ್ಚಿ ಕಣ್ಣು ತೆಗೆಯುವುದರಲ್ಲಿ ಕೊಂದು ಪ್ರಾಣ ತೆಗೆದಿಲ್ಲ? ಪ್ರಾಣ ತೆಗೆಯುವುದು ಬಲು ಸುಲಭ, ಬಲು ಬೇಗ. ಇಷ್ಟು ಸಣ್ಣ, ಇಷ್ಟು ಸುಲಭ ಕೆಲಸಕ್ಕೆ ನಾನು ಆರು ತಿಂಗಳಿಂದ ನಿತ್ಯ ಬರಬೇಕೇ? (ಇಲ್ಲವೆಂಬಂತೆ ತಲೆಯಾಡಿಸಿ) ಸಾವಿಗೆ ಕ್ಷಣ. ಹುಟ್ಟೋಕೆ ಒಂಭತ್ತು ತಿಂಗಳು. ಮೋಕ್ಷ ಮುಟ್ಟೋಕ್ಕೆ—

ಶೀನಪ್ಪ: ಓ ಹೋ ಹೋ ಹೋ ಹೋ ಎಲ್ಲಿಂದ ಎಲ್ಲಿಂದ ಎಲ್ಲಿಗೆ? ಹಾಗಾದರೆ ಈಗ ನನಗೆ ನೀವು ಮೋಕ್ಷ ಮುಟ್ಟಿಸಲು ಬರುತ್ತಿದ್ದೀರೇನು? ಓ ... ಮೊದಲು, ವೃದ್ಧಾಪ್ಯದಲ್ಲಿ ಪಡೆದ ಆ ನಿಮ್ಮ ಮುದ್ದುಮಗನ ಮುಂಜಿಯ ಮೂರೆಳೆ ಜನಿವಾರದ ಮೋಕ್ಷದ ಹಾದಿ ನೋಡ್ರೀ! ಅದಕ್ಕೆ ಗತಿಯಿಲ್ಲದೆ ಮೂರ ಎರಡಲ ಆರು ತಿಂಗ ಳಿಂದ ಭಿಕ್ಷೆಗೆ ಬಾಯಿ ಬಿಡುತ್ತಿದ್ದೀರಿ ನಾಚಿಕೆಯಿಲ್ಲದೆ—

ಬ್ರಾಹ್ಮಣ: ನಾಚಿಕೆ ಏಕೆ ಶ್ರೀಮಂತರೇ? ಬ್ರಾಹ್ಮಣನಾಗಿ ಹುಟ್ಟಿ 'ಭವತಿ ಭಿಕ್ಷಾಂ ದೇಹಿ' ಎನ್ನುವುದಕ್ಕೆ ನಾಚಿಕೆ ಪಟ್ಟುಕೊಂಡರೆ ಹೊಟ್ಟೆ—

ಶೀನಪ್ಪ: ಬಿಟ್ಟಿಗ್ರಾಸದಿಂದ ಬೆಳೆಸಬಾರದು ಹೊಟ್ಟೆ. ರಟ್ಟೆಮುರಿದು ತಟ್ಟೆದರೊಟ್ಟೆ—

ಬ್ರಾಹ್ಮಣ: ಅದು ನಮಗೆ ಹೇಳಿದ್ದಲ್ಲ.

ಶೀನಪ್ಪ: ಹೇಳಿಸಬೇಕು. ಕಿವಿಗಳಿಗೆ ಕೇಳಿಸಬೇಕು. ಬಿಟ್ಟಿಕೂಳಿನ ಆಸೆ ಬಿಡಿಸ ಬೇಕು. ಈ 'ಭಿಕ್ಷೆ' ಗೆ ಬಹಿಷ್ಕಾರ ಹಾಕುವವರೆಗೂ ನಮ್ಮ ಉದ್ಧಾರ—

ಬ್ರಾಹ್ಮಣ: ಶ್ರೀಮಂತರೇ, ಶ್ರೀಮಂತರೇ, ನಾನು ಪ್ರಾರ್ಥಿಸಿಕೊಳ್ಳುತ್ತೇನೆ. ದಯ ವಿಟ್ಟು ನಿಮ್ಮ ಮನಸ್ಸನ್ನು ಆ ದಿಕ್ಕಿನಲ್ಲಿ ಹಾಯಿಸಬೇಡಿ. ನಮ್ಮ ಉದ್ಧಾರ

ಸುಕ್ಷೇಮದಿಂದ ಇರಬೇಕಾದರೆ ಭಿಕ್ಷೆ ಬೇಡ ಬೇಕಾದವರು ಭಿಕ್ಷೆ ಬೇಡುತ್ತಲೇ ಇರುವಂತೆ ನೋಡಿಕೊಳ್ಳಬೇಕು. ಅವರೂ ರಟ್ಟೆ ಮುರಿದು ರೊಟ್ಟಿ ತಟ್ಟಲಾರಂಭಿಸಿದರೆ ಅಂದಿನಿಂದಲೇ ಸೃಷ್ಟಿ ತಲೆಕೆಳಕಾಗುವುದು ... ಶ್ರೀಮಂತರೇ, ಇನ್ನೊಂದು ದೃಷ್ಟಿಯಿಂದ ನೋಡಿ—ನಾವು ಭಿಕ್ಷೆ 'ಬೇಡ' ದಿದ್ದರೆ, ನೀವು 'ದಾನ' ಕೊಡುವುದು ಯಾರಿಗೆ? ದಾನಕ್ಕೂ ಬಹಿಷ್ಕಾರ ಹಾಕಬೇಕು.

ಶೀನಪ್ಪ: ಹಾಕಬೇಕೇನು, ಎಂದೋ ಹಾಕಿಯಾಯಿತು. ಎಂದು ನಿಮ್ಮ ದಾನಶೂರ ಕರ್ಣನನ್ನು ಅರ್ಜುನನು ಕುರುಕ್ಷೇತ್ರದಲ್ಲಿ ಕೊಂದನೋ ಅಂದೇ ಅರ್ಜುನನೇ ಹಾಕಿಬಿಟ್ಟ ದಾನಕ್ಕೆ ಬಹಿಷ್ಕಾರ, ಭಿಕ್ಷೆ, ದಾನ—

ಬ್ರಾಹ್ಮಣ: ಬೇಡಿ ಬೇಡಿ ಶ್ರೀಮಂತರೇ, ಈ ಹಟ—

ಶೀನಪ್ಪ: ಎಲ ಎಲ...ಇದೀಗ ಸರಿ...ಯಾರದು ಹಟ? ಆರು ತಿಂಗಳಿಂದ ಒಂದು ಬೆಳಗ್ಗೆ ತಪ್ಪದೆ ಬಂದು ಪೀಡಿಸುತ್ತಿರುವವರು ನೀವು! ಹಟ ನನ್ನದೇ? ನೋಡಿ, ನನ್ನ ಮಾತು ಕೇಳಿ. ನಿಮ್ಮ ಆ ಹುಡುಗನನ್ನು ಅವನ ವಯಸ್ಸಿಗೆ ತಕ್ಕ ಯಾವುದಾದರೂ ಕೆಲಸಕ್ಕೆ ಹಾಕಿ—ಯಾವುದಾದರೂ ಮಠಕ್ಕೆ ಸೇರಿ ಪೂಜೆಯ ಹೊತ್ತಿಗೆ ಮಂಗಳಾರತಿಗೆ ಬತ್ತಿ ಹತ್ತಿಸಿ ಕೊಡಲಿ—ನಾಲ್ಕಾರು ದುಡ್ಡು ಸಿಗುತ್ತದೆ. ಸಂಪಾದಿಸಿ ಮುಂಜಿ ಮಾಡಿಕೊಳ್ಳಲಿ. ನೀವೂ ಅಷ್ಟೆ. ಕಾಲಲ್ಲಿ ಬಲವಿಲ್ಲ. ಕೈಯಲ್ಲಿ ಬಲವಿಲ್ಲ. ಯಾರದಾದರೂ ಮನೆಯ ಮುಂದು ಕೂತು ಬಾಗಿಲು ಕಾಯಿರಿ. ಎರಡು ಹೊತ್ತಿನ ಅನ್ನಕ್ಕೆ—

ಬ್ರಾಹ್ಮಣ: ಶ್ರೀಮಂತರೇ, ನಾನು ಬಾಗಿಲು ಕಾದಿಲ್ಲವೆನ್ನುವಿರೇನು?

ಶೀನಪ್ಪ: ಹೌದು ಹೌದು. ಹೌದು ಹೌದು. ಆ ಪುರಾಣವೂ ತಾವು ಕೇಳಿಯೇ ಇರುತ್ತೀರಿ. ಬಲಿ ಚಕ್ರವರ್ತಿಯ ಮನೆಯ ಬಾಗಿಲನ್ನೇ ಕಾಯ್ದ ಮಹಾನುಭಾವರು ತಾವು—

ಬ್ರಾಹ್ಮಣ: ನಾನು ಹೌದೆಂದರೆ ನೀವು ನನ್ನನ್ನು ಹುಚ್ಚು ಮುದುಕ—

ಶೀನಪ್ಪ: ಅನ್ನದೆ ಬಿಟ್ಟೆ, ನನ್ನನ್ನು 'ಹುಚ್ಚ ಶೀನಪ್ಪ' ಅಂತ ಊರೇ ಡಂಗುರ ಹೊಡೆಯೊಲ್ಲವೇ? (ನಗುತ್ತ) ಸಾಕು ಹರಟೆ. ದಯಮಾಡಿ. ಇವತ್ತು ನನಗೆ ಏನೋ ಸಂತೋಷ...ನಿಮ್ಮ ಕಡೆ ತಿರುಗಿದ್ದೇ ಪುಣ್ಯ. ಇಷ್ಟು ಹೊತ್ತು ಮಾತಾಡಿದ್ದೇ ಪುಣ್ಯ.

ಬ್ರಾಹ್ಮಣ: ಖಂಡಿತವಾಗಿ, ನನ್ನ ಕಡೆ ತಿರುಗುವುದು, ನನ್ನೊಡನೆ ಮಾತ ಮಾಡುವುದು ಪುಣ್ಯ ಅಲ್ಲ ಅಂತ ನಾನು ಹೇಗನ್ನಲಿ? ಆಯಿತು, ನಾನು ಸುಮ್ಮನೆ ತಮ್ಮನ್ನು ಸತಾಯಿಸುವುದೂ ಸಾಧುವಲ್ಲ. ನೀವು ಇವತ್ತು ನಿಮ್ಮ ಅಭಿಪ್ರಾಯ

ವನ್ನು ಸ್ಪಷ್ಟವಾಗಿ ಹೇಳಿದಿರಿ 'ನಾಳೆ ಬಾ ನಾಡಿದ್ದು ಬಾ' ಎನ್ನುತ್ತಿದ್ದಿರಿ. ಆಸೆ ಇಟ್ಟುಕೊಂಡು ಬರುತ್ತಿದ್ದೆ. 'ಬಾ' ಎಂದರೆ 'ಬರಬೇಡ' ಎನ್ನುವ ಅರ್ಥ ನನ್ನ ಮಂದಮತಿಗೆ ತೋರಲಿಲ್ಲ. ಹೋಗಲಿ, ಚಪಲ. ಕಡೆಯ ಸಾರಿ ಹೇಳಿ ಬಿಡಿ. ಹೊರಟು ಹೋಗುತ್ತೇನೆ. ಯೋಚನೆ ಮಾಡಿ. ತಾಯಿಯಿಲ್ಲದ ಮಗ, ಸದುದ್ದೇಶ. ನಾನು ಬೇಡುವುದೂ ದೊಡ್ಡದೇನಲ್ಲ---

ಶೀನಪ್ಪ: ಕ್ಷಮಿಸಬೇಕು. ತಾವು ಬಲಿಯ ಮನೆಕಾದವರು. ದೊಡ್ಡ ಬೇಡಿಕೆ ಕತೆ ಸಾಕು. ಮೂರಡಿ ನೆಲ ಕೇಳಿ ಅವನನ್ನು ಪಾತಾಳಕ್ಕೆ ಕಳುಹಿಸಿದಿರಿ. ಮೂರೆಳೆ ಜನಿವಾರಕ್ಕೆ ನೀವು ಕೇಳುವ ಸಣ್ಣ ಬೇಡಿಕೆಗೆ---'ಅಸ್ತು' ಎಂದರೆ ನನ್ನನ್ನು ಎಲ್ಲಿಗೆ ತುಳಿಯುವಿರೋ! ಕ್ಷಮಿಸಬೇಕು. ದಯಮಾಡಿ.

ಬ್ರಾಹ್ಮಣ: ನಾನು ಪುರಾಣ ಸ್ಮರಣೆ ಮಾಡಿಸಿದ್ದೇ ನನಗೆ ಪ್ರತಿಕೂಲವಾಯಿತೇ!! ಶ್ರೀಮಂತರೇ, ತಾವು ನವಕೋಟಿ ನಾರಾಯಣರು---

ಶೀನಪ್ಪ: ಈ ನಾರಾಯಣನಿಗೆ ತಾವು ನಾರದರಾಗಿ ಜ್ಞಾನೋಪದೇಶ ಮಾಡು ತ್ತಿರುವಿರಿ!! ಕಲಿ ಮಹಿಮೆಯೆಂದರೆ ಇದು.

ಬ್ರಾಹ್ಮಣ: ಸಂದೇಹವೇ ಇಲ್ಲ. ಎಲ್ಲ ಅದಲು ಬದಲೇ. ನಾರದ ನಾರಾಯಣರೂ ಅದಲು ಬದಲಾಗುವ ಕಾಲ ಮಹಿಮೆ. ಲೋ, ಚತುರ್ಮುಖ, ನಡಿಯೋ. ನಿನ್ನ ಮುಖ ಪುಣ್ಯ ಇಷ್ಟೇ ಇರುವಾಗ, ನಿನಗೆ ಬ್ರಹ್ಮೋಪದೇಶ—

ಶೀನಪ್ಪ: ವಿಪ್ರರೇ, ಅವನು ಹೆಸರು ಏನೆಂದಿರಿ? ಚತುರ್ಮುಖನೇ?

ಬ್ರಾಹ್ಮಣ: ಹೌದು. ನೋಡಿ, ನಾಲ್ಕು ದಿಕ್ಕಿಗೂ ಮುಖ ತಿರುಗಿಸುತ್ತಾ ನಿಂತಿದಾನೆ. ನಡೆಯೋ. ಬೇರೆ ಯಾವ ಶ್ರೀಮಂತರನ್ನಾದರೂ ಆಶ್ರಯಿಸೋಣ. ಈ ನಗರದಲ್ಲಿ—

ಶೀನಪ್ಪ: ಆಂ? ಬೇರೆ ಶ್ರೀಮಂತ? ಈ ನಗರದಲ್ಲಿ ನನಗಿಂತ? ನಿಲ್ಲಿ...ಉಂ...ರೀ, ಇದು...ಈ ನಿಮ್ಮ ಭಂಡತನಕ್ಕಾದರೂ ಏನಾದರೂ ಪಾರಿತೋಷಕ ಕೊಡಬೇಕು ಅನ್ನಿಸಿದೆ. ತೊಗೊಂಡು ಮೂರೆಳೆ ಹಾಕಿ...ನಾನೇ ಸೋತೆ ಅನ್ನಿ.(ಕಬ್ಬಿಣದ ಪೆಟ್ಟಿಗೆ ತೆಗೆಯುತ್ತಿರಲು) (ಶೀನಪ್ಪ ನಾಯಕನ ಬೆನ್ನ ಹಿಂದೆ—ಮೂಕ ನಾಟಕ —ವೃದ್ಧ ಬ್ರಾಹ್ಮಣ 'ಹೇಗೆ?' ಎಂದು ಬಾಲಕನನ್ನು ಕೇಳುವನು. ಬಾಲಕ ತಲೆಬಾಗಿ ಕೈ ಜೋಡಿಸುವನು. ವೃದ್ಧ ವಿಪ್ರ ಎಚ್ಚರಿಕೆ ಕೊಡುವಂತೆ ಅನಾಮಿಕ ವನ್ನು ಬಾಯಿಗಿಡುವನು).

ಬ್ರಾಹ್ಮಣ: ಶ್ರೀಹರಿ. ಶ್ರೀಹರಿ. ನೀನೆಂತಹ ಕಪಟ ನಾಟಕ ಸೂತ್ರಧಾರಿ! 'ಇಲ್ಲ ಇಲ್ಲ ಇಲ್ಲ ಎನ್ನು', ಎಂದು ಹಟ ಹಿಡಿಸುತ್ತಿ. ಮನಸ್ಸು ಕರಗಿ ಹಟ ಬಿಡಿಸುತ್ತಿ.

ಕಬ್ಬಿಣದ ಪೆಟ್ಟಿಗೆ ತೆಗೆಸುತ್ತಿ. ನಿನ್ನ ಪರೀಕ್ಷೆ ಇಂದಿಗೆ ಮುಗಿಯಿತೇ? ಹರಿದಿವಸ, ಶ್ರೀಮಂತರಿಗೆ ದಾನ ಮಾಡಬೇಕೆಂಬ—

ಶೀನಪ್ಪ: ಹಾಂ...ಬನ್ನಿ...ಇಲ್ಲಿ ಬನ್ನಿ (ಚೀಲದಿಂದ ಹಣ ಸುರಿಯುತ್ತಿರಲು)

ಬ್ರಾಹ್ಮಣ: (ಶಬ್ದ ಕೇಳುತ್ತ) ಸುವರ್ಣ ವೃಷ್ಟಿ. ಸುವರ್ಣ ವೃಷ್ಟಿ. ಶ್ರೀಮಂತರೇ —(ನುಗ್ಗಿ...ಹಣ ನೋಡಿ, ನಗುತ್ತಿರುವ ಶೀನಪ್ಪನನ್ನು ನೋಡಿ) ಶ್ರೀ...ಮಂ ...ತ...ರೇ? ಇದೆಂತಹ ಅಪಹಾಸ್ಯ?

ಶೀನಪ್ಪ: (ನಗುತ್ತ) ಸುವರ್ಣ ವೃಷ್ಟಿ! ಅಪರಂಜಿಯ ಗಟ್ಟಿಗಳು ಸುರಿದುಬಿಟ್ಟಿವೆ, ಚಿನ್ನದ ಜನಿವಾರ ಏರಿಸಿಬಿಡೋಣ ಎಂದುಕೊಂಡು ಬಿಟ್ಟಿರೇನೋ ಅಲ್ಲವೆ?

ಬ್ರಾಹ್ಮಣ: ಎಲ್ಲ ಎಲ್ಲ ದುಡ್ಡಿನ ನಾಣ್ಯಗಳು! ಒಂದೂ ನಡೆಯದ ದುಡ್ಡಿನ ನಾಣ್ಯ ಗಳು? ಎಲ್ಲ ಸವೆದ ದುಡ್ಡಿನ ನಾಣ್ಯಗಳು! ಉಂ. ಆಗಲಿ...ಚತುರ್ಮುಖ, ಅವರು ಅದನ್ನೇ 'ಕೃಷ್ಣಾರ್ಪಣ' ವೆಂದು ಕೊಟ್ಟರೆ (ತಿರುಗಿ, ಚೌಕ ಹಾಸಿ, ಬಾಚಿಕೊಳ್ಳಲು ಕೈ ಚಾಚಲು)

ಶೀನಪ್ಪ: ಏಯ್ ಏಯ್. ಏನಿದು? ಸರಿದೂರ! ನಾನು ಹೇಳಿದ್ದು ಸರಿಯೇ. ಅಷ್ಟನ್ನೂ ಬಾಚಿಬಿಡುವ ಸನ್ನಾಹ! ಭಲೆ...ಬೆರಳು ತೋರಿಸಿದರೆ ಕೈ ನುಂಗುವ ವರಿರುವರಂತೆ. ನೀನು ಕೈ ತೋರಿಸಿದರೆ ಮೈನುಂಗುವ ತಿಮಿಂಗಿಲ ಬ್ರಾಹ್ಮಣ! ನನ್ನ ಮನೆಯನ್ನೇ ದೋಚಲು ನೀನು ಸಂಕೋಚಪಡುವುದಿಲ್ಲವೋ ಏನೋ! ಯಾವುದಾದರೂ ಒಂದು, ಒಂದೇ ಒಂದು ದುಡ್ಡನ್ನು ಆರಿಸಿಕೊಂಡು, ಕಾಲು ಬೆಳಸು...ಹುಂ...ತಿಳಿಯಿತೇ?

ಬ್ರಾಹ್ಮಣ: ಒಂದೇ ದುಡ್ಡು? ಒಂದೇ ಒಂದು ದುಡ್ಡು? ಶ್ರೀಮಂತರೇ ಕ್ಷಮಿಸಿ, ಕಬ್ಬಿಣದ ಪೆಟ್ಟಿಗೆಯಲ್ಲಿಡುವಾಗ ನಿಮ್ಮ ದೃಷ್ಟಿಗೆ ದುಡ್ಡೂ ಒಂದೇ ವರಹವೂ ಒಂದೇ...ಆದರೆ ತೆಗೆದುಕೊಳ್ಳುವಾಗ ವರಹ ಬೇಕು, ಕೊಡುವಾಗ ಸವುಕಲು ದುಡ್ಡು ಸಾಕು ಎನ್ನುವ ಭೇದವಿಲ್ಲದಿದ್ದರೆ—ನನಗೆಷ್ಟು ಸಂತೋಷವಾಗುತ್ತಿತ್ತು! ಕ್ಷಮಿಸಬೇಕು...ಈ ಒಂದು ದುಡ್ಡಿನಿಂದ ನಿಮ್ಮ ಬಡತನಕ್ಕೆಳೆಯುವ ಪಾಪ ನನಗೆ ಬೇಡ. ಹಣ ಭದ್ರಮಾಡಿಕೊಳ್ಳಿ. ತೊಂದರೆ ಕೊಟ್ಟದ್ದಕ್ಕೆ ಕ್ಷಮಿಸಿ. ನಡೆಯೋ, ಚತುರ್ಮುಖ, ಸವುಕಲು ಕಾಸಿನಿಂದ ಮುಂಜಿ ಮಾಡಿಸಿಕೊಂಡು, ಮೂರು ಸಂಜೆಯಲ್ಲಿ ಸಂಧ್ಯಾವಂದನೆ ಮಂತ್ರ ಮರೆತೀಯೆ, ನಡಿ.

(ನಿಷ್ಕ್ರಮಿಸುವರು)

ಶೀನಪ್ಪ: ...ಅದೇನೇನೋ ಹೇಳಿದರಲ್ಲ? ...ಆದರೂ ಅಬ್ಬ ಎಂತಹ ಅಹಂಕಾರ? ...ಸವುಕಲು ಕಾಸು...ಲಕ್ಷ್ಮಿ ಕಾಸಿನ ಸರ ಅವರ ಕೊರಳಿಗೆ ಹಾರ ಬೇಕಿ

ತ್ತೀನೋ! ಮಾಡುವುದು ತಿರುಕೆ! ಬೇಡುವುದು —ಬ್ರಹ್ಮಾಂಡ…ಸದ್ಯಕ್ಕೆ ಕಾಡುವುದು ತಪ್ಪಿತು. ನಾಳಿನಿಂದ ಬರುವುದಿಲ್ಲ…ಆ (ಕಾಸಿನ ಕುಪ್ಪೆ ನೋಡಿ ಸಂತೋಷದಿಂದ) ದೇವರು ಇವತ್ತು ಒಳ್ಳೆಯ ಬುದ್ಧಿ ಕೊಟ್ಟ!

(ಹಣ ಚೀಲಕ್ಕೆ ಸೇರಿಸುತ್ತಿರುವಂತೆ—ತೆರೆ)

## ದೃಶ್ಯ ೨

(ಶೀನಪ್ಪ ನಾಯಕರ ಮನೆಯಲ್ಲಿ—ಸರಸ್ವತಿ ಬಾಯಿ ತುಳಸಿ ಪೂಜೆ ಮುಗಿಸಿ ತಟ್ಟೆ ಬಟ್ಟಲುಗಳನ್ನು ಒಳಗೆ ಒಯ್ಯುವಳು. ವೃದ್ಧ ಬ್ರಾಹ್ಮಣನು ಬಾಲಕನೊಡನೆ ಪ್ರವೇಶಿಸಿ)

ಬ್ರಾಹ್ಮಣ: ತಾಯೀ!

ಬಾಲಕ: ತಂದೆ, ಇದೆಂತಹ ನಾಟಕ?

ಬ್ರಾಹ್ಮಣ: ಮಗು, ಲೋಕ ಕಲ್ಯಾಣಕ್ಕಾಗಿ ಆಡಬೇಕಾಗಿರುವ ಕಪಟ ನಾಟಕ.

ಬಾಲಕ: ಗಂಡ ಆಯಿತು, ಹೆಂಡತಿ. ಇವಳಿಗೇನು ಗಂಡ—

ಬ್ರಾಹ್ಮಣ: ಶ್! ನೀನು ಬಾಲಕ. ಇಷ್ಟೆಲ್ಲ ಶ್ಲೇಷ! ಮಾಯೆಕಳಚೀತು. ಅಕೋ ಬಂದಳು.

(ಸರಸ್ವತಿಬಾಯಿ ಪ್ರವೇಶಿಸುವಳು)

ಸರಸ್ವತಿ: ಓ …ವಿಪ್ರರು ದಯಮಾಡಿಸಬೇಕು.

(ನಮಸ್ಕರಿಸುವಳು)

ಬ್ರಾಹ್ಮಣ: ದೀರ್ಘ ಸುಮಂಗಲೀಭವ. (ಬಾಲಕನೂ ಆಶೀರ್ವಾದ ಮುದ್ರೆ ಹಾಕಿರುವ ಹಸ್ತವನ್ನು ಕೊಡವಿ, ಎಚ್ಚರಿಕೆ ಕೊಟ್ಟು, ಎದ್ದು ನಿಂತ ಸರಸ್ವತಿ ಬಾಯಿಗೆ) ತಾವು ಈ ನಗರದ ಸುಪ್ರಸಿದ್ಧ ಶೀನಪ್ಪ ನಾಯಕರ ಧರ್ಮಪತ್ನಿ, ತಾನೇ?

ಸರಸ್ವತಿ: ಹೌದು. ಆ ಭಾಗ್ಯ ನನ್ನದೇ. ಹೀಗೆ ಜಗುಲಿಯ ಮೇಲೆ ಕೂಡಿ· ಈಗ ಬಂದೆ. (ಒಳಗೆ ಓಡುವಳು)

ಬಾಲಕ: ಪ್ರಶ್ನೆ ಕೇಳುವ ಅಗತ್ಯವೇನಿತ್ತು? ಅವಳು ಯಾರೆಂದು ನಿನಗೆ ಗೊತ್ತಿರಲಿಲ್ಲವೆ?

ಬ್ರಾಹ್ಮಣ: ಈ ನಾಟಕವನ್ನು ದೇವಾನು ದೇವತೆಗಳು ಪ್ರೇಕ್ಷಕರಾಗಿ ನೋಡುತ್ತಿರುವರು. ಅವರಿಗೆ ಈಕೆ ಯಾರೆಂದು ತಿಳಿಯಬೇಡವೆ? ಸೂತ್ರಧಾರ ಪಾತ್ರ ಪರಿಚಯ ಮಾಡಿಕೊಡಬೇಡವೆ? ಶ್! ಅಕ್ಕೋ!

(ಸರಸ್ವತಿಬಾಯಿ ಪ್ರವೇಶಿಸಿ ಅರ್ಘ್ಯ ಪಾದ್ಯಾದಿಗಳಿಂದ ಸತ್ಕರಿಸಿ)

ಸರಸ್ವತಿ: ಈ ಮಗು ಎಷ್ಟು ಮುದ್ದಾಗಿರುವನು! ನಿಮ್ಮ ಮಗನೇ?

ಬ್ರಾಹ್ಮಣ: ಹೌದು.

ಸರಸ್ವತಿ: ಬಾ, ಮಗು. ನಿನ್ನ ತಾಯಿ—? (ಬಾಲಕ ಕಕ್ಕಾ ಬಿಕ್ಕಾಗಿ ನೋಡಲು)

ಬ್ರಾಹ್ಮಣ: ಅವನಿಗೆ ತಾಯಿ ಇಲ್ಲ, ತಾಯಿ.

ಬಾಲಕ: ನನಗೆ ಅಮ್ಮ ಇಲ್ಲ. ನಾನು ಅಪ್ಪನ ಹೊಟ್ಟೆಯಲ್ಲೇ ಹುಟ್ಟಿದ್ದು.

ಬ್ರಾಹ್ಮಣ: ಶ್! ಹುಚ್ಚು ಹುಚ್ಚಾಗಿ ಮಾತನಾಡಬೇಡವೋ! ಸುಮ್ಮನಿರು.

ಸರಸ್ವತಿ: ಹುಚ್ಚೇಕೆ? ಅವನು ಹೇಳಿದುದೂ ದುಸ್ಸಾಧ್ಯವಲ್ಲ. ಚತುರ್ಮುಖ ಬ್ರಹ್ಮ ಹುಟ್ಟಿದ್ದು ತಾಯಿಯ ಹೊಟ್ಟೆಯಲ್ಲಲ್ಲ—

ಬ್ರಾಹ್ಮಣ: ಅಯ್ಯೋ, ಆ ಬ್ರಹ್ಮ, ಆ ವಿಷ್ಣು, ಅವರೆಲ್ಲಿ ನಾವೆಲ್ಲಿ? ಈಗ ನಾವು ಬಂದದ್ದು—

ಸರಸ್ವತಿ: ನನಗೆ ತಮ್ಮ ಪರಿಚಯವಿಲ್ಲ. ಇಂದೇ—

ಬ್ರಾಹ್ಮಣ: ಹೌದು, ತಾಯಿ. ನಾವು ಇಂದೇ ಈ ಭಾಗ್ಯಮಂದಿರವನ್ನು ಪ್ರವೇಶಿಸುತ್ತಿರುವುದು. ತಮ್ಮಿಂದ ನನಗೊಂದುಪಕಾರವಾಗ ಬೇಕಾಗಿದೆ.

ಸರಸ್ವತಿ: ನನ್ನಿಂದಲೇ?

ಬ್ರಾಹ್ಮಣ: ಹೌದು. ನೋಡಿ, ಈ ಹುಡುಗ ಉಪನಯನ ವಯಸ್ಸಿಗೆ ಪ್ರಾಪ್ತನಾಗಿದ್ದಾನೆ. ನಾನೋ ಇದಕ್ಕಾಗಿ ದುಡಿದು ಹಣ ಸಂಪಾದಿಸುವ ವಯಸ್ಸು ಮೀರಿದವನಾಗಿದ್ದೇನೆ. ಬಡವ, ತಾವು ಏನೋ, ಒಂದಷ್ಟು ದ್ರವ್ಯ, ದಯಪಾಲಿಸಿ ಪುಣ್ಯ ಕಟ್ಟಿಕೊಂಡರೆ...

ಸರಸ್ವತಿ: ವಿಪ್ರರೇ, ತಾವು ಹಿರಿಯರು, ಪುರುಷರು. ನಾನು ಕಿರಿಯಳು. ಸ್ತ್ರೀ. ನನಗೆ ಯಾವ ಸ್ವಾತಂತ್ರ್ಯ ಎಲ್ಲಿ ಉಂಟು? ದಾನ ಮಾಡುವ ಪುಣ್ಯ ಹೆಣ್ಣಿಗೆಲ್ಲುಂಟು?

ಬ್ರಾಹ್ಮಣ: ಯಾಗೆಂದರೇನು ತಾಯಿ? ಕೆಲವೇ ವಿಷಯಗಳಲ್ಲಿ ಹೆಣ್ಣಿಗೆ ಶಾಸ್ತ್ರವು ಸ್ವಾತಂತ್ರ್ಯ ಕೊಟ್ಟಿಲ್ಲವೇ ವಿನಹ --

ಸರಸ್ವತಿ: ನನಗೆ ನನ್ನ ಪತಿಯೇ ಸರ್ವಶಾಸ್ತ್ರ. ಆ ಪತಿಕೊಟ್ಟದ್ದು ಬಿಟ್ಟದ್ದು ಅಷ್ಟೇ ನನಗೆ ಪ್ರಸಾದ. ಅವರು, ಕ್ಷಮಿಸಬೇಕು, ನಾನು ಪತಿದೂಷಣೆ ಮಾಡುತ್ತಿರುವೆನೆಂದು ಬಗೆಯ ಬಾರದು. ಪತಿಯಾಜ್ಞೆ ಪರಿಪಾಲಿಸುತ್ತಿರುವೆನೆಂದು ತಿಳಿದುಕೊಳ್ಳಬೇಕು. ಅವರು—

ಬ್ರಾಹ್ಮಣ: ಹೇಳಿ, ತಾಯಿ...ಸಂಕೋಚ ಬೇಡ.

ಸರಸ್ವತಿ: ಅವರಿಗೆ ಈಗ ಲಕ್ಷ್ಮಿ ವಿನಾ ದೇವರಿಲ್ಲ.

ಬ್ರಾಹ್ಮಣ: ನಾರಾಯಣ ಸ್ಮರಣೆ --?

ಸರಸ್ವತಿ: ಅರ್ಧಾಂಗಿ ಸ್ಮರಿಸಿದರೆ ನಿಷೇಧಿಸಿಲ್ಲ.

ಬ್ರಾಹ್ಮಣ: ಪುಣ್ಯ. ಇಲ್ಲದಿದ್ದರೆ ಗಂಡ ಹೆಂಡಿರನ್ನು ದೂರಮಾಡಿದ ಪಾಪ ತಾಕುತ್ತಿತ್ತು!

ಸರಸ್ವತಿ: ನಾನು ಈ ಮನೆಯ ಒಂದು ಹುಲ್ಲುಕಡ್ಡಿಯನ್ನೂ ಎತ್ತಿಕೊಡಲು ಅಸಮರ್ಥಳು.

ಬ್ರಾಹ್ಮಣ: ತ್ಸು ತ್ಸು ತ್ಸು ತ್ಸು...ಬೆಳ್ಳಿ ಬಂಗಾರ ತುಂಬಿ ತುಳುಕುತ್ತಿದ್ದರೂ.

ಸರಸ್ವತಿ: ಅಡಿಗೆಗೆ ಅಕ್ಕಿ ಬೇಳೆ ಅಳೆದುಕೊಟ್ಟು ಅಂಗಡಿಗೆ ಹೊರಡುತ್ತಾರೆ.

ಬ್ರಾಹ್ಮಣ: ಅಬ್ಬ...ಎಂತಹ ದುರ್ದೈವ! ನನಗೆ ಏನೂ ಇಲ್ಲವೆಂಬ ನಿಶ್ಚಿಂತೆ. ನಿಮಗೆ ಇದ್ದೂ ಇಲ್ಲದಂತಿರುವುದು ನಿಜವಾಗಲೂ ಚಿಂತೆ. ಹೋಗಲಿ, ಅವರ ಸಂಪತ್ತಿನ ಒಂದು ಹುಲ್ಲು ಕಡ್ಡಿಯೂ ಬೇಡ. ನಿಮ್ಮ ಸ್ವಂತ-- ಅಂದರೆ ನಿಮ್ಮ ತಾಯಿಯ ಮನೆಯಲ್ಲಿ ಕೊಟ್ಟ ಅದು ಇದು...ನಿಮ್ಮ ಮೂಗಿನಲ್ಲಿ ಕಾಣುತ್ತಿರುವ ಮೂಗುತಿ ಅನ್ನಿ.

ಸರಸ್ವತಿ: ಮೂಗುತಿ?

ಬ್ರಾಹ್ಮಣ: ಹೌದು. ನಿಮ್ಮ ತಾಯಿಯ ಮನೆಯದಾಗಿದ್ದರೆ ಅದರ ಒಡತಿ ನೀವೇ.

ಸರಸ್ವತಿ: ನಾನೇ ನನ್ನ ಪತಿಗೆ ಸೇರಿದ ಮೇಲೆ—

ಬ್ರಾಹ್ಮಣ: ಮೂಗು ಪತಿಗೆ ಸೇರಿದೆ, ಮೂಗುತಿಯ ಮೇಲೆ ಪತಿಗೆ ಹಕ್ಕಿಲ್ಲ. ಇದು ಧರ್ಮಶಾಸ್ತ್ರ.

ಸರಸ್ವತಿ: ಬಲ್ಲೆ...ಆದರೂ...ಅವರಿಗೆ...

ಬ್ರಾಹ್ಮಣ: ಬಲ್ಲೆ, ನಿಮ್ಮ ಮೂಗಿಗಿಂತಲೂ ಮೂಗುತಿಯೇ ಹೆಚ್ಚು ಇದ್ದೀತು ಎಂದು ಬಲ್ಲೆ ..ಆದರೂ, ಮೂಗುತಿ ದಾನ ಪತಿ ದ್ರೋಹವಾಗುವುದಿಲ್ಲವೆಂದು ಶಾಸ್ತ್ರ ಹೇಳುವಾಗ, ಹೆಣ್ಣಿಗೆ ಸಹಜವಾದ ಮರುಕ, ತಾಯಿಯಿಲ್ಲದ ಮಗುವಿನ ಮೇಲಿನ ಮಮತೆ, ಬ್ರಾಹ್ಮಣರಲ್ಲಿ ನಿಮಗಿರುವ ಗೌರವ, ಭಕ್ತಿ, ಆದರ, ...ಧೈರ್ಯದಿಂದ ದಾನ ಮಾಡಿ...ಎಲ್ಲ ಒಳ್ಳೆಯದಾಗುವುದು. ಹರಿದಿವಸ, ಹರಿಪ್ರೀತಿಯೆನ್ನಿ.

ಸರಸ್ವತಿ: ವಿಪ್ರರೆ...ಈಗ ಬಂದೆ. (ಒಳಗೆ ಹೋಗುವಳು)

ಬಾಲಕ: ಆತ್ಮಹತ್ಯೆಗೆ ಸೋಪಾನ ಕಟ್ಟಿಕೊಂಡಳು, ಸಾಧ್ವಿ.

ಬ್ರಾಹ್ಮಣ: ಹಾಗೆನ್ನುವೆಯಾ?

ಬಾಲಕ: ಸಂದೇಹವೇನು? ಇವಳು ಮೂಗುತಿ ಕೊಡುತ್ತಾಳೆ. ನಾವು ತೆಗೆದು ಕೊಳ್ಳುತ್ತೇವೆ. —ಶ್! ...

(ಸರಸ್ವತಿ ಮೂಗುತಿ ಕಳಚಿ ತಟ್ಟೆಯಲ್ಲಿಟ್ಟು ತಂದು ನೇರ ಬೃಂದಾವನ ಸೇರಿ, ತುಳಸಿದಳ ಬಿಡಿಸಿ, ವೃದ್ಧ ಬ್ರಾಹ್ಮಣರನ್ನು ಸೇರಿ)

ಸರಸ್ವತಿ: ವಿಪ್ರರೇ, ದಯವಿಟ್ಟು ಸ್ವೀಕರಿಸಬೇಕು. ಹರಿಪ್ರೀತಿಯಾಗಲಿ. ಬಾಲಕನ ಉಪನಯನ ಮಾಡಿಸಿ.

ಬ್ರಾಹ್ಮಣ: (ಮೂಗುತಿ ತೆಗೆದುಕೊಳ್ಳುತ್ತಾ) ಧನ್ಯೆ ಧನ್ಯೆ...ಇದು ಸಾಮಾನ್ಯ ಮೂಗುತಿಯಲ್ಲ, ಮುಕುತಿಯ ಮೂಗುತಿ...ನಡೆಯೋ ಹೊತ್ತು ಮೀರಿತು!! ಯಾವುದಾದರೂ ಒಡವೆಯ ಅಂಗಡಿಗೆ ಹೋಗಿ ಹಣ ಪಡೆಯೋಣ. ನಡೆ... (ನಿಷ್ಕ್ರಮಿಸುವರು)

ಸರಸ್ವತಿ: 'ಒಡವೆಯ ಅಂಗಡಿ'? ಹರಿ ಹರಿ...ಅವರ ಅಂಗಡಿಗೆ ಮಾತ್ರ ದಾರಿ ತಿರುಗಿಸಬೇಡ...ತಿರುಗಿಸಿದರೂ ಆಗುವ ಅರ್ಥ ಅನರ್ಥಗಳ ಹೊಣೆ ನಿನ್ನದೇ ...ನಿನ್ನದೇ.

— ತೆರೆ —

## ದೃಶ್ಯ ೩

(ಶೀನಪ್ಪ ನಾಯಕರ ಅಂಗಡಿ. ನಾಯಕರು ಕಬ್ಬಿಣದ ಪೆಟ್ಟಿಗೆಗೆ ಬೀಗ ಹಾಕಿ ಮನೆಗೆ ಹೊರಡಬೇಕು. ವೃದ್ಧ ಬ್ರಾಹ್ಮಣರು ಬಾಲಕ ನೊಡನೆ ಪ್ರವೇಶಿಸಿ ಮುಂದೆ ಬರುತ್ತಿರಲು)

ಶೀನಪ್ಪ: ಅಯ್ಯೋ ಮತ್ತೆ ಬಂದಿರಾ? ಗೊತ್ತು ನನಗೆ? ಆರಂಭದಲ್ಲಿ ಅಹಂಕಾರ ಇದ್ದರೂ ಬಿಡಿಕಾಸೂ ಬಿಡದ ಭಿಕ್ಷೆಗೆ— (ವೃದ್ಧ ಬ್ರಾಹ್ಮಣನ ದೈನ್ಯವೆಲ್ಲಿ? ಮೊದಲ ದೃಶ್ಯದಲ್ಲಿ ಮುಸಲ್ಮಾನ ಗಿರಾಕಿ ಕುಳಿತಿದ್ದ ಆಸನದಲ್ಲಿ ಠೀವಿಯಿಂದ ಕುಳಿತು)

ಬ್ರಾಹ್ಮಣ: ಬಾರೋ, ಯಾಕೆ ಹಾಗೆ ನಿಂತಿದ್ದೀಯೆ? ಕೂತುಕೋ ಬಾ, ಕೂತುಕೋ.

(ಬಾಲಕ ಬಂದು ಕೂಡುವನು)

ಶೀನಪ್ಪ: ಏಯ್, ಏನಿದು ಕುಚೋದ್ಯ?

ಬ್ರಾಹ್ಮಣ: ನಾಯಕರೇ, ಕೂಗಬೇಡಿ. ನಿಮಗೆ ಭಿಕ್ಷೆ ಬೇಡವೆನಿಸಿದ ಮೇಲೆ ಹೋಯಿತು ಅದು. ನಾನು ಈಗ ಕೈಮುಗಿದು ದಾನ ಬೇಡುವುದಕ್ಕೆ ಬಂದಿಲ್ಲ.

ಶೀನಪ್ಪ: ಮತ್ತೆ...ಏನಿದು...ಈ...

ಬ್ರಾಹ್ಮಣ: ನಾನು ವ್ಯಾಪಾರ ಮಾಡಲು ಬಂದಿದ್ದೇನೆ. ಇದು ಅಂಗಡಿ. ಇಗೋ ಈ ಮೂಗುತಿ ತೆಗೆದುಕೊಂಡು ಖರೀದಿಗಾದರೆ ಎಷ್ಟು, ಒತ್ತೆಗಾದರೆ ಎಷ್ಟು— ?

ಶೀನಪ್ಪ: (ವೃದ್ಧ ಎಸೆದ ಮೂಗುತಿ ಎತ್ತಿ ನೋಡಿದ ತಕ್ಷಣ) ಇದು? ಇದು? ಇದು? ಈ ಮೂಗುತಿ—ಸುಬ್ಬಣ್ಣಾಚಾರೀ—ಇದು ನಿಮಗೆಲ್ಲಿ ಬಂತು?

ಬ್ರಾಹ್ಮಣ: ಏನು ನಾನು, ಕದ್ದು ತಂದಿರುವೆನೆಂದು ಆಲೋಚನೆಯೋ? ನನಗೆಲ್ಲಿಂದ ಬಂದರೆ ನಿಮಗೇನು? ವ್ಯಾಪಾರವಾಗಲಿ.

ಶೀನಪ್ಪ: ಹಾಗಲ್ಲ.. ...ಇದು......ಇದು...... (ಸುಬ್ಬಣ್ಣಾಚಾರಿ ಪ್ರವೇಶಿಸಲು) ಸುಬ್ಬಣ್ಣಾಚಾರಿ, ಇದು ನೋಡು (ಆಚಾರಿ ನೋಡಿ ನಾಯಕರ ಕಡೆ ತಿರುಗಲು) ಇದನ್ನು ಇವರು ವ್ಯಾಪಾರಕ್ಕೆ ತಂದಿದ್ದಾರೆ.

ಸುಬ್ಬಣ್ಣ: ಇದು...ಇದು...ಅದೇ ಎನ್ನುವಂತಿದೆ...ಆದರೆ ಬೇರೆ ಅಲ್ಲ ಅನ್ನುವುದೂ—

ಬ್ರಾಹ್ಮಣ: ಏನಿದು ನಿಮ್ಮ ಒಗಟು ಪ್ರಶ್ನೋತ್ತರ? ನನಗೆ ಹೊತ್ತಿಲ್ಲ. ಬೇಗ ಹೇಳಿ ಖರೀದಿಗಾದರೆ ಎಷ್ಟು— ?

ಶೀನಪ್ಪ: ಹಾಗಲ್ಲ...ಇದು...ಇದು ಅದೇ ಇರಬೇಕು, ಸುಬ್ಬಣ್ಣಾಚಾರಿ...ಇರಲಿ, ನೀನು ಹೋಗು...ವಿಪ್ರರೇ, ಇದು ನಿಮಗೆ ಯಾರಾದರೂ ದಾನಕೊಟ್ಟರೇ ಹೇಗೆ ಎಂದು ಸುಮ್ಮನೆ ಕುತೂಹಲಕ್ಕೆ ಕೇಳಿದೆ ಅಷ್ಟೆ. ನಾನು ಇಂತಹದನ್ನೇ ಒಂದನ್ನು ಅನೇಕದಿನಗಳಿಂದ ನೋಡುತ್ತಿದ್ದೆ.

ಬ್ರಾಹ್ಮಣ: ನೀವು ಯಾವುದನ್ನು ನೋಡುತ್ತಿದ್ದಿರೊ, ಏನೋ! ನಾವಂತೂ ಇಲ್ಲಿಂದ ಹೊರಟೆವು. ಎಲ್ಲೆಲ್ಲೋ ಸುತ್ತಿ ಒಂದು ಮನೆಯನ್ನು ಸಮೀಪಿಸಿದೆವು. ಓರ್ವ ಸ್ತ್ರೀ ತುಳಸಿಪೂಜೆ ಮಾಡುತ್ತ ಹಾಡುತ್ತಿದ್ದುದು ಕೇಳಿಸಿತು. ಒಳಗೆ ಹೋದೆವು. ಆದರದಿಂದ ಸತ್ಕರಿಸಿದಳು.

ಶೀನಪ್ಪ: ಅರ್ಘ್ಯ ಪಾದ್ಯಾದಿಗಳಿಂದ—?

ಬ್ರಾಹ್ಮಣ: ಹೌದು.

ಶೀನಪ್ಪ: ಜಗುಲಿಯ ಮೇಲೆ ಕೂಡಿಸಿ—?

ಬ್ರಾಹ್ಮಣ: ಹೌದು.

ಶೀನಪ್ಪ: ಆಮೇಲೆ?

ಬ್ರಾಹ್ಮಣ: ಯಥಾ ಪ್ರಕಾರ, ಕತೆ ಹೇಳಿದೆ. ಮೂಗಿನಿಂದ ಮೂಗುತಿ ತೆಗೆದು ಕೊಟ್ಟಳು.

ಶೀನಪ್ಪ: ಊಹೂ? ಅವಳು...ಅವಳ...ಅವಳ ಹೆಸರು?

ಬ್ರಾಹ್ಮಣ: ನಾನರಿಯೆ...ನನಗೆ ಬೇಕಾಗಿದ್ದುದು ಮೂಗುತಿ, ಅವಳ ಹೆಸರಲ್ಲ. ನಾಕೇಳಲಿಲ್ಲ. ಅವಳು ಯಾರಾದರೆ ನನಗೇನು? ನಿಮಗೇನು? ಒಟ್ಟಿನಲ್ಲಿ ಅವಳು ದಯಾಮಯಿ. ನೀವು ಬೆಲೆ ಕಟ್ಟಿ—ವ್ಯಾಪಾರಮಾಡಿ. ನಾಯಕರೇ ಏನು ನೋಡುತ್ತಿರುವಿರಿ? —ನನ್ನ ಮಾತು—

ಶೀನಪ್ಪ: ಆಂ? ಕೇಳಿತು...ಕೇಳಿತು...ಇದು ಹೀಗೆ ಮಾಡೋಣ ನಿಮಗೆ ಹಣ—ಎರಡು ನೂರು—

ಬ್ರಾಹ್ಮಣ: (ನಗುತ್ತ) ನಿಧಾನವಾಗಿ ಯೋಚಿಸಿ. ನಾಲ್ಕು ನೂರಕ್ಕೆ ಕಡಿಮೆ ನಾನು ಮುಟ್ಟುವವನಲ್ಲ. ನಡೆಯೋ, ಚತುರ್ಮುಖ, ಅವರು ಯೋಚಿಸಲಿ. ನಾವು—ಹೋಗಿ ಬರೋಣ. (ಹೊರಡಲು)

ಶೀನಪ್ಪ: ಬ್ರಾಹ್ಮಣರೇ...ಇದು...

ಬ್ರಾಹ್ಮಣ: ಅದು ಇರಲಿ...ನನಗೆ ಭಯವಿಲ್ಲ...ಭದ್ರವಾಗಿಡಿ...ಯೋಚಿಸಿ ತೀರ್ಮಾನಕ್ಕೆ ಬನ್ನಿ. ನಾವು, ವಿಠಲ ದೇವಾಲಯಕ್ಕೆ ಹೋಗಿ ಬರುವೆವು. ನಡೆಯೋ (ನಿಷ್ಕ್ರಮಿಸುವರು)

ಶೀನಪ್ಪ: ಹೊರಟೇ ಹೋದರು. ಸುಬ್ಬಣ್ಣಾಚಾರೀ...

ಸುಬ್ಬಣ್ಣ: (ಪ್ರವೇಶಿಸಿ) ಸಾಹುಕಾರರೇ...?

ಶೀನಪ್ಪ: ಅವರು ಇದನ್ನು ಇಲ್ಲೇ ಬಿಟ್ಟು ಹೋದರು. ಅವರ ಹಿಂದೆ ಯಾರನ್ನಾದರೂ ಕಳಿಸು. ಅವರ ಒಡವೆ...ಸುಬ್ಬಣ್ಣಾಚಾರಿ...ಆ ಸ್ತ್ರೀ.

ಸುಬ್ಬಣ್ಣಾ: ಯಾವ ಸ್ತ್ರೀ, ಸಾಹುಕಾರರೇ?

ಶೀನಪ್ಪ: ಅವಳೇ...ಅಂ? ಏನಂದಿ? ನೀನು ಮೂರ್ಖ...ಒಳಗೆ ಹೋಗು. ನಿನ್ನನ್ನು ಯಾರು ಕರೆದರು?

ಸುಬ್ಬಣ್ಣಾ: ತಾವೇ ಕರೆದಿರಿ.

ಶೀನಪ್ಪ: ನಾನು ಕರೆದೆನೇ? ಇಲ್ಲ...ನಾನು ಕರೆಯಲಿಲ್ಲ ಹೋಗು. (ಸುಬ್ಬಣ್ಣಾಚಾರಿ ಕಣ್ಣು ಪಿಳಿ ಪಿಳಿ ಮಾಡಿ, ಏನೋ ವಿಷಯ ತಿಳಿಯಲಿಲ್ಲವೆಂಬಂತೆ ತಲೆಮಾಡಿಸಿ ಮರೆಯಾಗುವನು.) ಇದು ಇದು...ಅವಳೇ...ಇಂತಹ ಅಮೂಲ್ಯ ಆಭರಣವನ್ನು ಬಿಟ್ಟು ಹೋದರಲ್ಲ...ಗುಡಿಗೆ ಹೋಗಿ ಬರುವೆನೆಂದರು...ಅಷ್ಟರಲ್ಲಿ ...ಅಷ್ಟರಲ್ಲಿ...ಬಾಂ ಹೀಗೆ ಮಾಡಿ...ಇದರ ಮೂಲ ಶೋಧಿಸುವೆ...ಸುಬ್ಬಣ್ಣಾಚಾರಿ...ನನ್ನ ಮೊಹರು ತೆಗೆದುಕೊಂಡು ಬಾ...ಇದನ್ನು ಭದ್ರವಾಗಿ ಪೆಟ್ಟಿಗೆಯಲ್ಲಿಟ್ಟು, ಮೊಹರುಮಾಡಿ...ನಂತರ...ನಂತರ—

— ತೆರೆ —

ದೃಶ್ಯ ೪

(ಶೀನಪ್ಪ ನಾಯಕರ ಮನೆಯಲ್ಲಿ ಪೂಜಾಗೃಹ. ಸರಸ್ವತಿ ಹರಿಕೀರ್ತನೆ ಮಾಡುತ್ತಾ ಕುಳಿತಿರುವಳು)

ಶೀನಪ್ಪ: (ಹೊರಗಿನಿಂದ) ಸರಸ್ವತಿ...ಸರಸ್ವತಿ...

ಸರಸ್ವತಿ: ಬಂದರು— (ಏಳುತ್ತಾ) ಬಂದೇ... (ಹೊರಡುವಳು)

ಶೀನಪ್ಪ: (ಪ್ರವೇಶಿಸಿ) ಸರಸ್...(ಹೆಂಡತಿಯ ಮೂಗಿನಲ್ಲಿ ಮೂಗುತಿಯಿಲ್ಲದಿರುವುದನ್ನು ಕಂಡು, (ನಿಲ್ಲಲು).

ಸರಸ್ವತಿ: ಏನು? ಅಂಗಡಿ ಕೆಲಸವಾಯಿತೆ? ನೀರು ಮನೆಗೆ ನಡೆಯಿರಿ. ಬಿಸಿನೀರಿನಲ್ಲಿ ಕಾಲುಕೈ ತೊಳೆದು...ಹೀಗೇಕೆ ನೋಡುತ್ತಿರುವಿರಿ? (ಮೂಗುತಿ ವೃತ್ತಾಂತ ಸ್ಮರಣೆಗೆ ಬರುವುದು)...

ಶೀನಪ್ಪ: ನೀನು ನನ್ನ ಕಾಲುಕೈ ತೊಳೆಯುವೆಯೋ? ಮನೆ ತೊಳೆಯುವೆಯೋ?

ಸರಸ್ವತಿ ಸ್ವಾಮಿ— ?

ಶೀನಪ್ಪ: ನಿಲ್ಲಿಸು, ನಿನ್ನ ನಾಲಿಗೆ ಕೊನೆಯ ಪತಿ ಭಕ್ತಿ. ಇಗೋ (ಸಮೀಪದಲ್ಲಿದ್ದ ಕನ್ನಡಿಯನ್ನು ತಂದು ಹೆಂಡತಿಯ ಮುಖಕ್ಕೆ ಹಿಡಿದು) ನೋಡಿಕೋ, ನಿನ್ನ ಮುಖವನ್ನು.

ಸರಸ್ವತಿ: ನನ್ನ ಮುಖ? ಏನಾಗಿದೆ? ದಯವಿಟ್ಟು—?

ಶೀನಪ್ಪ; 'ಏನ್ ಆಗಿದೆ?' ನಿನ್ನ ಕಣ್ಣು ಇಂಗಿರಬೇಕು. ಕಾಣಿಸುತ್ತಿಲ್ಲವೇ ನಿನ್ನ ಮೂಗಿನ ಭಣ ಭಣ? ಅಥವಾ ನನ್ನೊಡನೆ ನಾಟಕವಾಡುವೆಯೋ?... ಎಲ್ಲಿ ಮೂಗುತಿ?... (ಕೈ ನೀಡಿನಿಲ್ಲಲು)

ಸರಸ್ವತಿ: ಮೂಗುತಿ?...ಮೂಗುತಿ...?

ಶೀನಪ್ಪ: ಮಾತಾಡು...ಸುಬ್ಬಣ್ಣಾಚಾರಿ...ಬಾ (ಅವನು ಬರಲು) ಅಗೋ ನೋಡಲ್ಲಿ (ಹೆಂಡತಿಯ ಮೂಗನ್ನು ತೋರಿ) ಅದೇ...ಅದೇ ಅದು... (ಹೆಂಡತಿಗೆ) ಏಕೆ ಮೂಕಿಯಾದೆ, ಎಲ್ಲಿ ಮೂಗುತಿ?

ಸರಸ್ವತಿ: ಮೂಗುತಿ...ಎಣ್ಣೆಕೂತಿತ್ತು...ಏಕಾದಶಿ...ಬಿಡುವಿತ್ತೆಂದು...

ಶೀನಪ್ಪ: ಹೊಂ? ಎಣ್ಣೆಕೂತಿತ್ತೋ? ಶೀಗೆ ಹುಡಿ ನೆನೆ ಹಾಕಿರುವೆಯೋ? ಈಗಲೇ ಅಭ್ಯಂಜನ ಮಾಡಿಸಿ ಮೂಗಿನಲ್ಲಿಟ್ಟು ಬಂದು ನಿಲ್ಲು. ಈಗ ಈಗಿಂದೀಗ!

ಸರಸ್ವತಿ: ಅವಸರವೇಕೆ? ಸೂರ್ಯ ನೆತ್ತಿಗೆ ಬಂದಿದ್ದಾನೆ. ದಣಿದು ಬಂದಿದ್ದೀರಿ. ಫಲಹಾರ ಮಾಡಿ—

ಶೀನಪ್ಪ: ಬೇಡ ಈ ಅಧಿಕ ಪ್ರಸಂಗತನ. ನಾನು ದಣಿದು ಬಂದಿಲ್ಲ. ದಾಂಡಿಗನಾಗಿದ್ದೇನೆ. ನನಗೆ ಫಲಹಾರ ಬೇಕಿಲ್ಲ. ಹೊಟ್ಟೆತುಂಬಿದೆ. ಮೂಗುತಿ ಬೇಕು. ಈ ಕ್ಷಣ ತೆಗೆದುಕೊಂಡು ಬಾ. ಅಷ್ಟರಲ್ಲಿ, ಸುಬ್ಬಣ್ಣಾಚಾರಿ, ಹೀಗೆ ಬಾ... (ನೇಪಥ್ಯಕ್ಕೆ ಕರೆದೊಯ್ಯುತ್ತಾ) ನೀನೀಗಲೇ ನೇರ ಹೋಗಿ...ನನ್ನ ಮಾತನ್ನು ಜಾಗ್ರತೆಯಿಂದ ಕೇಳು— (ಏನೋ ಹೇಳುತ್ತಿರಲು)

ಸರಸ್ವತಿ: ಹರಿಹರಿ. ನಾನು ನೆನಸಿದಂತೆಯೇ ಆಯಿತು. ಆ ಬ್ರಾಹ್ಮಣರು ಮೂಗುತಿಯನ್ನು ಮಾರಲು ಇವರ ಅಂಗಡಿಗೇ ತೆಗೆದುಕೊಂಡು ಹೋಗಿರಬೇಕು. ಆಯಿತು. ಶ್ರೀಹರಿ (ಮಂದಾಸನದ ಬಳಿ ಕುಳಿತು ವಿಠ್ಠಲನಿಗೆ) ನನ್ನನ್ನು ಪರೀಕ್ಷಿಸಲು ಈ ಸಂಕಟಕ್ಕೆ ಸಿಲುಕಿಸಿದೆಯಾ? ಪತಿಗೆ ಬೇಡದಿದ್ದರೂ ನಾನು ನಿನ್ನನ್ನು ಭಕ್ತಿಯಿಂದ ಆರಾಧಿಸುತ್ತಿದ್ದುದು ನನ್ನ ಅಪರಾಧವಾಯಿತೇ? ಹರಿದಾಸರ ಮನೆಯಲ್ಲಿ ಹುಟ್ಟಿ ಹರಿದಾಸರನ್ನು ಲೆಕ್ಕಿಸದೆ ಸಿರಿದಾಸರಾದ ಪತಿಗೆ ನಾನು ನಿನ್ನ ನಾಮಸ್ಮರಣೆ ಮಾಡಿರೆಂದು ಪೀಡಿಸುತ್ತಿದ್ದುದು ಪತಿದ್ರೋಹವಾಯಿತೇ? ವೃದ್ಧ ಬ್ರಾಹ್ಮಣರ ಬಡತನಕ್ಕೆ ಮರುಗಿ, ಮುದ್ದು ಬಾಲಕನ ಉಪನಯನಕ್ಕೆ ಹರಿಸಮರ್ಪಣೆಯೆಂದು ನಾನು ಮಾಡಿದ ದಾನ ಅಪಚಾರ

ವಾಯಿತೆ? ...ನಾನು ವಿಚಾರ ಮಾಡಲಿಲ್ಲವೇ? ನನಗೆ ಸ್ವಾತಂತ್ರ್ಯವಿಲ್ಲವೆಂದು ಹೇಳಲಿಲ್ಲವೇ? ಆ ವಿಪ್ರರು ಧರ್ಮಸೂಕ್ಷ್ಮ ನಿರೂಪಿಸಲಿಲ್ಲವೆ? ಈಗ...ಈಗ... ಇವರ ಮುಂದೆ...ಇವರ ಮುಂದೆ...ನನ್ನ ನಾಲಿಗೆಯಿಂದ ಸುಳ್ಳನ್ನೇಕೆ ನುಡಿಸಿದೆ, ಶ್ರೀಹರಿ? ಎಲ್ಲಿಯ ಎಣ್ಣೆ? ಎಲ್ಲಿಯ ಶೀಗೆಪುಡಿ? ಎಲ್ಲಿಯ ಸ್ನಾನ? ನಾನು ಪಾಪಾತ್ಮಳೇ ಇರಬೇಕು. ಅವರೂ ಈಗ ಬಿಡುವವರಲ್ಲ. ಬಡಿದಾರು ಸೇವ ಕರೆದುಂಗೆ, ಅಕ್ಕಪಕ್ಕದವರೆದುರಿಗೆ ನಾನು ಅವಮಾನ ಸಹಿಸಲಾರೆ. ನನಗಿನ್ನು ಪ್ರಾಣತ್ಯಾಗವೇ ಪರಿಹಾರ. (ಮೂಗು ಬೊಟ್ಟು ತೆಗೆದು ಅರೆದು ನೀರಿಗೆ ಏಜ್ರ ಬೆರೆಸಿ ವಿಷ ಸಿದ್ಧಮಾಡಿಕೊಳ್ಳುತ್ತ) ಆದರೆ ನಾನು ಯಾವ ಅಪರಾಧವನ್ನೂ ತಿಳಿವಳಿಕೆ ಪೂರ್ವಕ ಮಾಡಿಲ್ಲ. ತಪ್ಪೆಂದು ನನಗೆ ಒಂದು ಮಾತು, ...ಒಂದು ಸೂಚನೆ ಕೊಟ್ಟಿದ್ದರೆ, ನಾನು ಅವರ ಮನಸ್ಸಿನ ವಿರುದ್ಧ ನಡೆಯುತ್ತಿರಲಿಲ್ಲ. ಈಗ...ಈಗ...ಆದದ್ದು ಆಗಿಹೋಯಿತು. ನಿನಗೆ ಪ್ರೀತಿಯಾಗಲೆಂದು ಮೂಗುತಿ ದಾನಮಾಡಿದೆ, ನಿನಗೆ ಪ್ರೀತಿಯಾಗಲೆಂದು ನನ್ನ ಪ್ರಾಣ ಸಮರ್ಪಣೆ ಮಾಡುತ್ತಿದ್ದೇನೆ. ನಿನ್ನ ಸಂತೋಷ. ನಿನ್ನ ಸಂತೋಷ ಶ್ರೀಹರಿ ಶ್ರೀಹರಿ (ಲೋಟ ತುಟಿಗೆ ಎತ್ತುವಳು. ಲೊಟ್ ಎಂದು ಏನೋ ಅದರಲ್ಲಿ ಬಿದ್ದಂತಾಗಲು) ಆಂ? ಏನು ಬಿತ್ತು ಇದರಲ್ಲಿ? (ಹೊರಗೆ ತೆಗೆದು ನೋಡಿ) ಆಂ? ಶ್ರೀಹರಿ... ಮೂಗುತೀ...ಇದೇ...ಇದೇ...ಮೂಗುತೀ...ಇದೇ ಮೂಗುತೀ...ಶ್ರೀಹರಿ! ಮೂಗುತಿ!

ಶೀನಪ್ಪ: (ಪ್ರವೇಶಿಸುತ್ತ) ಎಲ್ಲಿ— ? (ಹರಿ ಅಲ್ಲ!) ಮೂಗುತಿ?

ಸರಸ್ವತಿ: (ನೀಡುವಳು).

ಶೀನಪ್ಪ: (ಹದ್ದಿನಂತೆ ಕಸಿದು) ಎಲ್ಲಿ! ಅಂ! ...ಸರಸ್ವತೀ...ಇದು...ಇದು... ಎಲೋ...ಎಲೋ... !

ಸುಬ್ಬಣ್ಣಾ: (ಪ್ರವೇಶಿಸಿ) ಸಾಹುಕಾರರೇ— ?

ಶೀನಪ್ಪ: ನನ್ನ ಸಾಹುಕಾರಿಕೆ ಸುಟ್ಟಿತು, ಇಲ್ಲಿ ನೋಡು...ಇದೇ...ನೋಡು... ಅಲ್ಲವೇ?

ಸುಬ್ಬಣ್ಣಾ: (ನೋಡಿ) ಇದೇ...ಇದೇ...

ಶೀನಪ್ಪ: ಸಂದೇಹವೇ ಇಲ್ಲ. ಸರಸ್ವತೀ— (ಅವಳು ಶ್ರೀಹರಿ ಶ್ರೀಹರಿ ಎನ್ನುತ್ತಾ ಕಣ್ಣೀರಿಡುತ್ತಿರಲು) ಏನಾಯಿತು... ?

ಸರಸ್ವತಿ: (ತಟ್ಟನೆ ಕಣ್ಣೀರು ಒರಸಿ ಸುಳ್ಳು ನಗೆ ಚೆಲ್ಲುತ್ತಾ) ಏನಿಲ್ಲ. ಏನೂ ಆಗಲಿಲ್ಲ. ಎಲ್ಲ ಒಳ್ಳೆಯದೇ ಆಯಿತು. ಈಗಲಾದರೂ ನೀರು ಮನೆಗೆ ದಯ ಮಾಡಿ. ನಿಮ್ಮ ಹಸಿವು—

ಶೀನಪ್ಪ: ಇಲ್ಲ. ಇಲ್ಲ. ನನ್ನ ಹಸಿವು—ಸುಬ್ಬಣ್ಣಾಚಾರಿ, ನೀನು ಈಗಿಂದಿಗಲೇ ಓಡುತ್ತ ಹೋಗಿ ಆ ಪೊಹರಿನ ಪೆಟ್ಟಿಗೆ ತೆಗೆದು ತೆಗೆದುಕೊಂಡು ಬಾ. ಓಡುತ್ತ ಬಾ. ಇಲ್ಲೇನೋ ವಿಪರೀತವಾಗಿದೆ. ನನಗೆ ಒಂದೂ—

ಸುಬ್ಬಣ್ಣಾ: ಈಗ ಬಂದೆ (ಓಡುವನು).

ಶೀನಪ್ಪ: ಸರಸ್ವತಿ, ಕಣ್ಣಲ್ಲೇಕೆ ನೀರು? (ಬಟ್ಟಲನ್ನು ಕಂಡು, ಹೋಗಿ ನೋಡಿ) ಸರಸ್— (ಲೋಟ ಎತ್ತಲು).

ಸರಸ್ವತಿ: (ಕಸಿಯುತ್ತ) ಸ್ವಾಮೀ— (ವಿಷ ಮೂಲೆಗೆ ಎರಚುವಳು)

ಶೀನಪ್ಪ: ವಿಷ?? ವಿಷ? ಸರಸ್ವತಿ...ಏನು ನಡೆಯಿತು ಹೇಳು. ನೀನು ಸತ್ಯ ಹೇಳಲಿಲ್ಲ. ಎಣ್ಣೆ ಕೊತಿರಲಿಲ್ಲ. ನೀನು ಒಳಗೆ ಎಲ್ಲೂ ಹೋಗಲೇ ಇಲ್ಲ. ವಿಷ ಏಕೆ? ಏನಾಯಿತು ಹೇಳು. ನನ್ನ ತಲೆಯಲ್ಲಿ ನೂರಾರು ಚಕ್ರಗಳು ತಿರುಗುತ್ತಿರುವಂತಿದೆ...ಈ ಮೂಗುತಿ ಯಾರದು?

ಸರಸ್ವತಿ: ನನಗೆ ಗೊತ್ತಿಲ್ಲ. (ಕಾಲಿಗೆರಗಿ) ಪತಿದೇವರೇ, ನಾನು ತಮ್ಮ ಮುಂದೆ ಸುಳ್ಳು ನುಡಿದೆ. ನುಡಿದವಳು ನಾನಲ್ಲ, ಹರಿನುಡಿಸಿದ. ಮೂಗುತಿಗೆ ಎಣ್ಣೆ ಕೊತಿರಲಿಲ್ಲ...ತುಳಸಿ ಪೂಜೆ ಮುಗಿಸಿ ಒಳಗೆ ಬರುತ್ತಿರುವಂತೆ ಯಾರೋ ಕರೆದರು. ಹೊರಗೆ ಬಂದು ನೋಡಿದೆ. ಒಬ್ಬ ವೃದ್ಧ ಬ್ರಾಹ್ಮಣನೂ ಒಬ್ಬ ಬಾಲಕನೂ ನಿಂತಿದ್ದರು. ಆ ಬಾಲಕನ ಉಪನಯನಕ್ಕಾಗಿ ಸಹಾಯ ಬೇಡಿದರು. ನನಗೆ ಸ್ವಾತಂತ್ರ್ಯವಿಲ್ಲವೆಂದೆ. ಮೂಗಿನಲ್ಲಿನ ಮೂಗುತಿ ಕೊಡಬಹುದೆಂದೂ ಅದು ಧರ್ಮ ವಿರುದ್ಧವಾಗದೆಂದೂ ಸಮಾಧಾನ ಹೇಳಿದರು. ಹಿಂದಿನ, ಹರಿ ಪ್ರೀತಿಯಾಗಲೆಂದು ಕೊಟ್ಟುಬಿಟ್ಟೆ...ಏಕೆ?...ನೀವು...?? ನಾನು ಸುಳ್ಳು ಹೇಳುತ್ತಿಲ್ಲ.

ಶೀನಪ್ಪ: ಸರಸ್ವತಿ, ನೀನು ಸುಳ್ಳು ಹೇಳುತ್ತಿಲ್ಲ. ಆದರೆ...ಈ ಸತ್ಯ ಈ ಸತ್ಯದ ಅರ್ಥ...ನಿನ್ನಲ್ಲಿ ಬರುವ ಮುಂಚೆ ಆರು ತಿಂಗಳು ನನ್ನನ್ನು ನಿತ್ಯ ಪೀಡಿಸಿ...ಇಲ್ಲಿ ಬಂದು ನಿನ್ನಿಂದ ಮೂಗುತಿ ಪಡೆದು...ನನ್ನ ಅಂಗಡಿಗೇ ಮತ್ತೆ ಬಂದು...ಲಕ್ಷ್ಮಿ ವಿಲ್ಲದೆ ಒಡವೆ ಎಸೆದು... (ಸುಬ್ಬಣ್ಣಾಚಾರಿ ಏದುಸಿರು ಬಿಡುತ್ತ ಪ್ರವೇಶಿಸಿ ಪೆಟ್ಟಿಗೆ ನೀಡುವನು) ಸುಬ್ಬಣ್ಣಾಚಾರಿ...ನನಗೆ ಏನೋ ಅನ್ನಿಸುತ್ತಿದೆ. ಈಗ ಎಲ್ಲ ತಿಳಿಯುವುದು. ಸರಸ್ವತಿ, ಆ ಬ್ರಾಹ್ಮಣ ನಿನ್ನ ಮೂಗುತಿಯನ್ನು ನನಗೆ ತಂದುಕೊಟ್ಟ. ಅದನ್ನು ನಾನು ಇದರೊಳಗೆ— (ಪೆಟ್ಟಿಗೆ ತೆಗೆದು ಮೂಗುತಿ ಇಲ್ಲದಿರುವುದನ್ನು ಕಂಡು) ಸರಸ್ವತೀ (ಪೆಟ್ಟಿಗೆ ಎಸೆದು ಮಂದಾಸನದ ಕಡೆಗೆ ಓಡಿ ಬಿದ್ದು) ವಿಠ್ಠಲಾ! ವಿಠ್ಠಲಾ!! ವಿಠ್ಠಲಾ!!!

ಸುಬ್ಬಣ್ಣಾ: ಮೂಗುತಿಯಿಲ್ಲ! ಮಾಯೆ!!

ಸರಸ್ವತಿ: ಮಾಯೆ?...ಸ್ವಾಮೀ...

ಶೀನಪ್ಪ: ಸರಸ್ವತೀ...ಆ...ಆ...ವಿಪ್ರ...ವಿಠ್ಠಲ...ವಿಠ್ಠಲ ಪಾಂಡುರಂಗ. ಆ ವಿಪ್ರ ವಿಠ್ಠಲ.

ಸರಸ್ವತಿ: ಸ್ವಾಮೀ... (ಇಬ್ಬರು ಪ್ರವೇಶಿಸುವರು)

ಒಬ್ಬ: (ಓಡಿಬಂದು) ಸಾಹುಕಾರರೇ...ನಾವು ಊರೆಲ್ಲ ತಿರುಗಿಬಿಟ್ಟೆವು. ಆ ಬ್ರಾಹ್ಮಣ ಮತ್ತು ಬಾಲಕ...ವಿಠ್ಠಲ ಮಂದಿರಕ್ಕೆ ಹೋದದ್ದು ಅನೇಕರು, ಕಂಡರಂತೆ. ಹೊರಗೆ ಬಂದದ್ದು ಯಾರೂ ಕಾಣಲಿಲ್ಲವಂತೆ!

ಶೀನಪ್ಪ: ಕಾಣಲಿಲ್ಲ! ಕಾಣಲಿಲ್ಲ! ಅವರು ಹೊರಗೆ ಬರಲಿಲ್ಲ...ಸರಸ್ವತೀ ಹೇಳು...ಈ ಮೂಗುತಿ ನಿನಗೆ ಮರಳಿ ಸಿಕ್ಕಿದ್ದು ಹೇಗೆ?

ಸರಸ್ವತಿ: ನಿಮ್ಮ ಮನಸ್ಸಿಗೆ ವಿರುದ್ಧವಾಗಿ ನಾನು ದಾನ ಮಾಡಿದ್ದೆ. ನೀವು ನನ್ನನ್ನು ಪರೀಕ್ಷಿಸಲೇ ಮೂಗುತಿ ತಾರೆಂದು ಆಗ್ರಹಪಡಿಸುತ್ತಿರುವಿರಿ ಎಂದು ತಿಳಿದುಕೊಂಡೆ. ಪ್ರಾಣತ್ಯಾಗವೇ ಒಳಿತೆಂದು ವಜ್ರ ಅರೆದು ವಿಷಪಾನಮಾಡಲು ಪಾತ್ರೆ ಎತ್ತಿದೆ. ನನ್ನ ಪ್ರಾಣ ಹರಿ ಪ್ರೀತಿಯಾಗಲೆಂದೆ. ಒಳಗೆ ಏನೋ ಬಿದ್ದಂತಾಯಿತು. ತೆಗೆದು ನೋಡಿದೆ. ಮೂಗುತಿ ಒಳಗಿತ್ತು ... ವಿಠ್ಠಲ—

ಶೀನಪ್ಪ: ಸರಸ್ವತೀ, ಸರಸ್ವತೀ, ನೀನೆಂತಹ ಭಾಗ್ಯವತೀ ... ನಾನೆಂತಹ ಮಂದಮತಿ ... ಆ ವಿಪ್ರ ... ಆ ಬಾಲಕ ... ಈಗ ಅರ್ಥವಾಗುತ್ತಿದೆ ... ಈಗ ಅರ್ಥವಾಗುತ್ತಿದೆ ... ಯಾವ ಬ್ರಾಹ್ಮಣ ಆರುತಿಂಗಳು ತಪ್ಪದೆ ಒಬ್ಬನನ್ನೇ ಕಾಡಿ ಬೇಡುತ್ತಾನೆ? ಅಸಂಭವ. ಇದೇ ಸಾಕ್ಷಿ ಇಂದು ... ಇಂದು ... ಅವನ ಮಾತುಗಳು ... ಈಗ ... ಈಗ ... ಸರಸ್ವತಿ ಈಗ ಬೆಳಕು ಕಾಣುತ್ತಿದೆ ... ಶ್ರೀಹರಿ ... ಶ್ರೀಹರಿ ... ನನ್ನ ಅಂಗಡಿಯ ಬಾಗಿಲಲ್ಲಿ ನಿನ್ನನ್ನು ಯಾರೂ ತಡೆಯಲಿಲ್ಲವೇ? ನೀನು ಸೆರೆಮನೆಯಲ್ಲಿ ಹುಟ್ಟಿದೆಯಾ? ಸೋದರ ಮಾವನಿಗೆ ನಿನ್ನ ಪ್ರಾಣದ ಮೇಲೆ ಹಟ್ಟಿನ ಕಣ್ಣಿತ್ತೇ? ತಲೆತಪ್ಪಿಸಿಕೊಳ್ಳಲು ಹೊರಗೆ ಹೊರಡಲು ನಿನ್ನನ್ನು ಯಾರೂ ತಡೆಯಲಿಲ್ಲವೇ?

ಸರಸ್ವತಿ: ಸ್ವಾಮೀ ... ?

ಶೀನಪ್ಪ: ಆ ಬ್ರಾಹ್ಮಣನ ಮಾತುಗಳು, ಸರಸ್ವತಿ ... ಎಷ್ಟು ಅರ್ಥಗರ್ಭಿತ ... ನನ್ನ ಮತಿಗೆ ಎಂತಹ ಮಂಕು ಕವಿದಿತ್ತು! ನನಗೆ ಮೋಕ್ಷದ ಹಾದಿ ತೋರಿಸಲು ಬಂದಿರುವೆನೆಂದು ಹೇಳಿದರೂ ಅಜ್ಞಾನದಿಂದ ನಗೆಸಾರ ಮಾಡಿದೆ. ಭಿಕ್ಷೆ ಹೇಸಿಗೆ, ದುಡಿದು ಬದುಕು, ಯಾರ ಮನೆಯ ಬಾಗಿಲಾದರೂ ಕಾಯಿ ಹೋಗೆಂದೆ ... ನಾನು ಅದನ್ನು ಮಾಡಿದ್ದೇನೆಂದ ... ಬಲಿಯ ಕತೆ ಹೇಳಿದ. ತುಳಿದ ಪಾದದ ಮೇಲೆ ತಲೆ ಚೆಲ್ಲಲಿಲ್ಲ ... ಮಗನ ಹೆಸರು, ಚತುರ್ಮುಖನಂತೆ! ... ತಾಯಿಯಿಲ್ಲದ ಮಗನಂತೆ! ಸರಸ್ವತಿ, ಹಾಳು ಸುವರ್ಣದ ಹೊಳಪಿನಲ್ಲಿ ಕಣ್ಣು ಕಾಣದಂತಾಗಿ ಹರಿಯ ನಾಭಿಯಲ್ಲಿ ಹುಟ್ಟಿದ ಬ್ರಹ್ಮನನ್ನು ಆ ಬಾಲಕನಲ್ಲಿ ಗುರ್ತಿಸ

ಲಾರದೆ ಹೋದೆ. ಬ್ರಹ್ಮನಿಗೆ ಉಪನಯನ! ಬ್ರಹ್ಮನಿಗೆ ಬ್ರಹ್ಮೋಪದೇಶ!! ಹರಿ, ಹರೀ ... ಎಂತಹ ನಾಟಕ!!! ಸರಸ್ವತೀ, ನನ್ನ ಈ ... ಈ ... ಪಾಪಿ ಕೈಯನ್ನು ಕತ್ತರಿಸಿ ಹಾಕು. ದಾನ ಕೊಡುವೆನೆಂದು ಆಸೆ ಹುಟ್ಟಿಸಿ, ಎರಡು ಚೀಲ ಸಮುಕಲು ದುಡ್ಡು ಸುರಿದು, ಅದರಲ್ಲಿ ಒಂದನ್ನು ಆರಿಸಿಕೊಳ್ಳಿ ಎಂದೆ—

ಸರಸ್ವತಿ: ಸ್ವಾಮೀ ... ಛಿ ಛಿ ...

ಶೀನಪ್ಪ: ಅಂದೆ ... ನನ್ನ ನಾಲಿಗೆ ಸೀಳಬೇಡವೆ? ಆಗ ... ಆಗ ... ಹಂ ... ಹಂ ... ಈಗ ... ಆ ಮಾತುಗಳ ಅರ್ಥ ... ಎಷ್ಟು ಸುಲಭ! ನಾನು ಪೆಟ್ಟಿಗೆ ಯಲ್ಲಿ ವರಹಗಳ ಕೂಡ ಸಮುಕಲು ಕಾಸುಗಳನ್ನಿಟ್ಟಿದ್ದು ಸರಿಯೆಂದು ಹೇಳಿ 'ತೆಗೆದುಕೊಳ್ಳುವಾಗ ವರಹಬೇಕು, ಕೊಡುವಾಗ ಸಮುಕಲು ಕಾಸು ಸಾಕು ಎನ್ನುವ ಭೇದ ಭಾವವಿಲ್ಲದಿದ್ದರೆ ಸಂತುಷ್ಟ ನಾಗುತ್ತಿದ್ದೆ' ಎಂದ ... ಶ್ರೀಹರಿ ... ಶ್ರೀಹರಿ ... ಎಂತಹ ತತ್ವ ಹೇಳಿದಿ. 'ನನ್ನ ಮಂಕು ತಲೆಗೆ ಹಿಡಿಸದೆ ಹೋಯಿತು. ಹಿಡಿಸದೆ ಹೋಯಿತು. ನಾನು ನವಕೋಟಿ ನಾರಾಯಣ ... ನನಗೆ ... ನನಗೆ ... (ಪರದಾಡಲು).

ಸರಸ್ವತಿ: ಸ್ವಾಮಿ? ಸ್ವಾಮೀ??

ಸುಬ್ಬಣ್ಣ: ಸಾಹುಕಾರರೇ?

ಶೀನಪ್ಪ: ಸ್ಮರಣೆ ... ಸ್ಮರಣೆ ... ಸ್ಮರಣೆ ... (ಮಂದಾಸನ ಸೇರಿ) ಕಲಿಮಹಿಮೆ··· ಎಲ್ಲ ತಲೆಕೆಳಕಲ್ಲವೇ? ನಾರಾಯಣ, ನಾನಾರೆಂಬುದು ಈಗ ಸ್ಮರಣೆಗೆ ಬಂತು! ಬಂತು! ಬಂತು! ಸರಸ್ವತಿ, ತಾ, ತಾ, ನನ್ನ ತಂಬೂರಿ—

ಸರಸ್ವತಿ: ಸ್ವಾಮೀ ... ಆಯಿತು ··· ಈಗ ಎಲ್ಲ ಶುಭವಾಯಿತು ... (ಇತರರಿಗೆ) ನೀವೆಲ್ಲ ದಯವಿಟ್ಟು ಹೊರಡಿ ... ಅವರು ಸ್ವಲ್ಪ ವಿಶ್ರಮಿಸಿಕೊಳ್ಳುವರು.

ಶೀನಪ್ಪ: ಸರಸ್ವತಿ, ನನಗೆ ಹುಚ್ಚು ಹಿಡಿದಿದೆ ಎಂದು ಇರುವೆಯಾ?

ಸರಸ್ವತಿ: ಹುಚ್ಚು ಹಿಡಿದಿದೆ. ಪುಣ್ಯಕ್ಕೆ ಹರಿಯ ಹುಚ್ಚು ಹಿಡಿದಿದೆ. ನಿಮಗೆ ಈಗ ಹಿಡಿಯಿತು. ನನಗೆ ಮೊದಲೇ ಹಿಡಿದಿತ್ತು. ಈಗ ನಮ್ಮ ದಾಂಪತ್ಯ ಉತ್ತಮವಾಯಿತು. ಇಬ್ಬರೂ ಹುಚ್ಚರು—

ಶೀನಪ್ಪ: ಸರಸ್ವತಿ, ನಿನ್ನನ್ನು ಒಂದು ಮಾತು ಕೇಳಲೇ?

ಸರಸ್ವತಿ: ನನ್ನ ಅನುಮತಿ ಬೇಕೇ?

ಶೀನಪ್ಪ: ಇಂದಿನಿಂದ ನಾನು ಹರಿದಾಸ—?

ಸರಸ್ವತಿ: ಸಂಸಾರ ತ್ಯಾಗ—?

ಶೀನಪ್ಪ: ಇಲ್ಲ. ಇರುವ, ಇಲ್ಲದಿರುವ. ನಿನಗೆ ಸಮ್ಮತವೆ?

ಸರಸ್ವತಿ: ನಿಮ್ಮ ಮತವೇ ನನ್ನ ಮತ.

ಶೀನಪ್ಪ: ಹರಿಯ ಮತವೇ ನಮ್ಮ ಮತ. ಸುಬ್ಬಣ್ಣಾಚಾರಿ, ಡಂಗುರ ಹೊಡೆಸು, ಶೀನಪ್ಪ ನಾಯಕ ಹರಿದಾಸನೆಂದು, ಸಕಲೈಶ್ವರ್ಯವನ್ನೂ ಸರ್ವರಿಗೆ ದಾನ ಮಾಡುವೆನೆಂದು; ದಂಡಿಗೆ ಬೆತ್ತ ಹಿಡಿಯುವೆನೆಂದು—ಹೋಗು. ಹೋಗು. (ಕಳುಹಿಸಿ) ಸರಸ್ವತೀ, ನೀನು ಅನುದಿನ ಶ್ರೀಹರಿಯ ಗುಣಗಾನ ಮಾಡುತ್ತಿದ್ದಿ. ಇಂದು, ಹಾಡು. ನಿನ್ನ ದನಿಗೆ ನನ್ನ ದನಿ ಕೂಡಿಸುವೆ. ಹಾಡುವೆನು, ಹೊಸ ಹಾಡು ... ಹಾಡು ... ಹಾಡು ... (ಸರಸ್ವತಿ ಹಾಗೂ ಶೀನಪ್ಪ ನಾಯಕ ಹರಿಕೀರ್ತನೆ ಹಾಡುತ್ತಿರಲು).

— ಅಂಕದ ತೆರೆ —



## ಪಾತ್ರಗಳು

ಮುದುಕಿ — ಯಜಮಾನಿ — ಮುದುಕಿಯ ಧ್ವನಿ

ಯಜಮಾನ — ಯಜಮಾನರ ಧ್ವನಿ

| | |
|---|---|
| ಜೊಯ್ಸರು | ಬಾಣಂತಿ |
| ತಾಯಿ | ಸಾವಿತ್ರಿ |
| ಹಿರಿಯ ಮಗ | ಮಗ |

ಹೊರಗಿನ ಧ್ವನಿ

# II. ನಿಧಿ

## ದೃಶ್ಯ ೧

[ ಹೊರಗೆ ಗುಡುಗು ಮಳೆ. ಮೂರು ದಿನಗಳಾದರೂ ಹತ್ತಿದ ಮಳೆ ಬಿಟ್ಟಿಲ್ಲ. ಈಗ ಸಮಯ ಮಧ್ಯರಾತ್ರಿ. ಹೊರಗೆ ಗಾಳಿಯು ಸಿಳ್ಳು ಭಯಾನಕವಾಗಿ ಕೇಳಬರುತ್ತದೆ. ಒಂದು ಹಳೆಯ ಹಾಳು — ಮನೆ. ಕಿಟಕಿಯ ಬಾಗಿಲುಗಳ ಬೋಲ್ಟು ಇಲ್ಲದ್ದರಿಂದ ಒಂದೇ ಸಮನೆ ಪಟ ಪಟ ಪಕ್ಕ ಬಡಿಯುತ್ತಿವೆ. ಮಳೆಯ ಸಂತತ ಧಾರೆಯಿಂದಾಗಿ ಹಿತ್ತಲ, ಅಡುಗೆಯ ಮನೆಯ ನಡುವಿನ ದೊಡ್ಡ ಗೋಡೆ ಬಿದ್ದುಹೋಗಿದೆ. ಪಡಸಾಲೆಯ ಮನೆಯ ಮಾಳಿಗೆಯಿಂದ ನೀರು ಸೋರುತ್ತಿದೆ. ಯಾವ ಕ್ಷಣಕ್ಕೆ ಮನೆಯ ಇಮ್ಮಾನೇ ಹೊತ್ತುಕೊಂಡು ಬಿದ್ದೀತೊ ಹೇಳಲಿಕ್ಕೆ ಬರುವಂತಿಲ್ಲ. ಮನೆಯ ನೆಲವೆಲ್ಲ ಸೋರಿದ ನೀರು ಇಂಗಿ ತೇವಗೊಂಡು ಅಲ್ಲಲ್ಲಿ ನೀರು ಮಡವು ಗಟ್ಟಿಕೊಂಡಿದೆ. ಒಂದು ಅಡಿಯಷ್ಟು ಜಾಗ ಒಣದಾಗಿಲ್ಲ. ನಡುಮನೆಯ ಒಂದು ಮೂಲೆಯಲ್ಲಿ ಒಂದು ಗುಬ್ಬಿಯ ಚಿಮಣಿ ಉರಿಯುತ್ತಿದೆ. ಅದರ ಮಗ್ಗಲಿಗೆ ಮೂರು ನಾಲ್ಕು ಮ್ಹಣಿಗಳನ್ನು ಹಾಕಿ ಅದರ ಮೇಲೊಂದು ಹರಕು ಚಾಪಿಹಾಸಿ ತಲೆಗೆ ಒಂದು 'ಪ್ಯೋಳಪಟ್ಟಿ' ಇಟ್ಟುಕೊಂಡು ಒಂದು ಹರಕು ಕಂಬಳಿ ಹೊದ್ದು ಕೊಂಡು ಒಂದು ಮುದಿಕೆ ಗೂರುತ್ತ ಕಣ್ಣು ಮುಚ್ಚಿಕೊಂಡಿದೆ. ಮಲ ಗಿಲ್ಲ. ಗೋಡೆಬಿದ್ದು ಹಿತ್ತಲು ಅಡುಗೆ–ಮನೆಯೆಲ್ಲಾ ಏಕ–ಬಯಲಾಗಿ ಉಂಟಾದ ಭಯಾನಕತೆಯನ್ನು ತಪ್ಪಿಸುವುದಕ್ಕಾಗಿ ಒಂದು ಬಿದಿರಿನ ಚಾಪೆ ನಿಲ್ಲಿಸಿ ಚಾಟ ಮಾಡಿದೆ. ಮುದಿಕೆ ಮಲಗಿದ ನಡುಮನೆಯಲ್ಲಿ ಯಜಮಾನನ ಒಂದು ದೊಡ್ಡ ಫೋಟೋ, ಹಿರಿಯ ಮಗನ ಒಂದು ದೊಡ್ಡ ಫೋಟೋ, ಹೆಣ್ಣುಮಗಳ ಒಂದು ದೊಡ್ಡ ಫೋಟೋಗಳ ಹೊರತಾಗಿ ಇನ್ನೇನೂ ಕಾಣುವುದಿಲ್ಲ. ಮನೆಯಲ್ಲಿ ಭಾಂಡಿ ಇಲ್ಲ, ಕಾಳು–ಕಡಿ ಇಲ್ಲ. ಯಾವುದೊ ಒಂದು ಮೂಲೆಗೆ ಇದ್ದಲಿ–ಒಲೆ ಮಗ್ಗಲಿಗೆ ಒಂದು ಬಕೆಟ್ಟು, ಒಂದು ಖತಿನಟ್ಟ ತಾಮ್ರದ ತಂಬಿಗೆ. ಮಗ್ಗುಲಿಗಿದ್ದ ಒಂದು ಕಾಲುಪಾವಿನಲ್ಲಿ ಸೆರೆ ಅಕ್ಕಿ. ಆಯಿತು. ಹೊರಗೆ ಗುಡುಗು ಬಿರುಗಾಳಿಗಳ ಅಬ್ಬರಕ್ಕೆ ಪುಟಗೊಂಡಂತೆ ಮುದಿಕೆ ಕೆಮ್ಮು ತ್ತದೆ; ಗೂರುತ್ತದೆ; ಕಣ್ಣು ತೆರೆಯುತ್ತದೆ, ಬಿರು ಬಿರು ನೋಡುತ್ತದೆ, ಹುಚ್ಚಿಯಂತೆ ಚೀರುತ್ತದೆ, ಅಂಜಿದಂತೆ ಕಣ್ಣು ಮುಚ್ಚುತ್ತದೆ. ಮುಸುಕು ಎಳೆಯುತ್ತದೆ ...... ].

ಮುದುಕಿ: ಮೂರಾಯನಂಥಾ ಮನಿ ಸ್ಮಶಾನಧಾಂಗ ಆತು...ಅಯ್ಯ ನನ್ನ ಅದೃಷ್ಟ! (ಹಣಿ ಹಣಿ ಗಟ್ಟಿಸಿಕೊಂಡು) ಯಾರ ಸಲುವಾಗಿ ಜೀವಾ ಹಿಡೀಲಿ ಇನ್ನ? ... ನನ್ನ ಹೀಂಗ ಮಾಡಿಟ್ಟು ನೀವು ನೀಗಿ ಹೋದಿರಿ... (ಯಜಮಾನರ ಫೋಟೋ ನೋಡುತ್ತ) ಮಕ್ಕಳ ಸಲುವಾಗಿ ನೀನು ಬದುಕಬೇಕು ಅಂತ ಹೇಳಿ ಹೋದಿರಿ ... ಮೊಮ್ಮಕ್ಕಳ ಸಲುವಾಗಿ ಬದುಕಬೇಕು ಅಂತ ಹೇಳಿದಿರಿ ... ನೋಡಿದಿರಾ ನನ್ನ ಅವಸ್ಥಿ ? ... ಎದಿಯುದ್ದ ಮಗ ಸತ್ತು ಹೋದಾ ... ಎದಿಯುದ್ದ ಮಗಳು ಸತ್ತು ಹೋದಳು... ಉಳಿದಾವ ಒಬ್ಬಾವಾ ... ಅವಾ, ನೋಡಿದರ ಕೈಗೆ ಹತ್ತದಾಂಗ ಆಗಿ ಹೋದಾ ... ಇಂಥವರ ಮಗಾ ಅಂತಾ ಹೇಳಲಿಕ್ಕೆ ನಾಚಿಗಿ ... ಮನೆತನದ ಮರ್ಯಾದಿ ಎಲ್ಲಾ ಹೊಳ್ಯಾಗ ಹುಣಸೆಣ್ಣಿ ತೊಳದಾಂಗ ಆತು ... ಎಲ್ಲಿ ಓಡಿಹೋಗ್ಯಾನೊ ಇದೇ ಪತ್ತೆ ಇಲ್ಲಾ ... ಏಳನೇ ತಲಿ ಅಂತ! ಇವನ ತಲೀಗೇನೊ ಲಕ್ಷ್ಮೀ ಬರತಾಳಂತ ... ಸಿಧಿ ಹತ್ತತದಂತ ... ಎಲ್ಲಿದ ಸಿಧಿ! ವಿಧಿ ಮಾತ್ರ ಕೈತೊಳ ಕೊಂಡು ಬೆನ್ನು ಹತ್ತೇದ ಆತು ... ಯಾಕಾರ ಇಡಬೇಕು ಅಂತೀನಿ ಈ ಜೀವಾ ಇನ್ನ! ಹಿತ್ತಲದಾಗ ಭಾವಿ ... ಎರಡು ಮಿನೀಟಿನಾಗ ಧಂ ಅನಬಹುದು ... ಈ ಬಾಳಿನ ಸಂಕಟಾ ಒಮ್ಮೆ ನೀಗಿ ಹೋಗಬಹುದು ... (ಮತ್ತೆ ಯಜಮಾನರ ಫೋಟೋ ನೋಡಿ) ಹೇಳ್ರಿ ಏನು ಹೇಳತೀರಿ ನನಗ! ... ನೀವಿರಲ್ಲಾಂತರ ... ಅರಮನಿಯೊಳಗಿನ ಅರಗಿಳಿ ಹಾಂಗ ನೋಡಕೊಂಡಿರಿ ನನ್ನ... ಹಾಲು ಸಕ್ಕರ್ಯಾಗ ಕೈ ತೊಳಸಿದಿರಿ ... ಆದರ ಈಗ? ಕಣ್ಣೀರ್ಲೆ ಕೈ ತೊಳೀತೀನಿ ... ಕಣ್ಣೀರು ಹಾಕಿ ಹಾಕಿ ಅವೂ ಬತ್ತಿಹೋಗಿ ಇನ್ನ ರಕ್ತಾನ ಸುರಸಬೇಕಾದೀತು ಕಣ್ಣೀರು ಅಂತ ... ಅಯ್ಯ ನನ್ನ ಅವಸ್ಥೆ ... ಸ್ಮಶಾನದಾಗಿನ ಭೂತದಾಂಗ ಹೀಂಗ ಇನ್ನ ಎಷ್ಟು ದಿವಸಾಂತರ ಬದುಕಿರ್ಲಿ? ಯಾಕಾರ ಬದುಕಿರ್ಲಿ? (ಯಜಮಾನರ ಹಿರಿಯ ಮಗನ, ಮಗಳ ಮೂರೂ ದೊಡ್ಡ ಫೋಟೋ ಬಿಡಗಣ್ಣಿನಿಂದ ಬಿರಿ ಬಿರಿ ನೋಡುತ್ತ) ಹೇಳ್ರಿ ನನಗೇನ ಹೇಳ್ತೀರಿ ಹೇಳ್ರಿ ... ಕೈ ಹಿಡದ ಯಜಮಾನ್ರನ್ನ ಕಳಕೊಂಡು ಕೈಯಾಗಿನ ಬಳಿ ಹೋದವು, ಕೊರಳಾಗಿನ ಮಂಗಳ ಸೂತ್ರ ಹೋಯಿತು ... ಎದಿಯುದ್ದಾ ಮಗನ್ನ ಕಳಕೊಂಡೆ ... ಮಗಳನ ಕಳಕೊಂಡೆ ... ಧರ್ಮರಾಯನಂಥಾ ಮಗ ಹೋದಾ ಸಾವಿತ್ರಿ ಅಂತಾ ಮಗಳು ಹೋದಳು ... ನಕ್ಷತ್ರಿಕನಂಥಾ ಕಿರಿಯ ಮಗ ಮಾತ್ರ ಉಳದಾ...ನನ್ನ ಗೋಳು ಹೊಯಿಸಲಿಕ್ಕೆ... ಮಗಳು ಹೋದ ಮ್ಯಾಲೆ ಮೊಮ್ಮಕ್ಕಳು ಕರುಳಿನವಾದರೂ ಅಳಿಯಾ ಯಾರು?... ಯಾರು ನೋಡಬೇಕು ನನ್ನ ... ದುರ್ವ್ಯಸನಕ್ಕ ದಾಸಾಗಿ ಇದ್ದ, ಮನಿ ಒತ್ತಿ ಹಾಕಿ ಓಡಿ ಹೋದ ಚಾಂಡಾಲಾ! ... ನನ್ನ ಜೀವ ಒತ್ತಿ ಇಟ್ಟು ಇವನ್ನ ಜೋಪಾನ ಮಾಡಿದೆ ... ಜೋಪಾನಮಾಡಿ ಏನು ಸುರಕೊಂಡೆ? ... ಕಟ್ಟೀ ತಿಳಗ ಇಳೀದಾಕಿ ಕಚೇರಿ ಕಟ್ಟಿ ಹತ್ತೂ ಪ್ರಸಂಗ ಬಂತು ... ಮರ್ಯಾದಿ ಅಂಬೂದು ಮಾರ್ಕೀಟಿಗೆ ಬಂತು ... ಒತ್ತಿ ಹಾಕಿದ ಮನೆ ಬರಿಸಿಕೊಂಡವರಂತೆ ಆಗಿ ಹೋತು; ನಾಳೆ ಕಬ್ಜಾ ತೊಗೊಂಬುವವರಂತ! ... ಹೇಳ್ರಿ ... ಹರಕಾನ ಇಲ್ರಿ ಮುರಕಾನ ಇಲ್ರಿ ... ಮರ್ಯಾದೆಯಿಂದ ಬಚ್ಯಾವಾಗಿದ್ದೆ ... ನಾಳೆ ಪೋಲೀ

ಸರ್ಕ ಹಚ್ಚಿ ಮನೀ ತಾಬೇಕ್ಕ ತಗೋತಾರಂತ! ಎಲ್ಲಿ ಹೋಗ್ಲಿ ನಾನು? ... (ಫೋಟೋ ನೋಡಿ) ಏನು ಹೇಳತೀರಿ ನನಗ? (ಎಂದು ಚಿಟ್ಟನೆ ಚೀರಿ ಎಚ್ಚರ ದಪ್ಪಿ ಬಿದ್ದುಬಿಡುವಳು. ಮುಗ್ಗಲನ ಗುಬ್ಬಿಯ ಚಿಮಣಿ ಆರಿಹೋಗುವುದು. ಕಗ್ಗತ್ತಲೆ. ಬಿರುಗಾಳಿಯ ಸಪ್ಪಳಕ್ಕೆ ಕಿಟಕಿಯ ಬಾಗಿಲುಗಳು ಪಟ ಪಟ ಬಡಿದು ಕೊಳ್ಳುವ ಸಪ್ಪಳದ ಹೊರತಾಗಿ ಇನ್ನೇನೂ ಕೇಳುವದಿಲ್ಲ. ಕತ್ತಲೆಯ ಹೊರತು ಇನ್ನೇನೂ ಕಾಣುವದಿಲ್ಲ ... ಸ್ವಲ್ಪ ಹೊತ್ತಿನವೇಲೆ ಫೋಟೋದೊಳಗಿನ ಚಿತ್ರವೇ ಮಾತನಾಡುತ್ತಿದೆಯೋ ಏನೋ ಎಂಬಂತೆ ಯಜಮಾನರ ಧ್ವನಿ ಬರುತ್ತಿದೆ ...)

ಯ. ಧ್ವನಿ: (ಎಲ್ಲಿಯೋ ಒಂದು ಪಾತಾಳ ಭಾವಿಯಿಂದ ಮಾತಾಡಿದಂತೆ ...) ನೀ ಕಾಳಜಿ ಮಾಡಬ್ಯಾಡಾ ಅಂತ ಹೇಳೀನಿ ... ಖಂಡಿತ ಲಕ್ಷ್ಮೀ ಪ್ರಸನ್ನ ಆಗತಾಳ. ನಮ್ಮ ಮನೀ ಒಳಗ ನಿಧಿ ಅದ. ಏಳನೇ ತಲೀಗೆ ಕೈಗೆ ಬರತದ.

ಮುದಿಕಿ: ನಾಳೆ ಪೋಲೀಸರ್ನ ಕರಕೊಂಡು ಬಂದು ಇದ್ದ ಬಿದ್ದ ಸಾಮಾನಾ ಬೀದಿಗೆ ಎಸ್ದು ನನ್ನ ಹೊರಗೆ ದಬ್ಬುತಾರ ... ಎಲ್ಲಿ ನಿಮ್ಮ ಲಕ್ಷ್ಮೀ ... ವಿಧಿಲಕ್ಷ್ಮೀ ...

ಯ. ಧ್ವನಿ: ತಲಿತಲೀಯಿಂದ ನಡೆಕೋತ ಬಂದ ತೊಳದ ಮುತ್ತಿನಂಥಾ ಮನೀ, ಮುತ್ತಿನಂಥಾ ಸಂಸಾರ ...

ಮುದಿಕಿ: ಈಗೇನಾತು ಆ ಸಂಸಾರದ ಅವಸ್ಥಿ ...

ಯ. ಧ್ವನಿ: ಏನೂ ಆಗಿಲ್ಲಾ ... ನನ್ನ ದೇಹ ಬೂದಿ ಆದರೂ ಪ್ರೈಯೆಲ್ಲಾ ಕಣ್ಣಾಗಿ ನೋಡಕೋತ ಇದ್ದೀನಿ ... ನನ್ನ ಫೋಟೋದ ಬುಡಕಽನ ಅದಽ ನಿಧಿ ...

ಮುದಿಕಿ: ನಿಧಿ ನಿಕ್ಷೇಪಾ ಎಲ್ಲ ತಮ್ಮದ ಅಂತ ಒತ್ತಿ ಬರಿಸಿಕೊಂಡರಲಾ ... ಈ ನಿಮ್ಮ ಚಾಂಡಾಲ ಮಗಾ ಬರೆದು ಕೊಟ್ಟಾನಲ್ಲಾ ... ಇದಕ್ಕೇನು ಹೇಳತೀರಿ?

ಯ. ಧ್ವನಿ: ಏನು ಹೇಳಬೇಕು? ಮರತೇ ಬಿಟ್ಟೇನು? ಅವತ್ತ ಈ ಮುದಿ ಜೊಯ್ಸರು ಜಾತಕಾ, ಪಂಚಾಂಗಾ ನೋಡಿ, ಯಂತ್ರಾ ಮಂತ್ರಾ ಮಾಡಿ ನಮ್ಮ ಮನಿಯ ಪ್ರಾಚೀನ ಕಥಿ ಎಲ್ಲಾ ಹೇಳಿ ... ನಿಧಿ ಸಿಕ್ಕ ತೀರತದ ಅಂತ ಹೇಳಿದರು ...

[ಕನಸಿನೊಳಗಿನ ಸುಂದರ ದೃಶ್ಯದಂತೆ ಕತ್ತಲೆ ಮಾಯವಾಗಿ ಬೆಳಕು ಹರಿಯುತ್ತದೆ. ಅದೇ ಹಾಳು ಮನೆ. ಹಿಂದಿನ ಸುಂದರವಾದ ವೈಭವದಿಂದ ಝಗ ಝಗಿಸುವ ಮನೆಯಾಗಿದೆ. ಪ್ರಾಯದ ಯಜಮಾನರು ಅವರ ಕೈಹಿಡಿದು ನೋಡುತ್ತಿರುವ ಮುದಿ ಜೋಯಿಸರು. ಆಚೆಗೆ ತಮ್ಮ ವಜ್ರದ ಬೆಂಡೋಲೆ ಗಳನ್ನು ತೊಳೆದು ರೇಶಿಮೆಯ ಬಟ್ಟೆಯಿಂದ ಒರೆಸುತ್ತಾ ಕುಳಿತಿರುವ ಯಜಮಾನಿ.]

ಜೊಯ್ಸರು : ಆಹಾಹಾ! ಕೈ ಅನಬೇಕು ರಾಯರದೇ ! ನೋಡಿದರೆ ಇಂತಾ ಕೈ ನೋಡಬೇಕು. ಆಹಾಹಾ! ಏನು ಹಸ್ತ ರೇಖಾಗಳು ... ಸಣ್ಣಾಗ ಸೂಜಿಯಿಂದ ಎಳೆಧಾಂಗ ... ಗುಲಾಬಿವರ್ಣ! ... ವಾಹವಾ ! ವಾಹವಾ! ಧನರೇಖಾ ಏನು ಆಯುಷ್ಯ ರೇಖಾಏನು; ಸಂತತಿ ಸಮೃದ್ಧಿ ಏನು, ವಿದ್ಯಾ, ವಿನಯ ಸಂಪನ್ನತಾ, ಕೀರ್ತಿ, ಮಾನ, ಸನ್ಮಾನ ...

ಯಜಮಾನ : ಅಲ್ಲಾ ಸಂತತಿ ಸಮೃದ್ಧಿ ಅಂತೆಲ್ಲಾ ಹೇಳಿದಿರಿ. ನಮಗೇನು ಡಜನ್‌ಗಟ್ಲೆ ಮಕ್ಕಳು ಬ್ಯಾಡಾ. ಇದ್ದವರು ಆಯುಷ್ಯವಂತರೂ ಸಂಪನ್ನರೂ ಆದರ ಸಾಕು.

ಜೊಯ್ಸರು : ಅದಕ್ಕಾಗಿ ಚಿಂತೆ ಮಾಡತೀರಿ ತಾಯಿ! ಇದೇ ನಿಮ್ಮ ಕಣ್ಣಿನಿಂದ ಮರಿಮಕ್ಕಳನ್ನ ಕಾಣತೀರಿ, ಇದೇ ನಿಮ್ಮ ಕೈಯಿಂದನೇ ಮರಿಮಕ್ಕಳನ ಆಡಸತೀರಿ.

ಯಜಮಾನ: ಇನ್ನೊಂದು ವಿಷಯ ಕೇಳತೀನಿ ಜೊಯ್ಸರ! ನಮ್ಮ ಮನೆತನದ ಬಗ್ಗೆ ಒಂದು ಐತಿಹ್ಯ ಅದ. ನಮ್ಮ ತಾತನ ಮುತ್ತಾತ ಒಂದು ದಿವಸ ಮನೆಯ ಅಂಗಳದೊಳಗ ಶತಪಥ ಹಾಕುತ್ತ ರಾಮಜಪ ಮಾಡತಾ ಇದ್ದರಂತ. ಆಗ ಮೂರು ಸಂಜೆ ಆಗಿತ್ತಂತ, ಶುಕ್ರವಾರ ಆಪ್ರೊತ್ತು. ಒಳಗಿನಿಂದ ಒಮ್ಮಿಂದೊಮ್ಮೆಲೆ ಝುಗ್ಗನೆ ಬೆಳಕೊಂದು ಹೊರಗೆ ಬಂಧಾಂಗ ಕಾಣಿಸಿತಂತ. ನಮ್ಮ ಹಿರಿಯ ಹಿರಿಯರು ಕಣ್ಣುಬಿಟ್ಟು ನೋಡಿದರು. ಥಳಥಳಿಸುವ ಪೀತಾಂಬರ ಉಟ್ಟು ಕೊಂಡು ಸಕಲಾಂಕೃತಳಾದ ಶ್ರೀಲಕ್ಷ್ಮೀ ದೇವಿಯೇ ಸಾಕ್ಷಾತ್ತು! ಮುಂದಗಮನ ದಿಂದ ಹೆಜ್ಜೆ ಇಡುತ್ತ ನಡೆದಾಗ ನಮ್ಮ ಹಿರಿಯರು ತರುಬಿದರಂತ. 'ಇದೇನು ನನ್ನ ತಾಯಿ ನಮ್ಮ ಮನೆಯ ಲಕ್ಷ್ಮೀದೇವಿ!' ಅಂತ ಅಂದಾಗ—'ಹೌದು, ನಾನೀಗ ನಿಮ್ಮ ಮನೆಯಿಂದ ಹೋಗುತ್ತಿದ್ದೇನಿ. ನಿಮ್ಮಲ್ಲಿ ಈಗ ಇನ್ನು ಮೇಲೆ ನಾನಿರಲಾರೆ' ಎಂದಾಗ ಹಿರಿಯರು ಅತ್ಯಂತ ಖಿನ್ನರಾಗಿ ಡೊಗ್ಗಾಲು ಮಂಡಿ ಯೂರಿ ಬೇಡಿಕೊಂಡರಂತ: ದಯಮಾಡಿ ಹಿಂತಿರುಗಬೇಕು ಅಂತ. ಶ್ರೀಲಕ್ಷ್ಮೀ ದೇವಿನ್ನ ಮನೆಬಿಟ್ಟು ಹೊರಡೋದಕ್ಕ ಕಾರಣ ಕೇಳಿದರೆ ಹೇಳಲಿಲ್ಲವಂತೆ. ಯಾವ ತಲಿಗೆ ಏನು ಪಾಪದ ಕಾರ್ಯ ಆಗಿತ್ತೋ ಏನೋ! ಆದರ ಲಕ್ಷ್ಮೀದೇವಿ ಹಿಂತಿರುಗ ಲಿಲ್ಲ. ಒಂದು ಸಮಾಧಾನ ಮಾತ್ರ ಹೇಳಿದಳಂತ. 'ನಾನು ಏಳನೆ ತಲಿಗೆ ಮತ್ತೆ ಬರತೇನಿ' ಅಂತ 'ಯಾವ ರೂಪದೊಳಗ?' ಅಂತ ಕೇಳಿದ್ದಕ್ಕ 'ನಿಧಿಯ ರೂಪದೊಳಗ' ಅಂತ ಹೇಳಿದಳಂತ. ಇಷ್ಟು ಹೇಳಿದಾಕೆಯೇ ಅಂತರ್ಧಾನವಾದ ಳಂತ. ಆದರ ಅಂತರ್ಧಾನವಾಗುವದಕ್ಕೆ ಮುಂಚಿತವೇ ನಮ್ಮ ಹಿರಿಯರು ಕಿಂಕರ್ತವ್ಯ ಮೂಢರಾಗಿ ಲಕ್ಷ್ಮೀದೇವಿಯ ಸೆರಗು ಹಿಡಿದು ಜಗ್ಗಿದರಂತ. ಆ ಸೆರಗು ಬಂಗಾರದ ಥಳಥಳಿಸುವ ತಗಡಾಗಿ ಕೈಯೊಳಗ ಬಂತಂತ. ಅದರ ಅವಶೇಷವಾಗಿಯೇ ನಮ್ಮ ದೊಡ್ಡ ದೇವರ ಸಂಪುಷ್ಟದೊಳಗ ಇಂದಿಗೂ ಐದು ತಾಳಿಯ ಮಣಿಗಳು ಅವ ಕುಲದೇವತೆಯ ಹೆಸರಿನಲ್ಲಿ.

ಜೊಯ್ಸರು : ಓಹೋಹೋ! ಏನು ರೋಮಾಂಚಕಾರಕ ಕಥೆ ಹೇಳಿದಿರಿ ರಾಯರ!

ಯಜಮಾನರು : ಅದರ ಬಗ್ಗೆ ಈಗ ಕೇಳೋದಿಷ್ಟೆ: ನಮ್ಮ ತಲೆಮಾರಿನಲ್ಲಿ ಲಕ್ಷ್ಮೀ ದೇವಿ ಹೇಳಿದ ಪ್ರಕಾರ ಏಳನೆ ತಲಿ ಅಂದರ ನಮ್ಮ ಚಿರಂಜೀವನು ಅವನ ಕಾಲಕ್ಕಾದರೂ ಲಕ್ಷ್ಮೀ ಪ್ರಸನ್ನಳಾಗತಾಳೋ ಇಲ್ಲೋ ಅಂತ.

ಜೊಯ್ಸರು : ಸಂಶಯ ಏನು ರಾಯರ! ನಿಮ್ಮ ಚಿರಂಜೀವರ ಪೈಕಿ ಒಬ್ಬನಿಗೆ ಈ ಲಕ್ಷ್ಮೀ ಪ್ರಸನ್ನಳಾಗಲೇ ಬೇಕು. ಅದೂ ನಿಧಿಯ ರೂಪದಲ್ಲಿ. ಈ ನಿಧಿ ಈ ನಿಮ್ಮ ಮನೆಯಲ್ಲೇ ದೋರೀತದೆ. ಆದರ ರಾಯರ, ಅದನ್ನ ಮೊದಲೇ ಪಡೆಯಬೇಕು, ಅಂಬೋ ವೃಥಾ ಹವ್ಯಾಸಕ್ಕ ತಾವು ಮಾತ್ರ ಕೈಹಾಕಬಾರದು. ಭೂಮಿಯ ಗರ್ಭದಿಂದ ಸೀತಾಮಾಯಿ ಹುಟ್ಟಿ ಬಂದ ಹಾಂಗ ಈ ನಿಧಿಯೂ ಕೂಡ ತಾನಾಗಿಯೇ ನಿಮಗೆ ಪ್ರಾಪ್ತವಾಗತದ. ತಮ್ಮ ಸಂತತಿಗೆ ಇದು ಸಂಪ್ರಾಪ್ತವಾಗಬೇಕು ರಾಯರ!

ಯಜಮಾನರು : (ಅತ್ಯಂತ ಮರುಳಾಗಿ) ಹಾಂಗಾರ ಯಾವಾಗ, ಎಂಥಲ್ಲಿ ಈ ನಿಧಿ ಸಿಗಬಹುದು ಜೊಯ್ಸರ? ದಯಮಾಡಿ ಹೇಳತೀರಾ? ಆ ಸ್ಥಳ ಅಷ್ಟು ತೋರಿಸಿ ಕೊಟ್ಟರ ...

ಜೊಯ್ಸರು : ಆದರ ನಿಮ್ಮ ಕೈಗೆ ಅದು ಪ್ರಾಪ್ತವಾಗೋಣಿಲ್ಲ ರಾಯರ! ನಿಮಗೆ ಆ ವಿಷಯ ಹೇಳಿದರ ಚಪಲ ತಡೆಯಲಿಕ್ಕಾಗದೆ, ನೀವು ಆದನ್ನ ಶೋಧಿಸಿ ಸಾಧಿಸ ಹೋಗಿ ಜೀವಕ್ಕೆ ಎರವಾದೀರಿ ...

(ಒಮ್ಮೆಲೆ ಕತ್ತಲಾಗುವುದು. ಕಿಟಕಿಯ ಬಾಗಿಲು ಬಿರುಗಾಳಿಯ ಅಬ್ಬರಕ್ಕೆ ಫಡ ಪಡಿಸುವುದು.)

ಮುದುಕಿಯ ಧ್ವನಿ: ಹೌದು, ನಿಧಿ ಸಿಕ್ಕ ತೀರತದ ಅಂದರು. ನಿಮಗಾರ ಆ ಚಪಲ ತಡೀಲಿಕ್ಕೆ ಆಗಲಿಲ್ಲ ... ಆದಿನ ಶುಕ್ರವಾರ ... ನಡುರಾತ್ರಿಯೊಳಗ ಹಾರಿ ತಗೊಂಡು ಅಗೀಲಿಕ್ಕೆ ಸುರುಮಾಡಿದಿರಿ ... ನನ್ನ ಎದೀಯೊಳಗ ಅಗಧಾಂಗ ಆಯಿತು ... ಎದಿ ಹಾರಲಿಕ್ಕೆ ಹತ್ತಿತ್ತು ... ನಿಮ್ಮ ಮೈಯೆಲ್ಲಾ ಥರಗುಟ್ಟಿ ನಡಗಲಿಕ್ಕೆ ಹತ್ತಿತು ... ಬೆಂಕಿ, ಬೆಂಕಿ ಅಂತ ಅಂಜಿ, ಚಿಟ್ಟನೆ ಚೀರಿ, ಎಚ್ಚರತಪ್ಪಿ ಹಿಂದ ಬಿದ್ದುಬಿಟ್ಟಿರಿ ... ಅಯ್ಯೋ ಮರುದಿನ ಹಾಸಿಗಿ ಹಿಡಿದವರು ಮೇಲಕ್ಕೆ ಏಳಲಿಲ್ಲಾ ... ಹೇಳ್ರಿ ಈಗ ನನಗೇನ ಮಾಡಂತೀರಿ ... ಎಲ್ಲಿ ಅದ ನಿಮ್ಮ ಏಳನೆಯ ತಲಿ? ಪರಶುರಾಮನ ಹಾಂಗ ತಾಯಿಯ ಶಿರಚ್ಛೇದ ಮಾಡಲಿಲ್ಲಾ ಈ ಚಂಡಾಲಾ ... ಆದರೇನು, ಆದರೇನು, ಜೀವಂತ ಸಾಯಿಸತ ಇದ್ದಾನಲ್ಲ ನನ್ನ ...

ಯಜಮಾನರ ಧ್ವನಿ: ಅಂವಾ ಹೊರಗ ದುಷ್ಟನಾಗಿ ಕಂಡರೂ ಒಳಗ ಹೂವಿನ ಹಾಂಗ ಇದ್ದಾನ, ನೀನೇನೂ ಕಾಳಜಿ ಮ್ಯಾಡಬ್ಯಾಡಾ. ಮನಿ ಒತ್ತಿಹಾಕಿದರೂ ಮನಿಯ ಲಕ್ಷ್ಮೀದೇವಿನ್ನೇನೂ ಒತ್ತಿಹಾಕಿಲ್ಲ. ನಿಧಿ-ನಿಕ್ಷೇಪ ಅಂತ ಕಾಗದಾ ಬರಸಿಕೊಂಡವರು ಕಾಣಿಸಿದ್ದರೂ ಅವರ ಕೈಗೆ ಸಿಗೋ ಲಕ್ಷ್ಮೀ ಅಲ್ಲ ಅದು.

ಮುದಿಕಿಯ ಧ್ವನಿ: ಲಕ್ಷ್ಮೀಯ ಶಾಪ ತಟ್ಟೀ ಸಿಥಿ ಸಿಮ್ನ ತುತ್ತು ತೊಗೊಂಡಿತು. ಲಕ್ಷ್ಮೀ ಶಾಪ ತಟ್ಟಿಯೆ ಎದೆಯುದ್ದ ಮಗಳು, ಹಸೀಬಾಣಂತಿ, ಹಾವು ಕಡಿದು ಸತ್ತಳು ...

ಯಜಮಾನರ ಧ್ವನಿ: ಆಂ? ಎಂಥಾ ಹಾವು?

ಮುದಿಕಿಯ ಧ್ವನಿ: ಎಂಥಾ ಹಾವು ಅಂದರ ನಾಗರ ಹಾವು! ಹಡೆದ ಹತ್ತನೆಯ ದಿನ.

(ಹಿಂದಿನ ವೈಭವಪೂರ್ಣ ಮನೆಯ ಪಡಸಾಲೆಯೊಳಗಿನ ಕೋಣೆ. ಕನಸಿನ ದೃಶ್ಯದಂತೆ ಅರಳಿ ಬೆಳಗುತ್ತದೆ. ಮಂಚದ ಮೇಲೆ ಬಾಣಂತಿ ಮಲಗಿದ್ದಾಳೆ.)

ಬಾಣಂತಿ: (ಬಡ ಬಡಿಸುದಾತ್ತಳೆ) ಅವ್ವಾ ... ಹೋಗಿಬರತೇನಿ ಅವ್ವಾ ... ನನ್ನ ಹಣೀಮ್ಯಾಲಿನ ಕುಂಕುಮ ಅಳಿಸಧಾಂಗ ಆಶೀರ್ವಾದ ಮಾಡು ಅವ್ವ ... ವಟ ಸಾವಿತ್ರಿ ಪೂಜೆ ಮಾಡೀನಿ ... ಮುತ್ತೈದು ತನದ ಸಾವು ಬಲ್ಲಿ ನನಗ ... ನನ್ನ ಬತ್ತಿ! ಅಯ್ಯೋ, ನನ್ನ ಬತ್ತಿನ್ನ ಯಾರ ಉಡ್ಯಾಗ ಹಾಕಲಿ? ... ಅವ್ವಾ ನೀನೇ ಅದನ್ನ ಆರೈಕೆ ಮಾಡಬೇಕು ... ಹೌದವ್ವ ... ಮಲತಾಯಿಯ ಪಿಸಕ ಉಡಿ ಯೊಳಗ ಅದನ್ನ ಆರೈಕೆ ಮಾಡಬೇಕು ... ಉಡಿ ಹರದು ಭೂಮಿ ಪಾಲು ಆದೀತು ಕೂಸು ... ಅಯ್ಯೋSS ... (ಚಿಟ್ಟನೆ ಚೀರುವಳು).

ತಾಯಿ: (ಗ್ರಾಯದ ಮುದಿಕೆ, ವಿಧವೆ ಅಬ್ಬರಿಸಿ ಬರುತ್ತಾಳೆ). ಸಾವಿತ್ರಿ, ಯೇ ಸಾವಿತ್ರಿ! ಹಿಂಗ್ಯಾಕ ನಮ್ಮವ್ವ ... ಏನು ಕನಸು—ಗಿನಸು ಬಿಟ್ಟತ್ತೇನು? ಎದಿಯ ಮ್ಯಾಲೆ ಕೈ ಬಿಟ್ಟತ್ತ?

ಸಾವಿತ್ರಿ: (ಗಾಬರಿಗೊಂಡೆದ್ದು) ಅವ್ವ! ಹೌದವ್ವ, ಏನೋ ಕೆಟ್ಟ ಕನಸು! ... (ದುಃಖಿಸಿ) ನನ್ನ ಕೂಸಿಗೆ ಪರದೇಸಿತನಾ ಬರಬಾರದವಾ! ... ಹೆಣ್ಣುಮಕ್ಕಳಿಗೆ ವಸ್ತ್ರ ಒಡಿವಿ ಏನೂ ಇಲ್ಲದಿದ್ದರೂ ಚಿಂತಿಲ್ಲಾ, ಒಂದು ತೌರು ಮನಿ ಮಾತ್ರ ಇರ ಬೇಕವಾ ... ನನ್ನ ಮಗಳಿಗೆ ತೌರುಮನಿಯ ಸೌಖ್ಯ ಸಿಕ್ಕೀತೇನವ್ವ?

ತಾಯಿ: ಹತ್ತು ದಿನದ ಬತ್ತಿಯ ಸಲುವಾಗಿ ತೌರುಮನಿಯ ಚಿಂತಿ ಯಾಕವಾ? ಹೆಣ್ಣುಮಕ್ಕಳ ಅಂದರೆ ಹಡದ ಮನಿಗೆ ಗೌರಿ ಇದ್ದ ಹಾಂಗ, ಕೊಟ್ಟ ಮನಿಗೆ ಲಕ್ಷ್ಮೀ ಇದ್ದಾಂಗ. ಅದಕ್ಕಂತ ತೌರುಮನಿಯವರೂ ಪ್ರೀತಿ ಮಾಡಬೇಕು; ಅತ್ತಿ ಮನಿಯವರೂ ಪ್ರೀತಿ ಮಾಡಬೇಕವಾ.

(ಮತ್ತೆ ಕತ್ತಲೆ)

ಮುದುಕಿಯ ಧ್ವನಿ: ಇಷ್ಟು ಮಾತಾಡಿ ಮಮತಾ ತೋರಿಸಿದ ಮಗಳಿಗೆ ಅವೊತ್ತೇ ರಾತ್ರಿ ... ಅಯ್ಯೋ ನನ್ನ ದೇವರು! ...

(ಮಂದ ಬೆಳಕಿನಲ್ಲಿ ಮತ್ತೆ ಮೇಲಿನಂತೆ ಬಾಣಂತಿ ಕೋಣೆಯ ದೃಶ್ಯ.)

ಚಾಣಂತಿ: (ಮಲಗಿದಲ್ಲಿ ಚಿಟ್ಟನೆ ಚೀರುವಳು. ಕೈ ಮೇಲಕ್ಕೆ ಚೆಲ್ಲುವಳು).

ಹಿರಿಯ ಮಗ: (ಗಾಬರಿಗೊಂಡು ಓಡಿಬರುವವನು) ಅಯ್ಯಯ್ಯೋ? ಹಾವು, ಹಾವು! (ಗಡಬಡಿಸುತ್ತ ಮೂಲೆಯೊಳಗಿನ ಒನಕಿಯನ್ನು ಹಿಡಿದುಕೊಂಡು) ಹಾವು! ಸಾವಿತ್ರಿ, ಸಾವಿತ್ರೀsss ... ಅಯ್ಯೋ ಕೂಸಿನ ಹತ್ತಿರ ಬಂತು. (ವನಕಿ ಎತ್ತಿ ಅದನ್ನು ಹೊಡೆಯುವವನು).

ತಾಯಿ: (ದಿಕ್ಕೆಟ್ಟು ಓಡಿಬರುವಳು) ಅಯ್ಯೋ ಏನು ಮಾಡಿಟ್ಯೋ ಮಾರಾಯಾ ನಾಗರಹಾವಲ್ಲೊ! ಮನೀ ಲಕ್ಷ್ಮೀದೇವಿನ್ನ ತಲಿ ಹೊಡೆದೆಲ್ಲೊ! ... ಸಾವಿತ್ರೀ, ಅಯ್ಯೋ ಸಾವಿತ್ರಿ ... ಇದೇನೋ ಘಾತ ಆಯಿತಪಾ! ... ದೇವರ ಮನೆಯ ಮಗಳು, ಮನೆಗೆ ಬರೋ ಲಕ್ಷ್ಮೀ ಇಬ್ಬರೂ ಹೋದರೇನೋ ನನ್ನ ಪಾಲಿಗೆ! ... ಏನು ಬಂತಪಾ ದೇವರ! ಅಯ್ಯೋ ನನ್ನ ಖೊಟ್ಟನಸೀಬ ... ಸಾವಿತ್ರೀ, ಯೇ ಸಾವಿತ್ರಿ sss! ಹೋದಳು. ನನ್ನ ಮನೆಯ ಗೌರಿ ಮಾಯವಾದಳು ... ಹ್ಯಾಂಗ ನುಂಗಿಕೊಳ್ಳೀ ಈ ದುಃಖ ನಾನು! ... ನನ್ನ ಮುಂದ ನೀ ಹೋಗಬೇಕೇನ ನನ್ನ ಮಗಳ! ಮುತ್ತೈದಿ ತನಾ ಬೇಕಂದಿ! ... ಆದರ ಈ ಪರಿಯೇನ ನನ್ಮವ್ವಾ! ... ನನ್ನಂಥಾ ಹಡ್ಡಿಗೆ ಯಾಕ ಬರಬಾರದು ಸಾವು! ... ಹ್ಯಾಂಗ ನುಂಗಿಕೊಳ್ಳಿಪಾ ದೇವರ ಈ ದುಃಖಾನ ...

(ಮತ್ತೆ ಕತ್ತಲೆ)

ಮುದಿಕಿಯ ಧ್ವನಿ: (ಗಂಭೀರವಾಗಿ) ನುಂಗಿಕೊಂಡು ದುಃಖಾ ನುಂಗಿ ನುಂಗೇ ಹೊಟ್ಟಿ ತುಂಬಿಸಿಕೊಂಡೆ ... ಗಂಡನ ಕಳಕೊಂಡೆ ... ದುಃಖಾ ನುಂಗಿಕೊಂಡೆ, ಮಕ್ಕಳ ಮಾರಿ ನೋಡಿ, ಮಗಳನ್ನು ಕಳಕೊಂಡೆ, ದುಃಖಾ ನುಂಗಿಕೊಂಡೆ. ಗಂಡಸ ಮಕ್ಕಳ ಮಾರೀ ನೋಡಿ ಇಲ್ಲಿಗೇ ತೀರಲಿಲ್ಲ ನನ್ನ ಕಣ್ಣೀರು ... ನನ್ನ ಖೊಟ್ಟಿ ನಸೀಬ ಇನ್ನೂ ಹೊಂಚುಹಾಕತನ ಇತ್ತು ... ಅಯ್ಯೋ ನನ್ನ ಖೊಟ್ಟಿ ನಸೀಬ!

ಯಜಮಾನರ ಧ್ವನಿ: ಕಾಳಜಿ ಮ್ಯಾಡಬ್ಯಾಡಾ. ನಿನಗೆ ನಿಧಿ ಸಿಕ್ಕೇ ತೀರತದ ... ಸುಖದ ನಿಧಿ.

ಮುಧಿಕಿಯ ಧ್ವನಿ: ಅಯ್ಯ ನನ್ನ ನಿಧಿಯೆ! ಅಯ್ಯ ನನ್ನ ಸುಖಾನ! ನಿಧಿ ಅಲ್ಲಾ, ನಿಧಿನ ನನಗ ಸಿಗೂದು ...

(ಮತ್ತೊಂದು ದೃಶ್ಯ: ಸ್ವಪ್ನ ಸೃಷ್ಟಿಯಂತೆ ಮೂಡಿಬರುತ್ತದೆ. ಅದೇ ಪಡಸಾಲೆ ... ಅದೇ ಕೋಣೆ. ಆದರೆ ಮಲಗಿನುದವ ಹಿರಿಯ ಮಗ.)

ಮಗ: ಅವ್ವಾ! ಬ್ಯಾಡವ್ವಾ ನಿನ್ನ ಮುಂದ ನಾಸಾಯೋದು ಬ್ಯಾಡಾ ... (ನರಳು ವನು) ನನ್ನ ಸಾವಿನ ದುಃಖ ನಿನಗೆ ಎಷ್ಟಾದೀತು ಅಂಬೋ ಕಲ್ಪನಾ ನನಗ ಅದ... ಎಷ್ಟಂತ ದುಃಖ ನುಂಗಿಕೊಳ್ಳಬೇಕವ್ವ ನೀನು! ನಮ್ಮ ತಾಯಿ ಆದ ತಪ್ಪಿಗೆ ದುಃಖ ಸಹನ ಮಾಡೋದ ಒಂದು ನಿನ್ನ ಪಾಲಿನ ಕಟ್ಟಿಟ್ಟ ಬುತ್ತಿಯೇನು? ...

ಅವ್ವಾ, ನನ್ನ ಉಳಿಸಿಕೋ ... ನನ್ನ ಸಾವಿನಿಂದ ಪಾರುಮಾಡು! ... ಶಾಪಾ! ನಾಗರ ಹಾವು ಕೊಂದ ಶಾಪಾ! ... ಸುಬ್ರಹ್ಮಣ್ಯಾಕ್ಕ ಹೋಗಿ ಬಂದರೂ ಸವೆಯುಲಿಲ್ಲ ಶಾಪ! ... ಈ ಶಾಪ ನನ್ನ ಬಲಿತಗೊಂಡೇ ಹೋಗತಲೇನವ್ವಾ! ...ಮದಿವಿ ಮಾಡಿಕೊಳ್ಳಲಿಲ್ಲಾ ಅದೇ ಒಂದು ಪುಣ್ಯಾ ...

ಮುದಿಕಿಯ ಧ್ವನಿ: ಹೌದಪ್ಪ, ಆದರ ಮನೀಗೆ ಲಕ್ಷ್ಮೀದೇವಿ ಅಂಥಾ ಸೊಸಿ ಬಂದು ಮನೆತನ ಉದ್ಧಾರ ಮಾಡ ಬ್ಯಾಡನೊ ಏಳನೆಯ ತಲಿಗೆ, ಸೆಟಗೊಂಡು ಹೋದ ಲಕ್ಷ್ಮೀ ತಿರುಗಿ ಬರತಾಳ ಅಂದಿದ್ದರು. ಆದರೇನು?

ಮಗ: ಏಳನೆಯ ತಲಿ ಅಂದರ ನಾನೊಬ್ಬನೆ ಅಲ್ಲವಾ—

ಮುದಿಕಿಯ ಧ್ವನಿ: ಹೌದಪಾ, ನನಗೂ ಗೊತ್ತು. ಆದರ ಮಾರಿಗೆ ನಿಲಕದ್ದು ಮೈಕೈಗೆ ನಿಲಕೀತೇನೊ.

ಮಗ: (ಏನೋ ತೀವ್ರ ವೇದನೆಯಾದಂತಾಗಿ) ಅಯ್ಯೋ ಅವ್ವಾ! ಮುಗೀತವಾ ನನ್ನದಿನ್ನ! ಹ್ಯಾಂಗ ತಡೀಲಿ ಈ ವ್ಯಥಾ...ಆದರ ಇದಕ್ಕಿಂತಾ ಹೆಚ್ಚಿನ ವ್ಯಥಾ ನಿನಗ ಕೊಟ್ಟು ಹೋಗತೀನಲ್ಲವಾ ನಾನು...ಅವ್ವಾ ನುಂಗಿಕೋ, ಬಂದದ್ದೆಲ್ಲಾ ನುಂಗಿಕೋ! ...

(ಕತ್ತಲೆ ಪಸರಿಸುವುದು. ಮತ್ತೆ ಮುದಿಕಿಯ ಗೋಡೆ ಬಿದ್ದ ತೇವ ಏರಿದ ಮನೆ. ಗುಬ್ಬಿಯ ಚಿಮಣಿ ಮತ್ತೆ ಮಿನಗುತ್ತಲಿದೆ. ಮುದಿಕಿ ಸಾವರಿಸಿಕೊಂಡು ಎದ್ದು ಕೂಡುತ್ತಾಳೆ.)

ಮುದಿಕಿಯ ಧ್ವನಿ: ಹಯ್ಯೋ ನನ್ನ ಹಣೇ ಬರಹ! ಜಗತ್ತಿನ್ಯಾಗ ಯಾರಿಗಾದರೂ ಬಂದಿತ್ತೇ ಇಂಥಾ ಭವಣಿ! ನುಂಗಿಕೋ, ನುಂಗಿಕೊ...ಬಂದದ್ದನ್ನೆಲ್ಲಾ ನುಂಗಿಕೊ ಅಂತ ಹೇಳಿದರು...ನುಂಗಿಕೋತೀನಿ, ಕಣ್ಣಾಗ ಕಣ್ಣೀರು ನುಂಗಿಕೋತಿನಿ. ಹೊಟ್ಟ್ಯಾಗ ದುಃಖ ನುಂಗಿಕೋತೀನಿ. ವಿಷಾ ನುಂಗಿಧಾಂಗಾ ನುಂಗಿಕೋತೀನಿ. ವಿಷಾನುಂಗಿ ಸಾಯುವವಳಲ್ಲ ನಾನು, ವಿಷಾ ಜೀರ್ಣಿಸಿಕೊಂಡು ಜೀವಿಸುವವಳು, ಸಾವನ, ಜೀರ್ಣಿಸಿಗೊಂಡು ಜೀವಾ ಹಿಡಕೊಂಡು ಇದ್ದೀನಿ, ಸಂಸಾರದಾಗ ಸುಖಾಕಂಡು ಬಿಟ್ಟೇನು ಅಂತ ಬ್ಯಾವ್ಯಾ ತೊಟ್ಟು ನಿಂತೀನಿ. (ಕೈಯಲ್ಲಿ ಬದಿಗೆ ಬಿದ್ದಿರುವ ಹಾರಿ ಹಿಡಕೊಂಡು) ನಿಧಿ ಶೋಧಿಸೇ ಬಿಡಬೇಕು ಅಂತ ಹಾರಿ ಹಿಡಕೊಂಡು ನಿಂತೇನಿ...ಎಲಾ ಏಳನೇ ತಲಿ ಚಂಡಾಲಾ! ಬಾರಲಾ ಎಲ್ಲಿ ಹೋಗೀದಿ. ಇಲ್ಲೆ ತಗ್ಗು ತಗೆದು, ನಿಧಿ ಹುಡುಕಿ ಅದು ಕುಣ್ಯಾಗ ನಿನ್ನ ಹುಗದ ಬಿಡತೀನಿ ಬಾರಲಾ. ನಿಧಿ ಹೋಗಿ ಬೆಂಕಿ ಹುಟ್ಟಿದರ ಅದನ್ನ ನಿನ್ನ ಚಿತಿಮಾಡಿ ಅದರ ಮ್ಯಾಲೆ ಇಡತೀನಿ ನಿನ್ನ! ...ಸತ್ತು ಕೊಟ್ಟ ಹೋದವರ ದುಃಖಾ ಹ್ಯಾಂಗಾದರೂ ನುಂಗಿಕೊಳ್ಳಬಹುದು, ನುಂಗಿಕೊಂಡೇನಿ. ಆದರ ಇದ್ದುಕೊಂಡು ಸಾವಿನ ರುಚಿ ತೋರಿಸತೀಯಲ್ಲೊ ನನಗ!... ಆದರೇನು ತಾಯಿಯ ಕರುಳು ಅಂಬೋದು ಕೆಟ್ಟದು. ನಾ ನಿನ್ನ ತಾಯಿ

ಅಂಬೋದನ್ನ ನೀನು ಮರೆತರೂ ನೀನು ನನ್ನ ಮಗಾ ಅಂಬೋದನ್ನ ನಾ ಹ್ಯಾಂಗ ಮರಿಲ್ಯೊ...ಇಷ್ಟು ನಿನ್ನ ಸ್ರಾಪಳಿಸಿದರೂ ನಿನ್ನ ಸಲುವಾಗಿ ನಿಧಿ ಹುಡಿಕಿ ಕೊಡ ತೀನಿ ಬಾರಲಾ...ಮದಿವ್ಯಾಗು...ಮನೀಗೆ ಸೊಸಿ ಬರ್ಲಿ...ಮೊಮ್ಮಕ್ಕಳನ್ನ ಕಾಣ ತೀನಿ...ಮನಿ ಮೊದಲಿನ್ಹಾಂಗೆ ತುಂಬಿಕೊಂಡು ಬೆಳಗಲಿ...ನಿಧಿ! ನಿಧಿ! ...ನಿಧಿ ಹುಡಿಕೇ ಬಿಡತೀನಿ! ಸಂಸಾರದಾಗ ಸುಖಾ ಅಂಬೂದನ್ನ ಅಗದು ತಗೀತೀನಿ. ಬೆಂಕಿ ಕೂಡ ಆಗಿ ಬರಲಿ, ಬಂಗಾರದ ಕೂಡ ಆಗಿ ಬರಲಿ! ಸೆಟಗೊಂಡು ಹೋದ ಲಕ್ಷ್ಮೀನ್ನ ಸೆರಗು ಹಿಡಕೊಂಡು ಬರತೀನಿ. ಎಲ್ಲಿ ಹೋಗತಾಳ ಆಕಿ ಲಕ್ಷ್ಮಿದೇವಿ ಅಂಬಾಕಿ, ಇಲ್ಲೇ ಮೊಳಕಾಲು ಮುರಕೊಂಡು ಬಿದ್ದಿರಬೇಕು ಹಾಂಗ ಮಾಡಿತೀನಿ ... (ಯಜಮಾನರ ಫೋಟೋ ನೋಡಿ) ನೋಡ್ರಿ, ನೀವು ಸತ್ತರೂ ನಾನು ಬದುಕಿ ಇದ್ದೀನಿ...ಯಾವ ಸುಖಾ, ಯಾವ ನಿಧಿ ಕಾಣಲಿಕ್ಕೆ ಹೋಗಿ ಬೆಂಕಿ ಅಂತ ಅಂಜಿ ನೀವು ಜೀವಾ ಕೊಟ್ರಿ ಆ ಸುಖಾ, ಆ ನಿಧಿ ಕಾಣಲಿಕ್ಕೆ ನಾನು ಸಿದ್ಧಳಾಗಿ ನಿಂತೀನಿ... (ಮಗಳ ಫೋಟೋ ನೋಡಿ) ಮಗಳs ನಾಗರ ಹಾವಿನ ದವಡ್ಯಾಗ ಸಿಕ್ಕು ಸತ್ತಿ! ಕಾಳಜಿ ಮಾಡಬ್ಯಾಡ ನನ ಮಗಳ, ಅದೇ ನಾಗರ ಹಾವಿನ ಹೆಡೆಮ್ಯಾಲಿನ ಮಣಿ ತರಲಿಕ್ಕೆ ಸಿದ್ಧಳಾಗಿ ನಿಂತೀನಿ, (ಮಗನ ಫೋಟೋ ನೋಡಿ) ಅಪಾ, ನಾಗರ ಹಾವಿನ ಶಾಪದ ಪಾಪ, ಸುಬ್ರಹ್ಮಣ್ಯ ತೋಳೀಲಿಲ್ಲಾ...ಇಕಾ ನಾನು ತೋಳಲಿಕ್ಕೆ ನಿಂತೀನಿ ನೋಡು...ಎಣ್ಣಿಗೆ ಸೀಗೆಕಾಯಿ ನಿಂತ ಹಾಂಗ...ನಿಧಿ ಹುಡುಕತೀನಿ. ಒತ್ತಿಯ ಮನಿ ಕಬ್ಜಾ ಆಗುವ ಮೊದಲು ಹುಗದು ಬಿದ್ದ ಲಕ್ಷ್ಮೀನ್ನ ಅಗದು ತಗೀತೀನಿ...ಯಾರೂ ಕಾಣದ ಸುಖಾ ಹುಡುಕಲಿಕ್ಕೆ ಗಂಡನ ಬೂದಿ ಮೆಟ್ಟಿ, ಮಗಳ ಸಾವುನುಂಗಿ, ಮಗನ ಅಸ್ತಿಯೊಳಗ ಆಸ್ತಿ ಹುಡುಕಲಿಕ್ಕೆ ಹೊಂಟು ನಿಂತೀನಿ...ಬೆಳಕು ಹರಿಯೂದರಾಗ ನೆಲ ಅಗಿತಿನಿ, ನಿಧಿ ತಗಿತಿನಿ. ನಾನೊಬ್ಬಾಕಿ ಹಣ್ಣ ಹಣ್ಣ ಮುದಿಕಿ ಆದರೂ ಈ ನಿಧಿ ಅಂಬೋ ಸುಖದ ಮುಖಾ ನೋಡಿ ಕಣ್ಣು ಮುಚ್ಚ ಬೇಕು ಅಂತ ಜೀವಾ ಹಿಡಿದಿನಿ. ಚಾಂಡಲನs ಆದರೂ ಮಗ ಸುಳ್ಳಲ್ಲ...ಆ ಮಗನ ಕೈಗೆ ಲಕ್ಷ್ಮೀನ ಕೊಟ್ಟು ನಾನೂ ಕಣ್ಣು ಮುಚ್ಚತೀನಿ...ಎಲ್ಲಿದಾಳ ಆ ಲಕ್ಷ್ಮೀದೇವಿ ನೋಡೆ ಬಿಡತೀನಿ...

(ಮೈ ತುಂಬಿದವರಂತೆ ಹಠಾತ್ತನೆ ಎದ್ದು ಸೆರಗು ಸೊಂಟಕ್ಕೆ ಬಿಗಿದುಕೊಂಡು ಕೈಯಲ್ಲಿ ಹಾರಿ ಹಿಡಿದುಕೊಂಡು ಯಜಮಾನರ ಫೋಟೋ ಬಿರುಗಣ್ಣಿನಿಂದ ಬಿರು ಬಿರು ನೋಡುತ್ತ... )

ನೋಡ್ರಿ! ನಿಮ್ಮ ಫೋಟೋದ ಬುಡಕ ನಿಧಿ ಅಗೀತಿನಿ...ಸಿಗಲಿಲ್ಲಾ ಅಂದರ ಇದ ಹಾರಿಲೇನ ತಲಿ ಒಡಕೊಂಡು ಒಮ್ಮೆ ನೀಗತಿನಿ ಇದ್ದ ತೆಗ್ಗಿನ್ಯಾಗ ತಲಿಯಿಡತೀನಿ. ಏನಾರ ಹೇಳೋದಿದ್ದರ ಹೇಳ್ರಿ! (ದುರು ದುರು ನೋಡುವಳು.) ಅಂ? ಯಾಕ? ಯಾಕ ಮಾತಾಡವಲ್ರಿ! ...ಬಿಚ್ಚರಿಬಾಯಿ! ...ಎರಡು ಮಾಡ್ರಿ ತುಟಿ! ... ಸರಿ: ಸುಮ್ಮನಿದ್ದರ ಸಮ್ಮತಿ ಅಂತೀರೇನು? ...ತೊಗೊಳ್ರಿ ಹಾಂಗಾರ!...

(ಧನ್, ಧನ್ ಎಂದು ಫೋಟೋದ ಕೆಳಗೆ ಗೋಡೆಯ ಅಡಿಗೆ ಅಗಿಯ ತೊಡಗುವಳು. ತೇಕುವಳು, ಆಯಾಸ ಪಡುವಳು. ನಡು ನಡುವೆ ಬೆವರು ಒರಸಿ ಕೊಳ್ಳುವಳು. ಯಜಮಾನರ ಫೋಟೋ ನೋಡುವಳು. ಮತ್ತೆ ಧನ್ ಧನ್ ಎಂದು ಅಗಿಯ ತೊಡಗುವಳು... )

ಉಶ್ಶ್! ...ಮೂರು ದಿವಸ ಹೊಟ್ಯಾಗ ಅಶನ ಇಲ್ಲಾ...ಎಲ್ಲಿಂದ ಬಂತೋ ಆವೇಶ... ಸುಧಾಮನ ಮನಿ ಸುವರ್ಣದ್ದು ಆದಹಾಂಗ ನಮ್ಮ ಮನಿಗೂ ಝಗಾ ಝಗಾ ಅನಬೇಕು...ಇಲ್ಲದಿದ್ದರ? ಇಲ್ಲದಿದ್ದರ ಇದs ಕುಣ್ಯಾಗ ಬೀಳಬೇಕು ನನ್ನ ಘಟಾ... (ಯಜಮಾನರ ಫೋಟೋ ನೋಡಿ) ಗೊತ್ತಾದ ಇಲ್ಲೊ—ಇದs ಹಾರಿಲ್ಲೀನ ತಲಿ ಒಡಕೊಂಡು ನಿಮ್ಮ ಪಾದಕ್ಕ ಬಲಿ ಒಪ್ಪಿಸತೀನಿ...

(ಮತ್ತೆ ಅಗಿಯ ತೊಡಗುವಳು)

ಉಶ್ಶ್! ಇದೇನು? ಬೆಂಕೇನೂ ಇಲ್ಲಾ ಭಂಗಾರನೂ ಇಲ್ಲಾ...ಅಗಧಾಂಗೆಲ್ಲಾ ಬರೇ ಮಣ್ಣು...ಬರೇ ಮಣ್ಣು. ಎಲ್ಲಾನೂ ಕಡೀಕೊಮ್ಮೆ ಮಣ್ಣs! ...ಅಯ್ಯೋ! ಶುಕ್ರ ಮೂಡಿದನೊ ಏನೊ! ಬೆಳಕು ಹರಿಲಿಕ್ಕೆ ತಾಸೊ ಎರಡು ತಾಸೊ...ಅಷ್ಟರೊಳಗ ನಿಧಿ ಶೋಧಿಸಬೇಕು...ನನ್ನ ಬಡತನ ಹರೀಬೇಕು...ನನ್ನ ಚಾಂಡಾಲ ಮಗ್ಗ ಈ ಚಂಚಲ ಲಕ್ಷ್ಮೀನ್ನ ಒಪ್ಪಿಸಬೇಕು...ಮನೀಗೆ ಸೊಸಿ ಬರಬೇಕು...ಮನಿ ಎತ್ತಿ ನಿಲ್ಲಿಸಬೇಕು...ಸುಖಾ ಕಾಣಬೇಕು...ಮೊಮ್ಮಕ್ಕಳ್ನ ಮರಿಮಕ್ಕಳ್ನ, ಕಂಡು ಕಣ್ಣು ಮುಚ್ಚಬೇಕು...ಮನೀ ಮೊಮ್ಮಕ್ಕಳೂ ಅಂದರ ಮಗನ ಹೊಟ್ಯೇಲೇನ ಕಾಣಬೇಕು...ಅದಕ್ಕಂತ ಖಡ್ಡಿ ಅಷ್ಟು ಜೀವಾ ಕಾಪಾಡಿಕೊಂಡು ನಿಂತೀನಿ... ಅಯ್ಯ ಹಕ್ಕಿ ಕೂಗತಾವೊ ಏನೊ...ಎಷ್ಟು ಹೊತ್ತು ಆತೋ ಏನೋ ಅಂತೀನಿ...

(ಮತ್ತೆ ಆವೇಶದಿಂದ ಮೈತುಂಬಿದವರಂತೆ ಅಗಿಯ ತೊಡಗುವಳು)

ಉಶ್ಶ್! ...ಯೇ ಲಕ್ಷ್ಮೀದೇವಿs...ಪಾತಾಳದಾಗಿದ್ದರೂ ಬಿಡೂದಿಲ್ಲ ನಿನ್ನ ಅಂತ ತಿಳಕೋ! ನಮ್ಮ ಮನೀ ಬಿಟ್ಟು ಓಡಿ ಹೋಗಲಿಕ್ಕೆ ಆತೇನು ನಿನಗ? ಒತ್ತಟ್ಟಿಗೆ ಇದ್ದಲ್ಲಿ ನೆಚ್ಚಕೊಂಡು ಇರೋದಕ್ಕ ಆಗೋದಿಲ್ಲ ನಿನಗ? ....ಎಷ್ಟು ಚಂಚಲ ನೀನು? ...ಹೆಂಗಸರು ಹೀಂಗ ಚಂಚಲ ಇರಬಾರದು...ಅದಕ್ಕ ನಿನಗ ಇಷ್ಟು ಕೆಟ್ಟ ಹೆಸರು ಬಂದದ್ದು...ಮತ್ತ ನಮ್ಮ ಮನೆತನದಾಗ ಪಾಪದ ಕೊಡ ತುಂಬಿ ಬಂತು ಅದಕ್ಕ ಲಕ್ಷ್ಮೀ ಹೊರಟು ಹೋದ್ಲು ಅಂತಾರ... (ಮತ್ತೆ ಟೊಂಕ ಕಟ್ಟಿ ನಿಂತು) ನಿನ್ನ ಬಿಡತೀನೆಲ್ಲಿ? ನನ್ನ ಸೊಸಿ ಆಕಿ ಬರುವಾಕಿ ನೀನು. ಅತ್ತಿ ಕೈಗುಣಾ, ಕಾಲ್ಗುಣಾ ತೋರಿಸೇ ಬಿಡತೀನಿ ಬಾ. (ಮತ್ತೆ ಆವೇಶಗೊಂಡು ಅಗಿಯ ತೊಡಗುವಳು...ಆಕೆಯ ಅಗಿತದ ಶಬ್ದಕ್ಕೆ ಸರಿ ಜೋಡಿಯಾಗಿ ಹೊರಗಿನಿಂದ ಯಾರೋ ಬಾಗಿಲು ಗುದ್ದುತ್ತಿರುವ ಸಪ್ಪಳ) ಅಯ್ಯ ನನ್ನ ಹಣೇ ಬಾರs! ಮನೀ ಕಬ್ಜಾ ತಗೊಳ್ಳಿಕ್ಕಂತ ಬಂದರೇ ಏನೋ! ಪೋಲೀಸರನ್ನ ಕರಕೊಂಡು

ಬಂದಿದ್ದಾರಾದೀತೇನು ? ... (ಹುಚ್ಚಳಂತಾಗಿ) ಇಲ್ಲಾ, ನಾ ಬಾಗಿಲಾ ತಗೆಯೋದಿಲ್ಲಾ...ಇದು ನನ್ನ ಮನಿ...ನನ್ನ ಮಸಣಾ!...ನನ್ನ ಫೋಟಾ ಇಲ್ಲೇ ಬೀಳೋದು, ಇಲ್ಲಾ ನೆಲದಾಗಿನ ಲಕ್ಷ್ಮೀನ್ನ ಮ್ಯಾಲಕ್ಕ ತಂದು, ಇದನ್ನ ನಂದನ ವನಾ ಮಾಡಿ ನನ್ನ ಮೊಮ್ಮಕ್ಕಳನ್ನ ಆನಿ ಆಡಿಸಿಕೋತ ಲಾಲಿ ಹಾಡೋದು!... (ಜೋರಿನಿಂದ ಅಗಿಯ ತೊಡಗುವಳು. ಅದಕ್ಕೆ ಸರಿ ಸಮಾನವಾದ ವೇಗದಲ್ಲೇ ಹೊರಗೆ ಬಾಗಿಲು ಗುದ್ದುವ ಸಪ್ಪಳ)

ಹೊರಗಿನ ಧ್ವನಿ: ಅವ್ವಾಽಽ! ಅವ್ವಾಽಽ!

ಮುದಿಕಿ: (ಹೌಹಾರಿ) ಆಂ?...ಯಾರವರು ಅವ್ವಾ ಅಂತ ಕೂಗಿದವರು?... ಯಾರೇನು. ಎಲ್ಲರೂ ಅವ್ವಾ ಅಂತ ಕೂಗೋದು. ಪೋಲೀಸರಽ ಆಗಿದ್ದಾರಾದೀತು ...ಯೇ ಲಕ್ಷ್ಮೀ ಯಾಕ ಮಣ್ಣಾಗ ಬಿದ್ದೀಯೆ! ಎದ್ದು ಬರತೀಯೋ ಇಲ್ಲೊ. (ಮತ್ತೆ ಅಗಿಯ ತೊಡಗುವಳು.)

ಹೊರಗಿನ ಧ್ವನಿ: ಅವ್ವಾಽ! ಅವ್ವಾಽ!...ಯಾರೋ ಮನೀಗೆ ಕನ್ನಾ ಹಾಕಲಿಕ್ಕೆ ಹತ್ಯಾರೋ ಏನೋ. ಅಗಿಯೋ ಸಪ್ಪಳ!...ಅವ್ವಾಽಽ, ಅವ್ವಾಽಽ! ತಗೀ, ಬಾಗಿಲಾ ತಗೀ. ನಾನಽ ಅವ್ವಾ! ನಾ ಬಂದೀನಿ...ಇನ್ನ ಮ್ಯಾಲೆ ನಿನ್ನ ಗೋಳಾಡಿಸೋದಿಲ್ಲಾ...ಬದಲೀ ಮನಶ್ಯಾ ಆಗಿ ಬಂದೀನಿ. ಬಾಗೀಲಾ ತಗೀಯ ಅವ್ವಾಽಽ.

(ಎಂದು ಶಕ್ತಿ ಮೀರಿ ಧ್ವನಿ ಮಾಡುವನು. ಅದಕ್ಕೆ ತಕ್ಷಣತೆಯೇ ಶಕ್ತಿಯನ್ನೆಲ್ಲಾ ಕಿತ್ತಿ ಕೈಯಲ್ಲಿ ಹಿಡಿದು ಹಾರಿ ಹಾಕುವ ಸಪ್ಪಳ ಹೆಚ್ಚುತ್ತದೆ)

ಮುದಿಕಿ: ಹಾ!... ಹಾ! ... ಹಾ! ... ಸಿಕ್ಕಿತು. ನಿಧಿ ಸಿಕ್ಕಿತು ...

(ಅತ್ಯಂತ ಆವೇಶದಿಂದ ಅಗಿಯ ತೊಡಗುತ್ತಿರುವಂತೆಯೇ, ಹೊರಗೆ ಅನೇಕ ಧ್ವನಿಗಳು, 'ಅವ್ವಾ, ಅವ್ವಾಽಽ' ಎಂದೂ 'ಅವ್ವಾಽವ್ವಽ' ಎಂದೂ ಕೂಗುತ್ತ ಶಕ್ತಿ ಪ್ರದರ್ಶನ ಮಾಡುತ್ತಿರುವಂತೆ ಗುದ್ದ ತೊಡಗಿದ ಗರ್ಜನೆ ಕೊನೆಗೆ ದಢಲ್ ಎಂದು ಬಾಗಿಲು ಮುರಿದು ಬೀಳುವಂತೆಯೇ, ಮುದಿಕಿ ಅಗಿಯುತ್ತಿದ್ದ ಗೋಡೆಯು ಧೊಪ್ಪೆಂದು ಕುಸಿದು ಬೀಳುತ್ತದೆ. ಮುದಿಕಿ ಹುಗಿದು ಹೋಗುತ್ತಾಳೆ. ನರಳುವ ಶಬ್ದ ಮಾತ್ರ ಎಲ್ಲಿಂದಲೋ ಮಂದವಾಗಿ ಕೇಳಿಬರುತ್ತದೆ.)

ಮಗ: ಅವ್ವಾಽಽ ಅಯ್ಯೋ ಅವ್ವಾಽಽ! (ಮೂರು ದೊಡ್ಡ ಫೋಟೋಗಳು ಕೆಳಗೆ ಬಿದ್ದು ಫಟ್ ಫಟ್ ಎಂದು ಒಡೆದುಹೋಗುತ್ತವೆ. ಮಗನು ಅಡ್ಡ ಬರಸಿ ಮುಂದೆ ಬರುತ್ತಾನೆ. ಉಳಿದ ಓಣಿಯ ಜನರೂ ಓಡಿಬಂದು ಮುದಿಕಿಯ ಮೈಮೇಲೆ ಸೂರೆ ಸೂರೆಯಾಗಿ ಬಿದ್ದ ಕಲ್ಲು, ಹೆಂಟಿ, ಮಣ್ಣುಗಳನ್ನು ಸರಿಸುತ್ತಾರೆ. ಮಗನು ತಾಯಿಯನ್ನು ಹಿಡಿದೆತ್ತುತ್ತಾನೆ.) ಅವ್ವಾಽ ಅವ್ವಾಽಽ ...ನೋಡವಾ ನಾ ಬಂದೀನಿ. ನಿನ್ನ ಕ್ಷಮಾ ಕೇಳಲಿಕ್ಕೆ ಬಂದೀನಿ. ನನ್ನ ಕ್ಷಮಿಸೋದಿಲ್ಲ ? ನನಗೆ ಆಶೀರ್ವಾದ

ಮಾಡೋದಿಲ್ಲ ? ... ಅವ್ವಾಽಽ ... ಅವ್ವಾಽಽ (ಎಂದು ಉಸಿರು ಇದೆಯೋನೋ ಎಂದು ಅಲ್ಲಲ್ಲಿ ಮುಟ್ಟಿ ನೋಡುವನು.)

ಮುದಿಕಿ : (ಇದೀಗ ಸಾಯುವ ಸ್ಥಿತಿಯಲ್ಲಿ) ನಿ–ನಿ–ನಿಧಿ ... (ಆಕಡೆಗೆ ಬೊಟ್ಟು ಮಾಡಿ ತೋರಿಸುವಳು. ಮಗನ ತೊಡೆಯಮೇಲೇನೇ ಗೋಣುಚೆಲ್ಲಿ, ಅವನನ್ನೇ ನೋಡುತ್ತ) ನನ್ನ ನಿಧಿ ! ... ಸಿಕ್ಕಿತು !

ಮಗ : ಅಯ್ಯೋ ಅವ್ವಾ ! ... ಕೊನೆಗೆ ಸಾವಿನಲ್ಲೇ ಸುಖಾ ಕಂಡೆಯಾ ?

(ನಿಂತ ಜನರು ಮರುಗುತ್ತಾ ನಿಂತಿರುವಾಗ)

— ತೆರೆ —

# III. ಸ್ವಪ್ನದರ್ಶಿ

## ಮೊದಲ ದೃಶ್ಯ: ಅಶರೀರವಾಣಿ

(ಅಂತಃಪುರದಲ್ಲಿಯ ಒಂದು ಭವನ. ರಂಗದ ಮೇಲೆಲ್ಲ ಮಬ್ಬು-ಬೆಳಕು ಹರಡಿದೆ. ಒಂದು ಅಲಂಕೃತವಾದ ಮಂಚದಮೇಲೆ ಯುವರಾಜ ಸತ್ಯಕಾಮ ಮಲಗಿದ್ದಾನೆ. ಇನ್ನೊಂದು ಮಂಚದಮೇಲೆ ಯುವರಾಣಿ ಮಗುವನ್ನಪ್ಪಿಕೊಂಡು ಮಲಗಿದ್ದಾಳೆ. ನಡುರಾತ್ರಿಯ ನೀರವ ಹಿತವಾಗಿ ವ್ಯಾಪಿಸಿದೆ. ಈ ಮುಗ್ಧಮೌನಕ್ಕೆ ಒಪ್ಪ ಹಾಕುವಂತೆ ತೆರೆ ಯಿಂದ ನಿರೂಪಕನ ಹಾಡು ಮಂದ್ರ ಸ್ವರದಲ್ಲಿ ಕೇಳುತ್ತದೆ.)

**ನಿರೂಪಕ**

(ರಾಗ: ಬಿಹಾಗ)

ನಟ್ಟನಡುರಾತ್ರಿ
ಬಾನಿನಲಿ ಚಿಕ್ಕೆಗಳ ಜಾತ್ರಿ ॥ ಪಲ್ಲ ॥

ಬಾನು ನೆಲ ತುಂಬಿಹುದು ಗಂಭೀರ ಮೌನ
ನಿದ್ದೆ ತೆರೆ ತೆರೆಯೊಳಗೆ ಮುಳುಗಿದೊಲು ಪ್ರಾಣ
ಕಣ್ಣಿಗೂಡುಗಳಲ್ಲಿ ಬರುತಿಹವು ತೇಲಿ
ಕನಸು—ಬೆಳ್ಳಕ್ಕಿಗಳು ಪೋಣಿಸಿದ ಮಾಲಿ
ಇರುಳು ತೆರೆದಿಹಳೀಗ ಸಾವಿರದ ಕಣ್ಣು
ಸೂರ್ಯದೇವನಿಗಾಗಿ ತಪಗೈವ ಹೆಣ್ಣು
ನೂರು ಸಂಕಲ್ಪಗಳ ಜಾಲವನು ಹೆಣೆದು
ಜೀವನದ ಆಟದಲಿ ತಾನೆ ತಾ ನಲಿದು
ಬಾಳ ಜೋಗುಳ ಹಾಡಿ ನಲಿವ ಧಾತ್ರಿ
ನಟ್ಟನಡು ರಾತ್ರಿ

(ಹಾಡು ಕ್ರಮೇಣ ಕಡಿಮೆಯಾಗುತ್ತ ಮೌನದಲ್ಲಿ ಕರಗಿ ಹೋಗುತ್ತದೆ. ರಾತ್ರಿಯ ಅನಿವಾರ್ಯ ಮೌನ ಮತ್ತೆ ತುಂಬುತ್ತದೆ. ಮೌನದ ನಿರ್ಭರತೆ ಹೆಚ್ಚಾಗಿ, ಪ್ರಳಯದ ಮೊದಲಿನ ಶಾಂತಿಯಂತೆ ಯಾವುದೋ ಅನಿರೀಕ್ಷಿತವಾದ —ಸ್ಫೋಟಕ್ಕಾಗಿಯೋ ಕಾದು ನಿಂತಿದೆ. ಎರಡು, ಮೂರು ಕ್ಷಣ ಇದೇ ರೀತಿ ಯಾಗಿ ದೀರ್ಘವಾಗಿ ಕಳೆಯುತ್ತವೆ. ಆ ಮೇಲೆ ಒಮ್ಮೆಲೇ ಬಾನು ಬಿರಿದಂತೆ ಸಪ್ಪಳವಾಗಿ, ಕ್ರಮವಾಗಿ ಅದೂ ಕಡಿಮೆಯಾದ ಮೇಲೆ ಪ್ರಸನ್ನವಾದ ಗಂಭೀರವಾದ ಅಶರೀರ ವಾಣಿಯೊಂದು ಕೇಳುತ್ತದೆ.)

**ಅಶರೀರವಾಣಿ**

(ರಾಗ: ಖರಹರಪ್ರಿಯ)

ಏಳು ಏಳು ಏಳು ಏಳು
ಮೇಲೇಳು ರಾಜಕುವರ
ಶುಭದ ಸಂಗ್ರಹಕಾಗಿ ಸತ್ಯಕಾಗಿ
ಮನುಕುಲದ ಕಲ್ಯಾಣಕಾಗಿ
ದಿವ್ಯಾಗ್ನಿಯನು ತರಲೆಬೇಕು
ಏಳೇಳು ರಾಜಕುವರ!

(ಸತ್ಯಕಾಮನಿಗೆ ಒಮ್ಮೆಲೆ ಎಚ್ಚರವಾಗುತ್ತದೆ. ಕೂಡಲೆ ಹಾಸಿಗೆಯನ್ನು ಬಿಟ್ಟೆದ್ದು ದನಿಬಂದ ದಿಕ್ಕಿನ ಕಡೆಗೆ ನೋಡುತ್ತಾನೆ. ಎಲ್ಲಿಯೂ ಏನೂ ಕಾಣವುದಿಲ್ಲ. ಅಶರೀರವಾಣಿಯ ಪ್ರತಿಯೊಂದು ಮಾತೂ ಸ್ಪಷ್ಟವಾಗಿ ಅವನ ಕಿವಿಯಲ್ಲಿ ಇನ್ನೂ ನಿನದಿಸುತ್ತಿವೆ. ಕೊನೆಗೆ ಏನೂ ತಿಳಿಯದೆ ಸುತ್ತಲೂ ನೋಡುತ್ತಾನೆ.)

**ಸತ್ಯಕಾಮ**

(ರಾಗ: ಸಿಂಹೇಂದ್ರ ಮಧ್ಯಮ)

ಏನಿದೇನಿದು ಮೊಳಗು, ಕಿವಿಯನಿರಿಯುತಿದೆ!
ಯಾವ ಗುರಿ, ಏನಿಹುದೊ, ನನ್ನ ಕರೆಯುತಿದೆ!
ಮನುಕುಲದ ಕಲ್ಯಾಣ ನಾನೆ ಸಾಧಿಸಬೇಕೆ?
ದೈವವಾಣಿಯ ನಂಬಿ ನಡೆದೊಡೇನಹುದೋ!

(ಮತ್ತೆ ಅದೇ ಸಪ್ಪಳ. ಆಮೇಲೆ ಮತ್ತೆ ಅದೇ ಪ್ರಸನ್ನವಾಣಿ)

**ಅಶರೀರವಾಣಿ**

(ರಾಗ: ಅಠಾಣಾ)

ಸಂಶಯದ ಗಾಳಕ್ಕೆ ಗುರಿಯಾಗಿ, ಮನಸೋತು
ಹಿಂಜರಿಯದಿರು ಧೀರ. ಹೆಜ್ಜೆ ಹೆಜ್ಜೆಗೆ ನಿನ್ನ
ಬೆಂಬಲಕೆ ನಾನಿಹೆನು. ಅಭಯವಾಣಿಯ ನಂಬು
ಏಳೇಳು ರಾಜ ಕುವರ!

(ಸತ್ಯಕಾಮನಿಗೆ ಮೊದಲು ಏನೋ ಕಳವಳ. ಅನಿರೀಕ್ಷಿತವಾದ ಈ ಕರೆಗೆ ಅವನು ಭ್ರಾಂತನಾಗಿದ್ದಾನೆ. ಆದರೆ ಅಶರೀರವಾಣಿಯ ಪ್ರಸನ್ನತೆಯಿಂದ ಅವನಲ್ಲಿ ಧೈರ್ಯ ಬಂದಿದೆ.)

### ಸತ್ಯಕಾಮ

(ರಾಗ: ಪೂರ್ವಿಕಲ್ಯಾಣಿ)

ಸೂಜಿಗಲ್ಲಿನ ಹಾಗೆ ದನಿ ಮನವನೆಳೆಯುತಿದೆ.
ಯಾವ ದೈವದ ಬೆಳಕೊ ಹೊಳೆದಿಹುದು ಮುಂದೆ
ಯಾವ ಕರುಣೆಯು ಬಲವೊ ಕಾಯುವುದು ಹಿಂದೆ.
ಮನುಕುಲದ ಕಲ್ಯಾಣ, ಬಾಳಿಗಿದುವೇ ಧ್ಯಾನ
ಮೀಸಲಿಡುವೆನು ಅದಕೆ ನನ್ನ ತನು–ಮನ–ಪ್ರಾಣ.
ದೈವಸಂಕಲ್ಪದಲಿ ಸನ್ನಿದೆಯೆ ಬಯಕೆಯನು
ಹುರಿಗೊಳಿಸಿ ಸಾಹಸದ ಹೊಂದೇರನೆಳೆಯುವೆನು.

(ತೆರೆದ ಗವಾಕ್ಷದಿಂದ ಬೆಳುದಿಂಗಳಿನ ಕಿರಣವೊಂದು ತೂರಿ ಬರುತ್ತದೆ. ಅದರ ಜೊತೆಗೆ ಗಾಳಿಯ ಸುಳಿಯೊಂದು ಬೀಸುತ್ತದೆ. ಅಷ್ಟರಲ್ಲಿ ಸ್ವರ್ಣ ಪಂಜರದಲ್ಲಿಯ ಸಾರಿಕೆ ಒಂದು ಸಾರೆ ರೆಕ್ಕೆ ಬಡೆದು, ಸತ್ಯಕಾಮ ಎದ್ದದ್ದನ್ನು ನೋಡಿ ತನ್ನ ಭಾಷೆಯಲ್ಲಿ ಅವನನ್ನು ಹೊಗಳುತ್ತದೆ.)

### ಸಾರಿಕೆ

ವಂಶ ವೈಭವ ದೊರೆಯೆ ಬೆಳಗಿರಲಿ ಚಿರಕಾಲ.
ಕಂಚುಕಿಯ ಕರೆಯಲೇ ?

### ಸತ್ಯಕಾಮ

(ರಾಗ: ಮಾಲಕಂಸ)

ಕರೆಯದಿರು ಸಾರಿಕೆಯೆ ಕೈಮುಗಿದು ಬೇಡುವೆನು
ವಿಜನದೇಕಾಂತದಲಿ ದಾರಿ ನಡೆಯಲು ಬೇಕು.

### ಸಾರಿಕೆ

ಕಂಚುಕೀ ! ಕಂಚುಕೀ ! ಕಂಚುಕೀ !

(ವೇತ್ರಧಾರಿಯಾದ ಕಂಚುಕಿಯೊಬ್ಬನು ಪ್ರವೇಶಿಸುತ್ತಾನೆ. ಅಂತಃಪುರದ ಊಳಿಗದಲ್ಲಿಯೇ ಅವನ ಆಯುಷ್ಯ ಕಳೆದಿರುವಂತೆ ಅವನ ಬೆನ್ನು ಬಾಗಿದೆ.)

### ಕಂಚುಕಿ

(ರಾಗ: ಬಾಗೇಶ್ರಿ)

ಜೀಯ, ಕರೆದಿರ ಎನ್ನ ? ಅಣತಿಯ ನೀಡುವದು.
ನಡುರಾತ್ರಿ ಮೀರಿಹುದು. ಪಯಣಗೈಯಲು ಬೇಕೆ ?

ಸತ್ಯಕಾಮ (ಸಂಭ್ರಾಂತನಾಗಿ)

(ರಾಗ: ಬಹಾರ)

ನಿನ್ನಿಲ್ಲ ಕಂಚುಕಿಯೆ, ಹಳವಂಡ ಕನಸಿನಲಿ
ಎಚ್ಚತ್ತು ನಾನಿಹೆನು. ನಿನ್ನ ಕಾರ್ಯವ ನೋಡು.
ನಿದ್ದೆ ಹೋಗುವೆನೀಗ.

(ಕಂಚುಕಿ ಸಾವಕಾಶವಾಗಿ ಹೋಗುತ್ತಾನೆ. ಸತ್ಯಕಾಮ ಅವನ ಗಮನವನ್ನೇ ನಿಟ್ಟಿಸುತ್ತಾನೆ. ಆಮೇಲೆ ಯಾರನ್ನೋ ಸಲಹೆ ಕೇಳುವಂತೆ.)

ಸತ್ಯಕಾಮ

(ರಾಗ: ಬಸಂತ)

ಕರುಳ ಮೋಹದ ಬಂಧ ಏಳು ಸುತ್ತಿನಕೋಟೆ
ಒಲವು ಹಾಕಿದ ತೊಡಕನೆಂತು ಬಿಡಿಸಲುಬಹುದು ?

ಅಶರೀರವಾಣಿ

(ರಾಗ: ಮಾಲಕಂಸ)

ಏಳೇಳು ರಾಜಕುವರ
ಮನುಕುಲದ ಕಲ್ಯಾಣಕಾಗಿ
ದಿವ್ಯಾಗ್ನಿಯನು ತರಲೆಬೇಕು
ಅದಕಾಗಿ ನಿನ್ನ ಜನನ
ಮುಡುಪಿಡಲು ಬೇಕು ಪ್ರಾಣ
ಏಳೇಳು ರಾಜಕುವರ !

(ಅಷ್ಟರಲ್ಲಿ ಯುವರಾಣಿಗೆ ಎಚ್ಚರವಾಗುತ್ತದೆ. ಕಣ್ಣು ಬಿಟ್ಟು ಸತ್ಯಕಾಮ ನನ್ನು ನೋಡಿ, ಹಾಸಿಗೆಯನ್ನು ಬಿಟ್ಟು ಅವನ ಹತ್ತಿರ ಬರುತ್ತಾಳೆ. ಗವಾಕ್ಷದಿಂದ ಚಿಮ್ಮಿದ ಬೆಳದಿಂಗಳು ಅವಳ ಮುಖದ ಮೇಲೆ ಆಟವಾಡಿ ಅವಳ ಅಪ್ರತಿಮ ಲಾವಣ್ಯವನ್ನು ತೋರಿಸುತ್ತದೆ.)

ಯುವರಾಣಿ

(ರಾಗ: ಚಂದ್ರಕಂಸ)

ಇಂಥ ನಟ್ಟಿರುಳಿನಲಿ ನಡೆದುದೆಲ್ಲಿಗೆ ರಮಣ ?
ಮನದ ಚಿಂತೆಯದೇನು ಆರ್ಯಪುತ್ರ ?

ಸತ್ಯಕಾಮ

(ರಾಗ: ದೇಸ)

ಏನಿಲ್ಲ ಮನದನ್ನೆ ಕಂಡ ಕನಸನೆ ನೆನೆಸಿ
ಮೆಲುಕು ಹಾಕುತಲಿದ್ದೆ. ದಿವ್ಯಾಗ್ನಿಯನು ತರಲು
ಪಯಣ ಹೊರಟಿಹೆನು...

ಯುವರಾಣಿ

(ರಾಗ: ಜೋಗಿಯಾ)

ನಿನ್ನ ಒಲವಿನ ರೂಪ ಎನ್ನ ಕಂಗಳ ಬೆಳಕು.
ಕೈಯ ಬಿಡುವೆಯ ದೇವ, ಬಾಳ ನಡುನೀರಿನೊಳು?

ಸತ್ಯಕಾಮ

(ರಾಗ: ತಿಲಕ ಕಾಮೋದ)

ಜೀವನದ ಪಥದಲ್ಲಿ ಕೂಡಿ ಅಗಲುತಲಿಹೆವು.
ಜನುಮಗಳ ಸೋಪಾನವಿಳಿದು ಬಂದರು ಕೂಡ
ಒಂದೆ ಕ್ಷಣ ಸಮ್ಮಿಲನ, ಮರುಚಣವೆ ತಿರುಗುವೆವು.
ಸಾಂಗತ್ಯವಿಲ್ಲಿಲ್ಲ ಬರಿಯ ಪರಿಭ್ರಮಣ.
ಬಾಳಗುಟ್ಟನು ತಿಳಿಯೆ ಪಯಣ ಹೊರಟಿಹೆನೀಗ.

(ಕಂಚುಕಿ ಪ್ರವೇಶಿಸುತ್ತಾನೆ.)

ಕಂಚುಕಿ

(ರಾಗ: ಪಹಡಿ)

ಯುವರಾಜ, ಬಿನ್ನಪವನಾಲಿಪುದು.
ದೊರೆಯು ಪಾದವ ಬೆಳೆಸಿ ನಿನ್ನೆಡೆಗೆ ಬಂದಿಹನು.
ಅರಸಿ ಜೊತೆಯಾಗಿಹಳು, ಬಿನ್ನಹವು ದೊರೆಯೆ.

ಸತ್ಯಕಾಮ

(ರಾಗ: ದೇಸ)

ಧ್ಯೇಯವೊಂದೆಡೆಯಲ್ಲಿ ಮೋಹ ಮತ್ತೊಂದೆಡೆಗೆ
ಎಳೆಯುತಿವೆ ಜೀವವನು, ಗಾಳ ಹಾಕಿದ ಹಾಗೆ.
ವಿಧಿಯಿಟ್ಟ ಬಯಕೆ ಏನಿಹುದೊ!

(ಮಹಾರಾಜ-ರಾಣಿಯೊಂದಿಗೆ ಲಗುಬಗೆಯಿಂದ ಪ್ರವೇಶಿಸುತ್ತಾನೆ. ಇಬ್ಬರ ಮುಖಗಳಲ್ಲಿಯೂ ಆತುರ, ಭಯ, ಕಳವಳ ಚಿತ್ರಿತವಾಗಿವೆ.)

ಮಹಾರಾಜ

(ರಾಗ: ದೇಸಕಾರ)

ಇಂಥ ನಟ್ಟಿರುಳಿನಲಿ ಪಯಣವೆಲ್ಲಿಗೆ ಕುವರ?
ದಂಡಯಾತ್ರೆಯ ನೆವವೊ, ರಾಜಕಾರ್ಯದ ಭರವೊ?
ಚಿಂತೆ ಏಕಿಲೆ ಮಗನೆ, ಹೊತ್ತು ದುಗುಡವಿದೇನು?

ಸತ್ಯಕಾಮ

(ರಾಗ: ದೇಸಕಾರ)

ದಾರಿಕಾಣದ ಜೀವ ಪಯಣಕನುವಾಗಿಹುದು.
ದಿವ್ಯಾಗ್ನಿಯನು ತರಲು ದೈವದಾದೇಶವಿದೆ.
ಮನುಕುಲದ ಹಿತಕಾಗಿ ಹೋಗಿ ಬರುವೆನು ತಂದೆ.

ಮಹಾರಾಜ

(ರಾಗ: ಭೂಪ)

ಕುವರ,
ಮರುಳು ನುಡಿಯನು ನಂಬಿ ಮೋಸಹೋಗದಿರು.
ಪ್ರಾಣವನೆ ಹೋಮಿಸುತ ನೊಂದಿಹರು ಮುನಿವರರು.

ಅಶರೀರವಾಣಿ

(ರಾಗ: ದೇವಗಾಂಧಾರ)

ಏಳೇಳು ರಾಜಕುವರ
ಶುಭಗಳಿಗೆ ಜಾರುತಿದೆ, ನಿಶ್ಚಯದ ಹೆಜ್ಜೆ ಇಡು.
ದೈವ ಯೋಜಿತ ಕಾರ್ಯ ಇಂದು ಸಾಗಲೆಬೇಕು.

(ಎಲ್ಲರೂ ಅವಾಕ್ಕಾಗಿ ಕೇಳುತ್ತಾರೆ. ಮಂತ್ರಬಂಧನಕ್ಕೊಳಗಾದವರಂತೆ ದನಿ ಬಂದ ದಿಕ್ಕಿನೆಡೆಗೆ ನೋಡುತ್ತಾರೆ.)

ಸತ್ಯಕಾಮ

(ರಾಗ: ಭೂಪ)

ತಡೆಯದಿರು ತಂದೆ ಅದೊ ದೈವ ಕರೆಯುತಲಿಹುದು.
ಹೋಗಿ ಬರುವೆನು ತಂದೆ ಹರಕೆಯನು ನೀಡುವದು.

ಮಹಾರಾಜ

(ರಾಗ: ಆಸಾವರಿ)

ತಾಯ ಕರುಳಿಗೆ ಹೇಳು, ನಲ್ಲೆಯೊಲವಿಗೆ ಹೇಳು.
ರಾಜ್ಯವೈಭವ ಸಿರಿಯ ಬಿಟ್ಟು ತೆರಳುವೆ ಎಲ್ಲಿ ?

ಸತ್ಯಕಾಮ

(ರಾಗ: ಭೂಪ)

ಹೋಗಿ ಬರುವೆನು ತಾಯೆ, ಹೊಸದೊಂದು ದಿಗ್ವಿಜಯ
ಹರಕೆಯನು ನೀಡುವದು.

ಮಹಾರಾಣಿ (ಗದ್ಗದಿತಳಾಗಿ)

(ರಾಗ: ಜೋಗಿಯಾ)

ನೂರು ವರುಷದ ಹರಕೆ ನಿನಗಿಹುದು ಕಂದ.
ಮರಳಿ ಬರುವನ್ನೆಗಂ ಅರಮನೆಯ ಮಾಡದಲಿ
ನಿಂತು ಕಾಯುತಲಿರುವೆ, ಹೋಗಿ ಬಾ ಕಂದ.

ಸತ್ಯಕಾಮ

(ರಾಗ: ದೇಸ)

ಹೋಗಿ ಬರುವೆನು ನಲ್ಲೆ, ಸನ್ಮತಿಯ ನೀಡುವದು.
ಮಗುದೊಂದು ಜೀವನದ ಗಾಳಿ ಕರೆಯುತಲಿಹುದು.

ಯುವರಾಣಿ (ಕಂಬನಿಗರೆಯುತ್ತ)

(ರಾಗ: ಜೋಗಿಯಾ)

ಹೋಗಿ ಬಾ ಆರ್ಯಪುತ್ರ,
ಮರಳಿ ಬರುವನ್ನೆಗಂ ಹೊಸ್ತಿಲಕೆ ಹೂವಿಟ್ಟು
ನಿನ್ನ ಬರವನು ಕಾಯ್ವೆ, ನಿನ್ನ ಒಲವನೆ ನೆನೆವೆ.
ಮದುವೆಯಲಿ ನೋಡಿದ್ದ ಧ್ರುವನ ಚಿಕ್ಕೆಯ ಬೆಳಕು
ನಿನಗೆ ಶುಭವನು ತರಲಿ ಹೋಗಿ ಬಾ...

(ಸತ್ಯಕಾಮ ಒಮ್ಮೆ ಎಲ್ಲರನ್ನೂ ಒಲವು ತುಂಬಿ ನೋಡುತ್ತಾನೆ. ತಾಯ ಕಣ್ಣಿನಲ್ಲಿ ವಾತ್ಸಲ್ಯದ ಕರುಣ ಚಿತ್ರವಿದೆ. ಹೆಂಡತಿಯ ಬೊಗಸೆಗಣ್ಣಿನಲ್ಲಿ ಕಂಬನಿ ಸುರಿಯುತ್ತಿವೆ. ತಂದೆಯ ನಿಟ್ಟುಸಿರು ಕರುಳನ್ನು ಬೇಯಿಸುತ್ತಿದೆ.

ಕಂಚುಕಿ ಅಸಹಾಯನಾಗಿ ನೋಡುತ್ತಿದ್ದಾನೆ. ಸತ್ಯಕಾಮ ಒಂದೆರಡು ಹೆಜ್ಜೆ ಹೋಗಿ ಮತ್ತೆ ಹಿಂದಿರುಗುತ್ತಾನೆ.)

ಅಶರೀರವಾಣಿ

(ರಾಗ: ದರ್ಬಾರಿಕಾನಡಾ)

ಮುಂದೆ ನಡೆ ಮುಂದೆ ನಡೆ ಮುಂದೆ ನಡೆ ಧೀರ
ಮೋಹ ಮಮತೆಯ ಮರುಳು
ಕುರುಡುಗೊಳಿಸುವ ಇರುಳು
ನೋಡಲ್ಲಿ ಗುರಿಯ ಚಿಕ್ಕೆಯ ಹೊಳಪು ದೂರ ದೂರ.
ಮೇಲೆ ಗಗನದ ಚಂದ
ಕರೆಯುತಿದೆ ಸ್ವಚ್ಛಂದ
ಮರಳಿದರೆ ನೆನಪು — ಹೆಜ್ಜೆಗಳಿಲ್ಲ! ದಾರಿಕಾರ
ಮುಂದೆ ನಡೆ ಧೀರ.

(ಸತ್ಯಕಾಮ ನಿಶ್ಚಯದ ಹೆಜ್ಜೆಗಳನ್ನಿಡುತ್ತ ಸಾಗುತ್ತಾನೆ. ಉಳಿದವರ ನೋಟಗಳೆಲ್ಲ ಅವನನ್ನೇ ಹಿಂಬಾಲಿಸುತ್ತವೆ.)

— ತೆರೆ —

## ಎರಡನೆಯ ದೃಶ್ಯ: ಜೀವನ ಸೂತ್ರ

(ಅರಣ್ಯದಲ್ಲಿಯ ಒಂದು ಕಾಲುದಾರಿಯ ಗುಂಟ, ರಾಜಕುಮಾರ ಸತ್ಯಕಾಮ ಒಬ್ಬ ಮುನಿಯ ಜೊತೆನೆ ಸಾಗಿದ್ದಾನೆ. ಮುನಿ ಜೀವನ್ಮುಕ್ತನಂತೆ, ವಿಶ್ವದ ರಹಸ್ಯವನ್ನೆಲ್ಲ ಅಂಗೈಯಲ್ಲಿ ಅಡಗಿಸಿಟ್ಟುಕೊಂಡವನಂತೆ ಕಾಣುತ್ತಾನೆ. ಮುಖದಲ್ಲಿ ಗಾಂಭೀರ್ಯ, ಪ್ರಸನ್ನತೆಗಳೆರಡೂ ಇವೆ. ಸತ್ಯಕಾಮನ ವೇಷಭೂಷಣದಲ್ಲಿ ಮಾತ್ರ ಏನೂ ಬದಲಾವಣೆಯಾಗಿಲ್ಲ. ಅದೇ ಸುಕುಮಾರವಾದ ಮುಖ, ಕಣ್ಣುಗಳಲ್ಲಿ ಅದೇ ಸತ್ಯವನ್ನರಸುವ ಕಾತರ ಕಾಣುತ್ತಿವೆ. ಮುಖದಲ್ಲಿ ಮಾತ್ರ ಅತೀವ ವೇದನೆ ಹಾಗೂ ಆಯಾಸ ತುಂಬಿವೆ. ನಡೆಯುತ್ತಿದ್ದ ಹಾಗೇ ನಡುವೆ ನಿಂತು ಮುನಿಯನ್ನು ಉದ್ದೇಶಿಸಿ ಹೇಳುತ್ತಾನೆ.)

ಸತ್ಯಕಾಮ

(ರಾಗ: ತಿಲಕಕಾಮೋದ)

ಬಿಸಿಲುಗುದುರೆಯ ನಂಬಿ ನಡೆದಿರುವೆ ಸಾನೀಗ.
ನೆಲವೆಷ್ಟು ತೋಡಿದರು ನಿಧಿ ಕಾಣದವನಂತೆ
ದಿವ್ಯಾಗ್ನಿಯನು ಕಾಣದಾಗಿರುವೆ. ಮುನಿವರ್ಯ

ಸಾಕಿನ್ನು ತೊಳಲಾಟ. ಅಭಯ ನೀಡಿದ ವಾಣಿ
ಮತ್ತೊಮ್ಮೆ ಕೇಳದಿದೆ. ಮನುಕುಲದ ಕಲ್ಯಾಣ
ಬರಿಯ ಚಿತ್ತದ ಭ್ರಮೆಯು. ಜೀವನದ ವೈವಿಧ್ಯ
ಸುತ್ತು ನೋಡಿದೆನಾನು. ನಿಟ್ಟುಸಿರು ನಿಂತಿಲ್ಲ,
ಕಂಬನಿಗೆ ಬಿಡುವಿಲ್ಲ. ನೊಂದಿಹೆನು ಮುನಿವರ್ಯ
ಸಾಕಿನ್ನು ತೊಳಲಾಟ.

ಮುನಿ (ಸಂತವಿಸುತ್ತ)

(ರಾಗ: ಬಿಲಹರಿ)

ದೈವ ತೋರಿದ ಪಥವ ಜರೆಯದಿರು ವತ್ಸ.
ಶತಯಾಗಗಳ ಫಲವು ಕೊನೆಯ ಯಾಗದೊಳಿಹುದು.
ಕತ್ತಲೆಯು ತಪವಿರಲು ಬೆಳಕು ಮೈದೋರುವೊಲು
ಸಂಕಲ್ಪದುದರದಲಿ ಸಿದ್ಧಿ ತಾ ಜನಿಸುವದು.
ಕಾಲ ಬಂದಿಹುದೀಗ.

ಸತ್ಯಕಾಮ

(ರಾಗ: ದೇಸ)

ನಿನ್ನ ಪದತಲದಲ್ಲಿ ಮಿಾಸಲಿಡುವೆನು ಬಾಳ.
ಗುರುದೇವ ಹರಸುವುದು ಸಫಲ ಜೀವನವನ್ನು.

ಮುನಿ

(ರಾಗ: ಮಧ್ಯಮಾವತಿ)

ದಿವ್ಯನಯನಗಳನ್ನು ನೀಡುವೆನು ಅಂಜನವ—
ನೀಯುವೆನು; ದಿವ್ಯದರ್ಶನವು ನಿನಗಹುದು ಕಂದ!
ನೋಡಲ್ಲಿ ದೃಶ್ಯದಾಚೆಯ ಅದೃಶ್ಯವನು,
ವ್ಯಕ್ತ ಸಾಗರದಾಚೆ ಹೊಳೆವ ಅವ್ಯಕ್ತವನು.
ನಿನ್ನೊಳಗನೇ ನೋಡು, ವಿಶ್ವದೊಳಗನೆ ನೊಡು.
ಇದೋ ಸೃಷ್ಟಿಕ್ರಮ!

(ರಂಗಭೂಮಿಯ ತುಂಬ ಕತ್ತಲು ಪಸರಿಸುತ್ತದೆ. ಅದರ ಜೊತೆಗೇ ಮಂದ್ರ ಸ್ಥಾಯಿಯಲ್ಲಿ ಗುಡುಗಿನಂತಹ ನಾದ ಕೇಳಿಸುತ್ತದೆ. ರಂಗದ ಮಧ್ಯದಲ್ಲಿ ಎದುರಿಗೆ ಸೂರ್ಯೋದಯದ ಅರುಣಕಾಂತಿ ಗೋಚರವಾಗುತ್ತದೆ. ಗುಡುಗಿನ ಸಪ್ಪಳ ನಿಂತು, ಗೆಜ್ಜೆಯ ತಂತುವಾದ್ಯಗಳ ಮೃದುವಾದ ನಾದ ಹಿತವಾಗಿ ಕೇಳುತ್ತದೆ.

ಬೆಳಕು ಕ್ರಮವಾಗಿ ಹೆಚ್ಚಾಗುತ್ತಾ ಒಂದು ಗೋಲವಾಗಿ ತನ್ನ ನ್ನೈಸುತ್ತಾ ತಾನೇ ತಿರುಗುತ್ತದೆ. ಕಿರಣಗಳು ಸುತ್ತಲೂ ಚಾಚಿಕೊಳ್ಳುತ್ತವೆ. ಆಮೇಲೆ ಬೆಳಕಿನ ಗೋಲ ಮಾಯವಾಗಿ ಅದರ ಸ್ಥಳದಲ್ಲಿ ಭೂಮಿ ಕಾಣುತ್ತದೆ. ಅದರ ಮೇಲೆ ಮನುಕುಲದ ಸಂಕೇತವೆಂಬಂತೆ ಮುಗ್ಧ ಶಿಶುಗಳೆರಡು ಕಂಗೊಳಿಸುತ್ತವೆ. ಈ ದೃಶ್ಯ ನಡೆದಿರುವಾಗ, ಕೆಳಗಿನ ಹಾಡು ಪಾರ್ಶ್ವದಿಂದ ಕೇಳಿ ಬರುತ್ತದೆ.)

### ಹಾಡು

(ರಾಗ: ಭೂಪ)

ಭೂಮಿ ವ್ಯೋಮ ತೇಲುತಿಹವು ಇರುಳ ಕಡಲಿನಲ್ಲಿ ಶೂನ್ಯದೊಡಲಿನಲ್ಲಿ,
ತಮದ ನೀರು ತುಳುಕುತಿಹುದನಂತ ಜಲಧಿಯಲ್ಲಿ ಬಾನ ಪರಿಧಿಯಲ್ಲಿ
ತೆರೆಗಳಾಟವಿರದ ಕಡಲಿನಲ್ಲಿ ಗುಂಭ ಮೌನ, ಶೂನ್ಯದ ಬಿಗುಮಾನ.
ಬಾನ ಮೊಗಕೆ ಹುಬ್ಬುಗಂಟು ನೇತಿ ನೇತಿ ಧ್ಯಾನ, ಜನನ ಮರಣ ಲೀನ.

(ರಾಗ: ಸೋಹನಿ)

ನಿಶ್ಶಬ್ದದ ನೀರವತೆಯ ತೆರೆತೆರೆಗಳ ತೆರೆದು
ಕಿಂಕಿಣಿಸುವ ಕಿಂಕಿಣಿಸ್ವರ ಏರಿತು ಎದೆ ತೆರೆದು
ಕಲನಾದದ ಆಮೋದದ ಉನ್ಮಾದದ ಗಾನ
ಆನಂದದ ಸೌಗಂಧದ ಸ್ವಚ್ಛಂದದ ತಾನ

ಕ್ಷಿತಿಜದ ತುಟಿಯಂಚಿಗೆ ಕುಣಿ ಕುಣಿದಿದೆ ಬೆಳಕಿನ ಬಿಂದು
ಸಾಗರದಲಿ ಹರಿದಾಡಿತು ಹೊಂಬೆಳಕಿನ ಸಿಂಧು
ಯುಗ ಯುಗಗಳ ಕತ್ತಲೆಗೂ ಬಂಗಾರದ ಬಣ್ಣ
ತೆರೆ ತೆರೆಯೂ ಮಿರು ಮಿರುಗುತ ಪಡೆದಂತಿದೆ ಕಣ್ಣ

(ರಾಗ: ಭಟಿಯಾರ)

ಆಲದೆಲೆಯಲಿ ಮಲಗಿ ನಲಿಯುವ ದೇವ ಶಿಶುವಿನ ಲೀಲೆಯೊ
ಪ್ರಕೃತಿ ಪುರುಷರ ಹೃದಯದೊಲವಿನ ಅರುಣಕಿರಣದ ಮಾಲೆಯೊ
ತೇಲಿ ಬರುತಿದೆ ಬೆಳಕು ಸೂರ್ಯನ ಸ್ವರ್ಣ ರಥ ನಡೆದಂತೆಯೆ
ಸೃಷ್ಟಿಕಾಲದಿ ಬ್ರಹ್ಮನೆದೆಯಲಿ ಹರ್ಷಜಲ ಸುರಿದಂತೆಯೆ

ಬಾನು ಬೆಳಕಿನ ಸೂಕ್ತ ಹಾಡಿತು ಜೊತೆಗೆ ಹಾಡಿತು ಸಾಗರ
ನಾದ ಗರ್ಭದ ಗಾಳಿ ಹಾಡಿತು ದಿವ್ಯಛಂದದ ಆಗರ
ಬಣ್ಣ ಬಣ್ಣದ ರೂಪ ತಳೆಯಿತು ಮುಗಿಲ ಹೃದಯವು ಸುಂದರ
ಕಡಲ ಹೃದಯದಿ ಮೂಡಿ ಹೊಳೆದವು ಬಾನಬಣ್ಣದ ಮೋಹರ

(ರಾಗ: ಮಾಂಡ)

ತಿರುಗುತಿತ್ತು ತನ್ನ ಸುತ್ತು
ಬೆಳಕಿನೂರ್ಣ ನಾಭ
ಗುರಿಯು ಗೊತ್ತು ತನಗೆ ಗೊತ್ತು
ಬಂದುದೇನೊ ಲಾಭ
ಹತ್ತು ನೂರು ಸಾವಿರಾರು
ಸ್ವರ್ಣರೇಖೆ ಬಂದು
ದೂರ ದೂರ ತೇಲುತಿಹವು
ಕೂಡಿ ಒಂದಕೊಂದು

(ರಾಗ: ಖಂಬಾವತಿ)

ತೇಜೋ ಗೋಲದ ನಡುಗುವ ಹೃದಯವು
ಕೆಂಪಿನ ವಲಯದಿ ಹೊಳೆದಿತ್ತು
ಸ್ವರ್ಣರೇಖೆಗಳ ಎಳೆ ಎಳೆಯಲ್ಲೂ
ಹಸಿರಿನ ಕಾಂತಿಯು ಮಿನುಗಿತ್ತು
ಮಿಂಚಿನ ಬೆಳಕಿನ ಹನಿಗಳ ಹೃದಯದಿ
ಸುತ್ತಲು ನೀಲದ ಪರಿವೇಷ
ಪ್ರತಿಫಲಿಸಿದ ಜಲದಲೆಗಳ ಮೇಲಕೆ
ಕಾಮನ ಬಿಲ್ಗಳ ಹಲ ವೇಷ
ನಕ್ಷತ್ರದ ಹೂಗೊಂಚಲು ಅರಳಿತು
ಬೆಳಕಿನ ಸಾಗರದುಡಿಯಿಂದ
ಮುಗಿಲಿಗೆ ರತ್ನಾಭರಣದ ಕಾಣಿಕೆ
ಭೂಮಿಯು ಒಲವಿನ ಮೃದುಬಂಧ
ಸುರಸುಂದರಿ ಕೈಸನ್ನೆಯ ವಿರಚಿಸಿ
ಮಲ್ಲಿಗೆ ಹೂಗಳ ಸುರಿದಂತೆ
ತಾರಾಗಣ ಹರಿದಾಡಲು ತೊಡಗಿತು
ತನ್ನದೆ ಪಥ ತನಗೆಂಬಂತೆ

(ರಾಗ: ಸೋಹನಿ)

ಶಾಂತವಾದ ಸೂತ್ರವೊಂದು
ಎಲ್ಲಿಂದಲೊ ಬಂದಿತು
ನಟರಾಜನ ನಾಟ್ಯರೇಖೆ
ಯಂತೆ ಸುತ್ತು ಕುಣಿಯಿತು.

ಅರಿಲ ಮುತ್ತುಗಳನು ಹುಡುಕಿ
ಪೋಣಿಸಿತ್ತು ಮಾಲೆಯ
ಮುಗಿಲ ಕಿವಿಗೆ ತೊಡಿಸುತ್ತಿತ್ತು
ಮುತ್ತು ರತ್ನದೋಲೆಯ

(ಈ ಹಾಡು ಮುಗಿಯುತ್ತಿರುವಂತೆಯೇ ರಂಗದಮೇಲೆ ಬೆಳಕು ಮೂಡುತ್ತದೆ. ಸತ್ಯಕಾಮ, ಮುನಿ ಕಾಣಿಸಿಕೊಳ್ಳುತ್ತಾರೆ. ಸತ್ಯಕಾಮನ ಮುಖದಲ್ಲಿ ದರ್ಶನದ ಉತ್ಕಟ ಆನಂದದ ಜೊತೆಗೆ ಬೆರಗೂ ನಲಿಯುತ್ತಿದೆ.)

ಮುನಿ

(ರಾಗ: ಅಠಾಣಾ)

ನೋಡಲ್ಲಿ ಕಣಕಣದಿ ಉರಿಯುತಿದೆ ದಿವ್ಯಾಗ್ನಿ
ಹಸುಹಕ್ಕಿ, ಮರಬಳ್ಳಿ, ನೆಲದ ಹುಡಿ ಹುಡಿಯಲ್ಲಿ
ಕಾರ್ಮೋಡಗಳಂಚಿನಲಿ ತಾನೆ ಸಂಚರಿಸುತಿಹ
ಮಿಂಚು ಬಳ್ಳಿಯಲಿ, ಚಂದ್ರ—ಸೂರ್ಯರ ಅಮಿತ
ಕಾಂತಿಯಲಿ, ಮನುಜ ಹೃದಯದ ದಿವ್ಯವೇದಿಯಲಿ.
ಜಗಕೆ ಜೀವವ ನೀಡಿ ಬಾಳನ್ನು ಕಾಪಿಡಲು
ದೇವ ಸಂಕಲ್ಪದಲಿ ಪ್ರಥಮ ಜಿಹ್ವೆಯ ಚಾಚಿ
ಉರಿಯುತಿದೆ ನೋಡಿದೆಯ? ಕಂಡಿತೆ ದಿವ್ಯಾಗ್ನಿ?

ಸತ್ಯಕಾಮ

(ರಾಗ: ಜೀವನಪುರಿ)

ನೋಡಿದೆನು ಮುನಿವರ್ಯ, ಸಫಲವಾಯಿತು ಪಯಣ.
ಅಗ್ನಿ ವಿದ್ಯೆಯನರಿತೆ, ಜನ್ಮ ಜನ್ಮದ ಕನಸು
ನನಸಾಯ್ತು. ಕಾಣುತಿಹ ದಿವ್ಯಾಗ್ನಿ ಕಂಡಿಹೆನು
ಪಡೆದಿಲ್ಲ ಗುರುದೇವ.

ಮುನಿ

(ರಾಗ: ಬಿಲಹರಿ)

ನಿನ್ನೆದೆಯ ನೋಡಲ್ಲಿ ಉರಿಯುತಿದೆ ದಿವ್ಯಾಗ್ನಿ
ಕಮಲ ರೂಪದಲಿ ಕೆಂಪು ಕಾಂತಿಯಲಿ.

## ಸತ್ಯಕಾಮ

(ರಾಗ: ಭೀಮಪಲಾಸ)

ಧನ್ಯವಿಂದಿಗೆ ಬಾಳು! ಪಡೆದಿಹೆನು ದಿವ್ಯಾಗ್ನಿ
ವಿವರ ವಿವರದಲಿ ಬಾಳು ಚಿತ್ರಿತವಾಗೆ
ಹಾತೊರೆಯುತಿದೆ ದಿಗ್ವಿಜಯಕೆನ್ನಾತ್ಮ.
ಜೀವ ಜೀವದ ಸೆರೆಗೆ ತೋರುವೆನು ಬಿಡುಗಡೆಯ!
ಬಾಳ ಕ್ಷಿತಿಜದ ಮೇಲೆ ಧ್ಯೇಯ ಕರೆಯುತಲಿಹುದು.
ಸುರನದಿಯ ತೀರದಲಿ ತಾರೆ ಹೊಳೆ ಹೊಳೆದಿಹುದು.
ಮನುಕುಲದ ಮೆರವಣಿಗೆ ಸಾಗಿಹುದು ಬೆಂಬತ್ತಿ
ತಂದಿಹೆನು ದೀವಟಿಗೆ, ತೋರುವೆನು ಬಿಡುಗಡೆಯ.

(ಸತ್ಯಕಾಮನ ಮನಸ್ಸು ಅರಳಿದೆ. ನರನರದಲ್ಲಿಯೂ ತುಂಬಿದ ಆದಮ್ಯ ನೀಯ ಉತ್ಸಾಹ ಹಾಡಾಗಿ ಪರಿಣಮಿಸುತ್ತದೆ)

(ರಾಗ: ಭೀಮಪಲಾಸ)

ಮುಗಿಲ ಗರ್ಭ ಗುಡಿಯಲ್ಲಿ, ಬೆಳಕಿನುಡಿಯಲ್ಲಿ ಹೊಳೆಯುತಿದೆ
ಋತದ ದಿವ್ಯ ನೇತ್ರ
ನೂರು ತಾರೆಗಳ ವ್ಯೂಹ ತೆರೆದಿಹುದು ಚಲುವು ಬರೆದಿಹುದು
ನವ್ಯಭವ್ಯಚಿತ್ರ
ಅಲ್ಲಿ ಹಾರು ಮೇಲೇರು
ಋತದ ಬಳಿ ಸಾರು
ಚಲುವು ರಸ ಹೀರು
ಜೀವ ವೈನತೇಯ
ಎಲ್ಲೆಲ್ಲೂ ನೀನಜೇಯ ॥೧॥

ಕಂಡ ಕನಸು ನನಸಾಗಿ ಕಣ್ಣಿನುಣಿಸಾಗಿ ಕರೆಯುತಿದೆ
ದಿವ್ಯಲೀಲೆಗಾಗಿ
ಅಶುಭ ತಿಮಿರ ಮರೆಯಾಗಿ ಹರಿಯುತಿದೆ ಶುಭವು ಕಾಯುತಿದೆ
ಕಮಲ ಮಾಲೆಯಾಗಿ
ಸೌಂದರ್ಯದ ಅಮೃತ ಕುಂಭ
ಹೊಳೆಹೊಳೆದಿದೆ ಚಂದ್ರ ಬಿಂಬ
ಸಪ್ತಲೋಕಗಳ ಸಾರಿ ಸಾಗು ಗಡಿಮೀರಿ
ಜೀವ ವೈನತೇಯ
ಎಲ್ಲೆಲ್ಲೂ ನೀನಜೇಯ ॥೨॥

ಜನನ ಮರಣಗಳ ತೆರೆಗೆ ಜೀವನದ ಮರೆಗೆ ಕಾಯುತಿದೆ
ಸತ್ಯದಭಯ ವಚನ
ದೇವಕರುಣೆ ರಸವಾಗಿ ತಾನೆ ಹೊಸದಾಗಿ ಹರಿಯುತಿದೆ
ದಿವ್ಯಗಾನ ತಾನ
ಮಿಸುನಿ ಗರಿಗಳನು ಕೆದರಿ
ದಿಗ್ದೆಸೆಗೆ ಚೆದರಿ
ಅಮೃತಕಾಗಿ ಮೇಲೇರು ಸಾಗಿ
ಜೀವ ವೈನತೇಯ
ಎಲ್ಲೆಲ್ಲು ನೀನಜೇಯ ॥ ೩ ॥

(ಸತ್ಯಕಾಮ ಸ್ವಲ್ಪ ಹೊತ್ತಿನ ಮೇಲೆ ಈ ಲೋಕದ ಅರಿವು ಬಂದವನಂತೆ ಸುತ್ತಲೂ ನೋಡುತ್ತಾನೆ, ಮುನಿಗೆ ನಮಸ್ಕರಿಸುತ್ತಾನೆ)

ಸತ್ಯಕಾಮ

(ರಾಗ: ದೇಸ)

ಹೋಗುವೆನು ಮುನಿವರ್ಯ ಅಪ್ಪಣೆ ನೀಡುವದು
ಹೊಸಜನುಮ ಪಡೆದಿಹೆನು, ಕಂಡುದನು ಬೀರುವೆನು.

ಮುನಿ

(ರಾಗ: ದೇಸ)

ಹೋಗಿ ಬಾ ವತ್ಸ ಶುಭವಿರಲಿ ಜೀವನಕೆ.

— ತೆರೆ —

ಮೂರನೆಯ ದೃಶ್ಯ : ಪೂರ್ವಸ್ಮೃತಿ

(ಅಂತಃಪುರದ ಒಂದು ಭಾಗ. ಗೋಡೆಗಳಿಗೆ ಚೀನಾಂಬರದ ತೆರೆಗಳು ಶೋಭಿಸುತ್ತಿವೆ. ಒಂದೆರಡು ಸುಸಜ್ಜಿತ ಆಸನಗಳಿವೆ. ಬಲಗಡೆಗೆ ಒಂದು ಪೀಠದ ಮೇಲೆ ವೀಣೆ ಇದೆ. ತೆರೆದ ಗವಾಕ್ಷದಿಂದ ಉದಯಕಾಲದ ಬೆಳಕು ಚಲುವಾಗಿ ಬಿದ್ದಿದೆ. ಯುವರಾಣಿಯ ಚೇಟಿಯೊಬ್ಬಳು ಕೈಯಲ್ಲಿ ಪೂಜಾದ್ರವ್ಯಗಳನ್ನು ಹಿಡಿದುಕೊಂಡು ಗವಾಕ್ಷದಿಂದ ಹೊರಗೆ ನೋಡುತ್ತಾ ಹಾಡುತ್ತಿದ್ದಾಳೆ.)

ಚೇಟಿ

(ರಾಗ: ಬಿಭಾಸ)

ಬಾನಿನೆದೆಯ ವರ್ಣಕೋಶ । ಸೂರೆಯಾಯ್ತು ಸುಪ್ರಕಾಶ
ಜೀವಕಮಲ ಸ್ಪಂದನ

ನೇವರಿಸುತ ಕೆನ್ನೆ ಗುರುಳು । ಸರಿದಳಿದೋ ದೂರ ಇರುಳು
ಬಿಡಿಸಿ ಪ್ರೀತಿ ಬಂಧನ
ರವಿ ಏರಿದ ಸ್ಯಂದನ
ರಾರಾಜಿಪ ಸ್ವರ್ಣರಥದಿ । ಸೂರ್ಯ ನಡೆದ ಬಾನ ಪಥದಿ
ಅರುಣ ಕಿರಣ ಮೋಹನ
ಹೂಹೂವಿನ ಕಣ್ಣಿನಲ್ಲಿ । ಕಂಪು ತಳೆದ ಮಣ್ಣಿನಲ್ಲಿ
ಕೃತಜ್ಞತೆಯ ವಿಕಸನ
ಕರುಣೆಯ ಉನ್ಮೀಲನ
ಜಗದೊಡೆಯನ ಪ್ರೀತಿ ಬಿಂದು ॥ ಮಂಜಿನ ಹನಿಯಾಗಿ ನಿಂದು
ಸವಿನೆನಪಿದೆ ದೇವನ
ಆ ದೇವನ ಚರಣಧೂಳಿ । ಹೊತ್ತಲೆವುದು ಬನದೆಗಾಳಿ
ಜಗ ನೆನೆಯಿತು ದೇವನ
ಪ್ರತಿ ಕ್ಷಣಕೂ ಪಾವನ

(ಯುವರಾಣಿ ಪ್ರವೇಶಿಸುತ್ತಾಳೆ. ಈಗ ಅವಳು ರಾಜಮಾತೆ. ದೀರ್ಘ ವಿರಹದ ಶೋಕ ಛಾಯೆ ಅವಳ ಮುಖದ ಮೇಲಿದೆ. ಪ್ರಾಯ ಕಳೆದುಹೋಗಿದ್ದ ರಿಂದ ನಡಿಗೆಯಲ್ಲಿ ಮೊದಲಿನ ಉತ್ಸಾಹವಿಲ್ಲ. ಇಂದು ಸತ್ಯಕಾಮ ಮನೆ ಬಿಟ್ಟು ಹೋದ ದಿನವಾದ್ದರಿಂದ ಗತಜೀವನದ ನೆನಪುಗಳೆಲ್ಲ ಅವಳ ಕಣ್ಣೆದುರು ಕುಣಿಯುತ್ತಿವೆ. ಕನಸು ಕಾಣುವವಳಂತೆ ಅವಳು ಅನ್ಯಮನಸ್ಕಳಾಗಿದ್ದಾಳೆ. ಅಂತಲಿ ಚೇಟಿಯನ್ನು ಅವಳು ನೋಡುವುದಿಲ್ಲ. ತನ್ನಲ್ಲಿ ತಾನೇ ಮೈಮರೆತಿದ್ದಾಳೆ.)

ರಾಜಮಾತೆ

(ರಾಗ: ಜೋಗಿಯಾ)

ದಿವ್ಯಾಗ್ನಿ ತರಲೆಂದು ಮನದನ್ನ ಹೋದ ದಿನ
ಮತ್ತೆ ಬಂದಿಹುದಿಂದು ನೆನಪು ಬೀರಿ.
ಹೊಸ್ತಿಲಕೆ ನಾನಿಟ್ಟ ಹೂವುಗಳು ಬಾಡಿದವು;
ನಲ್ಲನನು ತರಲಿಲ್ಲ ಒಯ್ದ ದಾರಿ.
ಇಂದಿಗಿದೆ ಕಲ್ಯಾಣದುತ್ಸವವು ಜಗಕೆಲ್ಲ
ಕಲ್ಯಾಣ ತರುವವನ ನೆನಪಿಗಾಗಿ;
ಮಾಮರವು ಹೊಸ ತಳಿರ ಮುಡಿದ ದಿನ ಬಂದರೂ
ಕೋಗಿಲೆಯು ಕೂಗದಿದೆ ಮೂಕವಾಗಿ.

ಚೇಟಿ

(ರಾಗ: ಭೀಮಪಲಾಸ)

ನಡೆಯಬೇಕಿದೆ ದೇವಿ ಪೂಜೆಗಾಗಿ
ಕಲ್ಯಾಣದುತ್ಸವದ ಪೂಜೆಗಾಗಿ
ವಾರ್ತೆ ಕಳಿಸಿಹನಿಂದು ರಾಜಕುವರ
ಸಿದ್ಧವಿದೆ ಪೂಜೆಗಿದೊ ಸಕಲ ಸಂಭಾರ

ರಾಜಮಾತೆ (ಬಿಸುಸುಯ್ಯುತ್ತ)

(ರಾಗ: ಸಾರಂಗಮರಾಳಿ)

ಬೇಡ ಸಖಿ ನನಗಿಲ್ಲ ಉತ್ಸವದ ತೋಷ
ನನಗೆ ಕಾದಿಹುದಿಲ್ಲಿ ಕಂಬನಿಯ ಗ್ರಾಸ

ಚೇಟಿ

(ರಾಗ: ಭೀಮಪಲಾಸ)

ಸಂತವಿಸು ಚಿತ್ತವನು ತಾಪವನು ದೇವಿ
ಚಳಿಯ ಮಾರುತ ಸುಗ್ಗಿ ಬರಬಹುದು ದೇವಿ

(ಅಷ್ಟರಲ್ಲಿ ರಾಜಕುಮಾರ ಪ್ರವೇಶಿಸುತ್ತಾನೆ. ಸತ್ಯಕಾಮನಂತೆಯೇ ಮುಖ. ಕಣ್ಣುಗಳಲ್ಲಿ ರಾಜಕಳೆ ಹೊರಹೊಮ್ಮುತ್ತಿದ್ದರೂ ಸತ್ಯಕಾಮನ ಅಲೌಕಿಕ ಕಾಂತಿ ಈ ಕಣ್ಣುಗಳಲ್ಲಿಲ್ಲ. ಜಗತ್ತನ್ನೇ ತನ್ನ ಪರಾಕ್ರಮದಿಂದ ಅಂಕಿತ ಗೊಳಿಸಿ, ತನ್ನ ಪ್ರಭುತ್ವವನ್ನು ಸ್ಥಾಪಿಸುವ ದಿಗ್ವಿಜಯಿಯ ವೀರಲಕ್ಷಣಗಳವೆ. ಆದರೆ ತಾಯಿಯ ಎದುರು ಮಾತ್ರ ಮಗುವಾಗಿ ಬಂದಿದ್ದಾನೆ.)

ಯುವರಾಜ

(ರಾಗ: ಯಮುನ)

ನಡೆಯಬೇಕಿದೆ ತಾಯೆ ಪೂಜೆಗಾಗಿ
ಕಲ್ಯಾಣದುತ್ಸವದ ಪೂಜೆಗಾಗಿ

ರಾಜಮಾತೆ

(ರಾಗ: ಯಮುನ)

ಉತ್ಸವದಿ ಮನವಿಲ್ಲ ಬರಲಾರೆ ಕುವರ
ಚೈತನ್ಯವಡಗಿಹುದು ಬಾಳು ನಿಸ್ಸಾರ

### ಯುವರಾಜ

(ರಾಗ: ಯಮುನ)

ಎಂದಿನಂತೆಯೆ ತಾಯಿ ನಡೆಯಬೇಕೆಂದು
ವರ್ಷ ವರ್ಷವು ಬಂದು ನೆನವದೇನಿಂದು

### ರಾಜಮಾತೆ

(ರಾಗ: ದೇಸ)

ಹುಡುಕಿದೆನು ಎಲ್ಲವನು ಉತ್ಸವದ ನೆರವಿಯುಲಿ
ಸಿಗಲಿಲ್ಲವೆಲ್ಲಿಯೂ ಈ ಬಾಳಿನಧಿದೈವ.
ನೀನು ಮಗು ನೀನರಿಯೆ, ನಟ್ಟನಡುರಾತ್ರಿಯಲಿ
ರಾಜ್ಯವೈಭವ ಸಿರಿಯು, ಮಡದಿ ಮಕ್ಕಳ ಒಲವ
ತೊರೆದು ನಡೆದನು ದೇವ ದಿವ್ಯಾಗ್ನಿ ತರಲೆಂದು.
ಹದಿನಾರು ವರುಷಗಳು ಉರುಳಿ ನಡೆದವು ಮರಳಿ.
ತಂದೆತಾಯ್ಗಳು ಮರುಗಿ, ಬರದ ದಾರಿಯ ಕಾಯ್ದು
ತೀರಿದರು. ನಿನ್ನೊಳಗೆ ಬಾಳಿನಾಸೆಯ ಕಂಡು
ಬದುಕಿದೆನು. ಬರಲಿಲ್ಲ ಮನದನ್ನ ಬರಲಿಲ್ಲ.
ಎಲ್ಲಿ ನಡೆದನೊ ದೇವ, ಕನಸನ್ನೆ ಬೆಂಬತ್ತಿ...
ನಾನೊಲ್ಲೆ ನಾನೊಲ್ಲೆ ಬರಲಾರೆನುತ್ಸವಕೆ.

(ದುಃಖ ಉಕ್ಕಿಬಂದು ಮುಖ ಮುಚ್ಚಿಕೊಂಡು ಅಳುತ್ತಾಳೆ. ಯುವರಾಜನ ಕಣ್ಣಿನಲ್ಲಿ ಕಂಬನಿ ಧಾರೆಯಾಗಿ ಸುರಿಯುತ್ತದೆ. ಈ ವರ್ಷದ ಉತ್ಸವ ತಾಯಿಯಿಲ್ಲದೆ ನಡೆಯಬೇಕಾಯಿತಲ್ಲಾ ಎಂದು ಅವನಿಗೆ ದುಃಖ. ಏನೂ ಹೇಳದೆ ಕೆಲಹೊತ್ತು ಸುಮ್ಮನಿರುತ್ತಾನೆ.)

### ಯುವರಾಜ

(ರಾಗ: ಜೀವನಪುರಿ)

ಕ್ಷಮಿಸುವದು ತಾಯಿ ಅರಿಯದಲೆ ಮನವ ಕಲಕಿದೆ.
ಹುಡುಕಿಸಿದೆ ತಂದೆಯನು ದೇಶ ದೇಶಗಳಲ್ಲಿ
ದಂಡಯಾತ್ರೆಯ ನೆವದಿ, ಮೃಗಯಾ ವಿನೋದದಲಿ.
ದೊರೆಯದಾದನು ತಂದೆ, ನಿರ್ಭಾಗ್ಯ ಸುತ ನಾನು.
ನಾಡಿನುತ್ಸವವಿಂದು, ನಡೆಯಬೇಕಿದೆ ತಾಯಿ.
ಅವನೆ ಬೆಳಕಾಗಿಹನು ಈನಾಡ ಬಾಳುವೆಗೆ;
ಅವನ ಮೂರ್ತಿಯೆ ಸ್ಫೂರ್ತಿ, ಅವನದೇ ಆದರ್ಶ

ಇರುತಿರುತ ಇತಿಹಾಸವಾಗಿಹುದು ಅವನ ಸ್ಮೃತಿ.
ಹೋಗಿ ಬರುವೆನು ತಾಯಿ.

(ರಾಜಕುಮಾರ ಸಾವಕಾಶವಾಗಿ ಹೆಜ್ಜೆ ಹಾಕುತ್ತಾ ಹೋಗುತ್ತಾನೆ. ನೆನಪಿನಿಂದುಂಟಾದ ಶೋಕ ಇಳಿಯುವಂತೆ ತೆರೆ ಇಳಿಯುತ್ತದೆ.)

— ತೆರೆ —

## ನಾಲ್ಕನೆಯ ದೃಶ್ಯ ; ಮೂರ್ತಿ

(ರಾಜಬೀದಿಯ ದೃಶ್ಯ. ನಟ್ಟನಡುವೆ ಎತ್ತರವಾಗಿ ಸತ್ಯಕಾಮನ ಸುಂದರವಾದ ಮೂರ್ತಿಯೊಂದು ನಿಂತಿದೆ. ಅದರ ಅಡಿಯಲ್ಲಿ ಪೂಜಾದ್ರವ್ಯಗಳನ್ನು ಇಡಲಾಗಿದೆ. ತೆರೆಯೆದ್ದೊಡನೆ, ರಂಗದಲ್ಲಿ ಯಾರೂ ಇರುವುದಿಲ್ಲ. ಕೆಳಗಿನ ಹಾಡು ಮಾತ್ರ ತೆರೆಯಿಂದ ಕೇಳ ಬರುತ್ತಿದೆ.)

### ಹಾಡು

(ರಾಗ: ದೇಸ)

ದಿವ್ಯಾಗ್ನಿಯನು ತರಲು ಹೊರಟವನ ಸವಿನೆನಪ
ಸಾರುವೊಲು ನಿಂತಿಹುದು ಮೂರ್ತಿಯೊಂದು
ಬೆಟ್ಟದೆತ್ತರ ಕುದುರೆ ಮೇಲಿಹನು ಯುವರಾಜ
ಪೂರ್ವ ದಿಕ್ಕಿನ ಬೆಳಕಿಗೆದುರು ನಿಂದು.
ಹಣೆಯಲ್ಲಿ ಎಸೆದಿಹುದು ರತ್ನ ಮುಕುಟ
ಹೊಳೆವ ಮಣಿಗಳ ಕಾಂತಿಯೊಂದು ಕೂಟ
ಜನರ ಕರೆಯುವ ನೋಟವೆನಿತು ಚನ್ನ
ಕಣ್ಣುಗಳ ಕುಂದಣದಿ ಥಳ ಥಳಿಪ ರನ್ನ
ಹುಟ್ಟಿ ಬೆಳೆದಿಹೆ ಬಾಳುಕಲ್ಲ ಸೆರೆಯಲ್ಲಿ
ಸಿಲುಕಿ ನೋಯುತಲಿಹುದು ಜಡದ ಮರೆಯಲ್ಲಿ.
ಅರಿವರಾರೀ ಮೂರ್ತಿ ಎದೆಯ ನೋವ
ಮನುಜ ಜೀವನವೆಲ್ಲ ಮೂರ್ತಿ ವಿಭವ.

(ಈ ಹಾಡು ನಡೆದಿರುವಂತೆಯೇ ಜನರು ಒಬ್ಬೊಬ್ಬರಾಗಿ ಬರುತ್ತಾರೆ. ಕೆಲ ಹೊತ್ತಿನ ಮೇಲೆ ಸತ್ಯಕಾಮ ಪ್ರವೇಶಿಸುತ್ತಾನೆ. ಈಗ ಮಾತ್ರ ಅವನ ವೇಷ ಸಂಪೂರ್ಣ ಬದಲಾವಣೆ ಹೊಂದಿದೆ. ನೋಡಲು ಸನ್ಯಾಸಿಯಂತೆ, ಈ ಜಗತ್ತಿನವನಲ್ಲವೆಂಬಂತೆ ಕಾಣುತ್ತಾನೆ. ತನ್ನ ಮೂರ್ತಿಯನ್ನು ಅಪರಿಚಿತ

ನೊಬ್ಬ ನೋಡಿದಂತೆ ನೋಡುತ್ತಾನೆ. ಆದರೂ ಕ್ಷಣಹೊತ್ತು ಅವನ ಮುಖವು ಹಳೆಯ ನೆನಪುಗಳಿಂದ ಬೆಳಗುತ್ತದೆ. ದೂರ ನಿಂತುಕೊಂಡು ತಾತ್ವಿಕನಂತೆ ಎಲ್ಲವನ್ನೂ ನೋಡುತ್ತಾನೆ.)

### ಸತ್ಯಕಾಮ

(ರಾಗ: ಲಲಿತ)

ಏನಿದು ಸಂಭ್ರಮ ಗಡಿಬಿಡಿಯೋಟ
ಜನಸಮುದಾಯದ ಹಿಗ್ಗಿನ ನೋಟ
ರಾಜನ ವಿಜಯದ ಉತ್ಸವವೇನೊ !
ಬೇಟೆಗೆ ನಡೆದಿಹ ಸಂಭ್ರಮವೇನೊ !
ಹಳೆಯ ನೆನಪುಗಳು ಮರುಕಳಿಸಿಹವು
ಹಾವಿನ ಪರಿಯೊಳು ಜೀವ ನುಸುಳಿದೊಲು.
ದೂರದ ಪ್ರೇಕ್ಷಕ ನಾನಿಹೆನಿಲ್ಲಿ
ನಿಂತು ನೋಡುವೆನು ಈ ಮರೆಯಲ್ಲಿ.

(ಅಷ್ಟರಲ್ಲಿ ಮೆರವಣಿಗೆ ಬರುತ್ತದೆ. ರಾಜಕುಮಾರ ದಂಡಿಗೆಯಲ್ಲಿ ಬರುತ್ತಾನೆ. ಅವನ ಹಿಂದೆ ಮುಂದೆ ಪರಿವಾರವಿದೆ. ಪೂಜಾದ್ರವ್ಯಗಳನ್ನೂ ಕಲ್ಯಾಣ ಜಲವನ್ನೂ ಹೊತ್ತ ಸುವಾಸಿನಿಯರಿದ್ದಾರೆ.)

### ಮೇಳಗೀತ

(ರಾಗ: ಭೀಮಪಲಾಸ)

ವಿಜಯೋತ್ಸವವಿಂದಿದು ನಾಡಿಗೆ
ಭಾಗ್ಯದ ಶುಭ ದಿನವು
ಧ್ಯೇಯವ ಸಾಧಿಸೆ ನಡೆದ ಕುಮಾರನ
ನೆನಹಿದೆ ಪಾವನವು
ತರ ಹೊರಟನು ನಾಡಿಗೆ ಕಲ್ಯಾಣ
ಮುಡಪಿಟ್ಟನು ಪಂಚಪ್ರಾಣ
ಅವನಿಂದಲೆ ಮಳೆ, ಅವನಿಂದಲೆ ಬೆಳೆ
ನಾಡಿಗೆ ಮಂಗಲವು

(ಇದನ್ನೆಲ್ಲ ನೋಡುತ್ತ ನಿಂತ ಸತ್ಯಕಾಮನ ಮುಖ ಗಂಭೀರವಾಗಿದೆ. ತಾನಿರುವಾಗಲೇ ತನ್ನ ಮೂರ್ತಿಯನ್ನು ಸ್ಥಾಪಿಸಿ ಪೂಜೆಗೈಯುವ ಹುಚ್ಚುತನಕ್ಕೆ

ಅವನಲ್ಲಿ ಕನಿಕರ ಮೂಡುತ್ತದೆ. ತಾನು ಪಡೆದ ಸಿದ್ಧಿ, ತಾನು ಕಂಡ ಆದರ್ಶ ಈ ನಾಡಿನಲ್ಲಿ ಬಿತ್ತಬಲ್ಲನೇ ಎಂದು ಆಶ್ಚರ್ಯಪಡುತ್ತಾನೆ. ಜನರಿಗೆ ಧ್ಯೇಯ ಬೇಡ, ಧ್ಯೇಯದ ಪೂಜೆ ಬೇಕು ಎಂಬ ಸತ್ಯ ಮನವರಿಕೆಯಾಗುತ್ತದೆ. ತನ್ನ ಮಗನನ್ನು ನೋಡುತ್ತಾನೆ. ಕರುಳಿನ ಎಳೆತದಿಂದಾಗಿ ಮುಂದೆ ಬರುತ್ತಾನೆ.)

### ಸತ್ಯಕಾಮ

(ರಾಗ: ಜೋಗ)

ಭಾಗ್ಯವಿಜಯದ ಹರಕೆ ನಿನಗಿರಲಿ ದೊರೆಯೆ
ತುಂಬುಜೀವನವಿರಲಿ ಸಂಪದವು ದೊರೆಯೆ.

(ರಾಜಕುಮಾರನು ಬಂದು ಅವನನ್ನು ಕ್ಷಣಕಾಲ ಆದರದಿಂದ ನಿಟ್ಟಿಸುತ್ತಾನೆ. ಕುಳಿತಲ್ಲಿಂದಲೇ ಪ್ರಣಾಮ ಮಾಡುತ್ತಾನೆ. ಸತ್ಯಕಾಮನ ಕಣ್ಣುಗಳಲ್ಲಿನ ಆರ್ತ ಭಾವ ಅವನಿಗೆ ಅರ್ಥವಾಗುವುದಿಲ್ಲ. ಮಂತ್ರಿಯ ಕಡೆಗೆ ನೋಡಿ)

### ರಾಜಕುಮಾರ

(ರಾಗ: ದುರ್ಗಾ)

ಮಂತ್ರಿ, ಅಗೊ ನೋಡಲ್ಲಿ ಪುಣ್ಯಯಾಚಕನು
ತಾಪಸಗೆ ಕೇಳಿದುದನೀಯಬೇಕಿಹುದು
ತಪದಿಂದ ಪರಿಶುದ್ಧನಾಗಿ ಬೆಳಗುತಲಿಹನು
ಕನಕಶೃಂಗದ ಗೋಸಹಸ್ರವನೀಯಬೇಕಿಂದು.

### ಮಂತ್ರಿ

(ರಾಗ: ಅಠಾನಾ)

ಆಣತಿಯ ಸಲಿಸುವೆವು ಜೀಯ
ಸಾಗಲಿದು ಮೆರವಣಿಗೆ ಜೀಯ.

### ಮೇಳಗೀತ

(ರಾಗ: ಭೀಮಪಲಾಸ)

ವಿಜಯೋತ್ಸವವಿಂದಿದು ನಾಡಿಗೆ
ಭಾಗ್ಯದ ಶುಭ ದಿನವು
ಧ್ಯೇಯವ ಸಾಧಿಸೆ ನಡೆದ ಕುಮಾರನ
ನೆನಹಿದೆ ಪಾವನವು

ದೈವದ ಹರಕೆಯು ಸಿದ್ಧಿಸಲೆಂದು
ನಡೆದನು ಧ್ಯೇಯದ ದಾರಿಯ ಹಿಡಿದು
ಅವನಿಂದಲೆ ಯಶ ಅವನಿಂದಲೆ ಜಯ
ನಾಡಿಗೆ ಜೀವನವು

(ಮೆರವಣಿಗೆ ಮುಂದೆ ಸಾಗುತ್ತದೆ. ಸತ್ಯಕಾಮನ ಮೂರ್ತಿಗೆ ಪೂಜೆ ನಡೆಯುತ್ತದೆ. ಪೂಜೆಯಾದ ಮೇಲೆ ಒಬ್ಬೊಬ್ಬರಾಗಿ ಎಲ್ಲರೂ ಹೊರಟುಹೋಗುತ್ತಾರೆ. ಶೂನ್ಯ ನಯನಗಳಿಂದ ಸತ್ಯಕಾಮ ಎಲ್ಲವನ್ನೂ ನೋಡುತ್ತಾನೆ.)

**ಸತ್ಯಕಾಮ**

(ರಾಗ : ಜೀವನಪುರಿ)

ಯಶದ ಹೂ ತೇಲುತಿದೆ ಬಾಳ ಹೊಳೆಯಲ್ಲಿ
ಮೆರವಣಿಗೆ ಮುನ್ನಡೆದು ನಾನುಳಿದೆನಿಲ್ಲಿ

ಗುರುತು ಹಿಡಿಯುವರಿಲ್ಲ, ಕುರುಹು ಕೇಳುವರಿಲ್ಲ
ನನಗಾಗಿ ಮರುಕದೊಳು ಮಿಡಿವರಿಲ್ಲ.
ಧ್ಯೇಯ ಸಿದ್ಧಿಯದಾಗಿ, ಸತ್ಯದರ್ಶನವಾಗಿ
ಈ ಜಗದ ಸತ್ಯವೇ ಅರಿದುದಿಲ್ಲ

ತ್ಯಾಗ ಪಥವನು ತುಳಿದು, ಮೋಹಮಮತೆಯ ಜರೆದು
ಪಡೆದು ತಂದುದಕೆಲ್ಲ ಅರ್ಥವೇನು ?

ಸ್ವರ್ಗಭೂಮಿಗೆ ಇಳಿದು, ಮಣ್ಣುಗುಣವನು ಪಡೆಯೆ
ಅಮೃತ ಜೀವನವೆಲ್ಲ ಸ್ವಪ್ನವೇನು ?

**ಅಶರೀರವಾಣಿ**

(ರಾಗ : ಅಥಾನಾ)

ಮರುಗದಿರು ರಾಜಕುವರ
ದೈವ ತೋರಿದ ಪಥವ ಜರೆಯದಿರು
ಮನುಕುಲದ ಕಲ್ಯಾಣಕಾಗಿ
ಶುಭದ ಸಂಗ್ರಹಕಾಗಿ ಸತ್ಯಕಾಗಿ
ದಿವ್ಯಾಗ್ನಿಯನು ತಂದೆ.
ಸಂಕಲ್ಪ ಫಲಿಸಿಹುದು.
ಮರೆಯದಿರು ರಾಜಕುವರ
ಪಥದಿ ನೀನೊಬ್ಬನೇ ದಾರಿಕಾರ
ನಿನ್ನಿಂದಲೇ ನಿನಗೆ ಕೊನೆಗೆ ಉದ್ಧಾರ.

(ತೆರೆ ಬೀಳುತ್ತದೆ. ತೆರೆ ತಿರುಗಿ ಮೇಲೆದ್ದಾಗ, ರಂಗದಲ್ಲಿ ಸಂಜೆಯ ಹೊಂಬೆಳಕು ಸುಂದರವಾಗಿ ಚೆಲ್ಲಿದೆ. ಬಲಗಡೆ ಅಶ್ವತ್ಥ ವೃಕ್ಷವೊಂದು ಧ್ಯಾನ ಲೀನನಾದ ತಪಸ್ವಿಯಂತೆ ನಿಂತಿದೆ. ಅದರ ಹಿಂದೆ ನೀಲ ಆಕಾಶದಲ್ಲಿ ಒಂದೆರಡು ಉಜ್ವಲ ತಾರೆಗಳು ಮಿನುಗುತ್ತಿವೆ. ಸತ್ಯಕಾಮ ಸಾವಕಾಶವಾಗಿ ಹೆಜ್ಜೆಗಳನ್ನಿಡುತ್ತಾ ಬಂದು, ದಣಿದವನಂತೆ, ಸೂರ್ಯನನ್ನೇ ನೋಡುತ್ತಾ ಮರದಡಿಯಲ್ಲಿ ಒರಗುತ್ತಾನೆ. ತೆರೆಯಿಂದ ಕೆಳಗಿನ ಹಾಡು ಕರುಳು ಮಿಡಿಯುವಂತೆ ಕೇಳಬರುತ್ತಿದೆ.)

### ಹಾಡು

(ರಾಗ : ಭೈರವಿ)

ದೈವ ನುಡಿದ ಒಂದಮಾತ ಕೇಳಿ ತಿರುಗಿದನು ರಾಜಕುವರ
ಮಾತು ಶೂನ್ಯ ಮನ ಶೂನ್ಯ ಮನದಿ ಮಿಾರಿತ್ತು ಶೋಕಭಾರ
ಕಂಡ ಕನಸು ನನಸಾಗಿ ಬಂತು ನಿಜದಲ್ಲಿ ಪಡೆದುದೇನು
ಹಣ್ಣಿನಾಸೆಯಲಿ ಅರಳಿ ನಲಿದ ಹೂ ಸೇರಿತಿಳೆಯ ಮಣ್ಣು.

### ಸತ್ಯಕಾಮ

(ರಾಗ : ಭೈರವಿ)

ಕಂಪು ತಳೆದ ಪ್ರಾಣಹೂವು । ಕೆಂಪಡರಿದ ಎದೆಯ ನೋವು
ಎಲ್ಲವು ನಿನಗರ್ಪಣ
ಪ್ರಭೂ ದೀನ ತರ್ಪಣ

ದೈವ ತೆರೆದ ಭವ್ಯ ಕನಸು । ವಿಶ್ವದಲ್ಲಿ ಹೊಳೆದ ನನಸು
ಹೃದಯಶೋಕ ದಾರುಣ
ಎಲ್ಲವು ನಿನಗರ್ಪಣ.

ಚಿರಂತನದ ದಿವ್ಯಕಿರಣ । ಪ್ರತಿಫಲಿಸಿದ ಬಾಳ ವರ್ಣ
ನೋಡಿ ಪಡೆದ ದರ್ಶನ

ನನ್ನದಲ್ಲ ನಿನ್ನದೆನುವೆ । ಭುವನವ್ಯಾಪಿ ದಿವ್ಯ ತನುವೆ
ಎಲ್ಲವು ನಿನಗರ್ಪಣ
ಪ್ರಭೂ ದೀನತರ್ಪಣ.

(ಸೂರ್ಯ ಮುಳುಗುತ್ತಾನೆ. ಮಬ್ಬುಕತ್ತಲೆ ಬೆಳಕನ್ನು ನುಂಗುವಂತೆ ಸಾವು ಜೀವವನ್ನು ನುಂಗುತದೆ.)

— ತೆರೆ —

# ರತ್ನೋ ರತ್ನೋ ರಾಯನ ಮಗಳೆ

(ಮೂರು ಕುರ್ಚಿಗಳು ಒಂದೊಂದರ ಮೇಲೆ, 'ಕ' ಮತ್ತು 'ಕಾ' ಕುಳಿತಿದ್ದಾರೆ. ಇನ್ನೊಂದು ಖಾಲಿ. ಕೆಲವು ನಿಮಿಷಗಳಾದ ನಂತರ 'ಕ' ಎಚ್ಚರಗೊಂಡು 'ಕಾ' ನ ಕಡೆಗೆ ನೋಡುತ್ತಾನೆ. ನಂತರ 'ಕಾ' ನ ಹೊಟ್ಟೆಯಲ್ಲಿ ಬೆರಳು ಚುಚ್ಚಿ ಎಬ್ಬಿಸುತ್ತಾನೆ. ಆದರೆ 'ಕಾ' ಒಂದೆರಡು ಸಲ ಕುಳಿತಲ್ಲೇ ಅಲುಗಾಡಿ ಹಾಗೇ ಮಲಗಿರುತ್ತಾನೆ.)

ಕ : ಏಳೋ ಮಾರಾಯಾ ಎಷ್ಟೊತ್ತ ಮಲಗ್ತಿ. ನಿದ್ದಿಗೇನಾದ್ರು ಅಂತಾ ಪಾರಾ ಆದನ್ಸ, ಏನಿಲ್ಲ. ಸತ್ತವ್ರಾಂಗ ಮಲಗೀದೆಲ್ಲ (ಮತ್ತೆ ಹೊಟ್ಟೆಯಲ್ಲಿ ಚುಚ್ಚುತ್ತಾನೆ).

ಕಾ: (ಕಣ್ಣು ತೆರೆದು ಸಿಟ್ಟಿನಿಂದ 'ಕ' ನನ್ನು ನೋಡಿ) ಯಾಕ ಪೀಡಸ್ತೀ ಮಾರಾಯ. ಸುಮ್ನ ಕೂಡಬಾರದ್ಸ.

ಕ : ಬೆಳಗಾಯ್ತು, ಏಳಪ್ಪ, ನೀ ಶ್ಯಾಣ್ಯಾ ಮನಷಾ ಅಲ್ಲs? ಏಳಪs ನೋಡ ಹಕ್ಕಿ ಚಿಲಿಪಿಲಿ ಎಂದು, ಕಾಗಿ ಕಾಕಾ ಎಂದು, ಗುಬ್ಬಿ ಚಿಂವ್ ಚಿಂವ್ ಎಂದು ಹಾರ್ಯಾಡಿ ಹೋದು. ಏಳು, ಬೆಳಗಾಯ್ತು. ಏಳಪs ರಾಜಾ.

ಕಾ: ಸುಮ್ನ ಕೂಡೋ. ನಾ ಎಂಥ ಖಂಮ್ಗ ಕನಸಾ ನೋಡ್ಲಿ ಕತ್ತಿದ್ದs, ಎಂಥಾ ಛಂದ ಕನಸಾ ನೋಡ್ಲಿ ಕತ್ತಿದ್ದ ನೀ ಮಗ (ತನ್ನ ಹೊಟ್ಟೆಯಲ್ಲಿ ತಾನೆ ಬೆರಳು ಚುಚ್ಚಿಕೊಂಡು), ಹೀಂಗ ಹೀಂಗ ಮಾಡಿ ಎಬಸ್ದಿ. ನೀ ಹೊಟ್ಯಾಗ ಚುಚ್ದ ಕೂಡ್ಲೇನ ನನ್ನ ಕಣ್ಣಾಗಿನ ಕನಸಾ 'ಲಬ್ಬರ್' ಫುಗ್ಗಾ ಠಬ್ಬಂತ ಒಡದ್ಹಾಂಗ ಆಯ್ತು—(ತಡೆದು) ಈಗ ತಂದು ಕೊಡತ್ಯಾ ಮಗನಾ ನನ್ನ ಕನಸಾ? ಎಟು ಉಗ್ಗಾನ ಮಾಡ್ದಿ ನಂದು. ನಾ ಆ ಫುಗ್ಗಾದ ಮ್ಯಾಗ ಕುಂತು ಕೈಲಾಸದ ಕಡಿಗಿ ಹೊಂಟಿದ್ದ—ನೀ ಮತ್ತ ಎಳ್ದತಂದಿ, ನನಗೀ ಹಾಳೂರಾಗ, ಈ ಹಾಳ ಮಂದ್ಯಾಗ, ಈ ಹಲ್ಕಟ್ ಜಾತ್ರ್ಯಾಗ.

ಕ : (ತಿಳಿಸುತ್ತ) ಕನಸಾ ಕಾಣದ ಬಿಡು. ಖರೆ ಎನದ ಅದ್ನ ನೋಡದ ಕಲೀ ಕಣ್ ತೆರದು ಸುತ್ತಮುತ್ತ ನಡೇ ಆಟ ನೋಡಪ—

ಕಾ: (ನಗುತ್ತಾ) ನಂಗೊತ್ತು, ನಂಗೊತ್ತು. ನೀ ಯಾಕ ಈ ಆಟಾ ಹೂಡೀದಂತ ನಂಗೊತ್ತು. (ತಡೆದು) ನಿಂಗs ಕನಸಾ ಬರಂಗಿಲ್ಲ ನಿನ್ಗ ಬರೇ ನಿದ್ದಿ ಬರತದ. ಖಾಲಿ ನಿದ್ದಿ—ಅದರೊಳ್ಗ ಎನಿರಂಗಿಲ್ಲ. ಕತ್ತಲೀನೇ ಕತ್ತಲಿ ಇರತದ ಘಟ್ಟಿ ಕತ್ತಲಿ ಕಲ್ಲ ಬಂಡೀ ಹಾಂಗ ಬಿರಸಾದ ಕತ್ತಲಿ ಇರತದ ನಿನ್ನ ನಿದ್ದಿಯೊಳಗ—ಆದ್ರ ನನ್ನ ನಿದ್ದೀ —ವ್ಹಾಽರೇ...ಗಡೀ ಏನಂತಿ. ಕಣ್ ಮುಚತ್ರಾಯ್ತು. ಬಂದೂನೆ ತರತರದ

ತರತರದ ರಂಗ ರಂಗಿನ ಸಾವಿರಾರು ಮಾತು, ಸಾವಿರಾರು ಮಂದಿ, ಎಂಥ ಮಜ್ಯಾ ಅಂತೀ—ಆದ್ರ ನಿಂದೇನು? ನಿನ್ನ ನಿದ್ದಿ ಬರೇ ಕೆಸರನ್ಯಾ್ಯಂಗಿದ್ರ ನನ್ನ ನಿದ್ದಿ ಕಮಲ್ದಾಂಗಡ ಕಮಲ್ದಾಂಗ...ತಿಳೀತು—ನನ್ನ ನಿದ್ದಿ ಅರಳ್ತದ, ಮೊಗ್ಗಿ ಹಾಂಗ ಬಿಚ್ತದ, ಹೂವಿನ್ಹ್ಯಾಂಗ ಅರಳ್ತದ, ಸುವಾಸನ ವಾಸಾ ಬಿಡತದ . ನಿಂದೂ—ಥೂ ನಿನ್ನ ಮನೀ ಹಾಳಾಗಾ—ನಿನ್ನ ನಿದ್ದೀ ಮ್ಯಾಗ ಮಣ್ಣಹಾಕಾ—ಕಣ್ಣ ಮುಚ್ಚಿದ್ರಾಯ್ತು. ಅಷ್ಟಾ ಹೆಣಾನೇ ಆಗ್ತಾನ.

ಕ : ಅಂಥಾದೇನ್ ಭಾರಿ ಕನಸಾ ನೋಡತೆಪ್ಪ ನೀನು, ಭಾರಿ ಬಡಿವ್ಯಾರ ಹೇಳಕೋತಿ.

ಕಾ: ಅಲೇ! ಅಂಥಾದಂದ್ರ ಅಂಥಾದ್ದು—ಎಂಥಾದೆಂದ್ರ ಎಂಥಾದ್ದು.

ಕ : ಸಾಕು ಮಾಡು, ಕೆಲ್ಸಕ್ಕ ಪಲಸಕ್ಕ ಹೋಗದದನು ಏನಿಲ್ಲ?

ಕಾ: ಎಂಥ ಕೆಲಸಾಟ?

ಕ : ಹೊಟ್ಟಿ ತುಂಬಸ ಕೆಲಸ.

ಕಾ: —ಛೇ—ಇದರ ಮನೀ ಹಾಳಾಗಾ, ಈ ಕೆಲಸ ಯಾರ ಮಾಡ್ತಾರೋಪ?

ಕ : ನಿನ್ಗ ಬೇಕಾಗಿಲ್ದ್ರ ಬಿಡು ನಾನಂತೂ ಹೋಗ್ತೀನಿ.

ಕಾ: ಎಲ್ಲಿಗೆ ಹೋಗ್ತಿ?

ಕ : ಎಲ್ಲಿಗೆಂದ್ರ. ಹೀಂಗ ಹಾದಿ ಹಿಡಕೊಂಡು ಹೋಗ್ತೀನಿ.

ಕಾ: ಹಾದಿ ಹಿಡಕೊಂಡ ಹೋಗತ್ಯಾ?

ಕ : ಹೂಂ. ಹಾದಿ ಹಿಡಕೊಂಡೇ ಹೋಗ್ತೀನಿ. ಯಾಕ?

ಕಾ: ಅಲ್ಲಸ, ಹಾದಿ ಕೈಯಾಗ ಹಿಡಿಕೊಂಡವ್ನ್ಯಾಲ ಕಾಲಾಗೇನಿರತದ? ನಡೀತೆದರ ಮ್ಯಾಲ?

ಕ : ಬರೇ ನೆಲ್ದ ಮ್ಯಾಲ ನಡೀತೀನಿ.

ಕಾ: ಬರೇ ನೆಲ್ದ ಮ್ಯಾಲ ನಡೀತ್ಯಾ?

ಕ : ಹೂಂ ಮತ್ತ

ಕಾ: (ನಗುತ್ತ) ಬರೇ ನೆಲ್ದ ಮ್ಯಾಲ ಹ್ಯಾಂಗ ನಡೀತ್ಯೋ? ಭಿಕನಾಸಿ ಗೇಡಿನನ್‌ಮಗನೆ. ಬರಿ ನೆಲ್ದ ಮ್ಯಾಲ ಯಾರಾದ್ರು ನಡದಾರೇನೋ ಇವೊತ್ತಿನ ತನಕ, ಈ ದುನಿಯಾದಾಗ?

ಕ : ಯಾಕೆ ನಡದಿಲ್ಲ? ಯಾಕ ನಡೆಂಗಿಲ್ಲ?

ಕಾ: ಯಾಕ ನಡೆಂಗಿಲ್ಲಸು? ಅಂದ್ರ ನಡದ ತೋರಿಸು. (ನೆಲ ತೋರಿಸಿ) ಇದು ನೆಲ ಅದ ಎನಪ. ಇದು ನೆಲಾನೆ ಹೌದಲ್ಲೋ?

ಕ : ಹೌದು ನೆಲಾನೆ, ಇಷ್ಟುನು ನನ್ಗ ತಿಳಿಂಗಿಲ್ಲೇನು?

ಕಾ: ತಿಳೀತಿತ್ತಂದ್ರ ಇದ್ರ ಮ್ಯಾಲ ನಡ್ದ ತೋರಿಸು.

ಕ : (ಎದ್ದು ಒಂದೆರಡು ಸಲ ಕೋಣೆಯಲ್ಲಿ ತಿರುಗಿ ನಿಂತು ಆಶ್ಚರ್ಯದಿಂದ) ಎಲಾ ಇವನ

ಕಾ: (ನಗುತ್ತಾ) ಏನಾಯ್ತು? ನಡಿ ಅಲಾ, ನಿಂತ್ಯಾಕ?

ಕ : ಮುಗದೇ ಬಿಡ್ತು.

ಕಾ: ಎನ ಮುಗೀತು?

ಕ : ನೆಲ ಮುಗೀತು. ಹೀಂಗೊಂದ ಸಲ ಬಂದ ಹಾಂಗೊಂದ ಸಲ ಬಂದ. ಆಯ್ತು. ಇಷ್ಟು ನಡ್ದ ಕೂಡಲೆ ನೆಲ ಮುಗದೇ ಹೊಯ್ತು.

ಕಾ: ಹಾಂ. ತಿಳೀತಲ್ಲ. ಬಂದೀಗ ಹಾದೀ ಮ್ಯಾಲ—ನೆಲ ಮುಗೀತದ, ಆದ್ರ ಹಾದಿ ಮುಗೆಂಗಿಲ್ಲ—

ಕ : (ವಿಚಾರ ಮಾಡಿ) ಖರೇನೆ ಹೇಳ್ತಿ (ತಡೆದು) ಆದ್ರ ನಂದೊಂದು ವಿಚಾರ.

ಕಾ: ಹೇಳು, ಹೇಳು

ಕ : ನೀ ನಗಬಾರದಪ್ಪ.

ಕಾ: ನಗಂಗಿಲ್ಲಪ (ನಗುತ್ತಾನೆ)

ಕ : ನಕ್ಕೆಂದ್ರ.

ಕಾ: ಬೆನ್ನಾಗೆರಡ್‌ಗುದ್ದಪ.

ಕ : ಕೇಳಲ್ಯಾ ಅಂದ್ರ?

ಕಾ: ಕೇಳು.

ಕ : ನೋಡು ನೀ ಇದೇ ಈಗ ಹೇಳದೆಲ್ಲ ನೆಲಾ ಮುಗೀತದ ಆದ್ರ ಹಾದಿ ಮುಗೆಂಗಿಲ್ಲಂತ—

ಕಾ: ಹೂಂ ಖರೆ ಮಾತದ

ಕ : ಆದ್ರ ಈ ಖರೆ ಮಾತನ್ಯಾಗ ನನಗೊಂದು ಥೋಡೆ ಅನುಮಾನ ಬಂದದ.

ಕಾ: ಅನುಮಾನೇನ ಬಂತು?

ಕ : ಎನೆಂದ್ರೆ—ನೆಲ ಮುಗೀತದ, ಹಾದೀ ನೆಲ್ದ ಮ್ಯಾಲೆ ಇರತದ ಅಂದ ಮ್ಯಾಲ ನೆಲದ ಮ್ಯಾಲಿದ್ದ ಹಾದೀನು ಮುಗೀಲೇ ಬೇಕಲ್ಲಾಂತಾ—

ಕಾ : ಲಾಂssತ್—ಎನ ಧ್ವನಿ ತಗದು ಸೂರ ಹಚ್ತಿ? ನೆಲ ಮುಗದರೆನು ಹಾದಿ ಮುಗೆಂಗಿಲ್ಲ. ಎಂದೆಂದು ಮುಗೆಂಗಿಲ್ಲ. ನೀ ಮುಗೀತಿ, ನಾ ಮುಗೀತೀನಿ ಕಾಣ್ಸದು ಕಾಣ್ಸಲಾರದು, ಎನೇನಿರತಾವ ಅದೆಲ್ಲ ಮುಗೀತಾವ, ಆದ್ರ ಹಾದಿ ಮಾತ್ರ ಮುಗೆಂಗಿಲ್ಲ.

ಕ : ಎನೇನಿರತದ ಅದೆಲ್ಲ ಮುಗೀತದೇನು?

ಕಾ : ಹೂಂ.

ಕ : ಮತ್ತಂದ್ರ ಹಾದೀನು ಇರತದಲ್ಲ—ಇದ್ದ ಮ್ಯಾಲ ಅದನು ಮುಗೀನೇ ಬೇಕಲ್ಲs—ಯಾಕ ಮುಗೆಂಗಿಲ್ಲ?

ಕಾ : ಯಾಕೆ ಮುಗೆಂಗಿಲ್ಲಂದ್ರs ಯಾಕ ಮುಗೆಂಗಿಲ್ಲಂದ್ರ, ಮುಗೆಂಗಿಲ್ಲ.

ಕ : (ನಗುತ್ತ) ಇದೇ ಎನು ನಿನ್ ಜವಾಬ, ಯಾಕ ಮುಗೆಂಗಿಲಂದ್ರ ಮುಗೆಂಗಿಲ್ಲಾಂತ (ತಡೆದು) ಇರಲಿ ಬಿಡು ನಿನಗನೂ ತಿಳಿದಿಲ್ಲಾಂತ ಸಿದ್ಧಾಯ್ತು. ಇದು ನನ್ಗ ಖಾತ್ರಿಲಿಂದ ತಿಳಿದ ಮ್ಯಾಲ ನಾಯಾಕ ಕೆದರಿ ಕೆದರಿ ಕೇಳಲೀ. (ತಡೆದು) ನೀ ನಿದ್ದಿಬಾರಕ ('ಕ' ಎದ್ದು ನಿಲ್ಲುತ್ತಾನೆ. 'ಕಾ' ಕೂಡುತ್ತಾನೆ.) ದಿನಾ ಹಗಲ ಹನ್ನೆರಡ ತಾಸು, ರಾತ್ರಿ ಹದಿಮೂರ ತಾಸು ನಿದ್ದೀನೆ ಮಾಡತಿ. ನಿದ್ಯಾಗ ಕನಸ ನೋಡತಿ. ನಿನ್ನ ಕನಸನ್ಯಾಗರೆ ಅಂಥಾದೇನರೆ ಬರತದೋ ಎನೋ!

ಕಾ: ಎನ ಬರತಂದ್ರs? ಎನ ಬರಬೇಕು ಅದೆಲ್ಲ ಬರತದ.

ಕ : ಎನ ಬರತದ ಹೇಳು, ಒಂದೆರಡು ಉದ್ಹಾರಣಿ ಹೇಳು.

ಕಾ: ಹೇಳಲ್ಯಾ? ಕೇಳಂದ್ರ. ಮೊನ್ನಿನ ಕನಸನ್ಯಾಗ ನಾ ಭಾಳ ದೊಡ್ಡ ಮನುಷ್ಯಾ ಆಗಿದ್ದ.

ಕ : ದೊಡ್ಡ ಮನುಷ್ಯಾ ಆಗಿದೆಂದ್ರ?

ಕಾ: ದೊಡ್ಡ ಮನುಷಾ ಅಂದ್ರ ಗೊತ್ತಿಲೇನು? (ತಡೆದು) ನಾ ಕನಸನ್ಯಾಗ ಭಾಳ ಸಾವಕಾರಾಗಿದ್ದಿ.

ಕ : ಸಾವಕಾರಾದ್ರ ದೊಡ್ಡ ಮನುಷ್ಯಾ ಅಂತಾರೇನು?

ಕಾ: ಹೂಂ ಮತ್ತ, ದೊಡ್ಡ ಮನುಷ್ಯಾ ಆಗಬೇಕಾದ್ರ ಸಾವಕಾರಾಗ ಬೇಕಾಗ್ತದ. (ಕೇಳಿಸುವ ಧಾಟಿಯಲ್ಲಿ) ಕೇಳು, ನಾ ಎನಾಗಿದ್ದನಂತ ಹೇಳ್ತೀನಿ (ತಡೆದು) ಸಾವಕಾರಾಗಿ ಭಾರಿ ದೊಡ್ಡ ಮನಿ ಕಟ್ಟಿದ್ದ. ಆಳುಗೀಳು ಸಾಕಿದ್ದ. ದೊಡ್ಡ

ದೊಂದು ಲಕ್ಷ ತ್ರಿಜೋರಿ ಇಟ್ಟಿದ್ದ. ಅದರೊಳ್ಗ ಕೆಂಪಾಗಿನ ಗಟ್ಟಿ ಬಂಗಾರಿಟ್ಟಿದ್ದ ರಾಶಿ ರಾಶಿ ನೋಟಗೋಳಿಟ್ಟಿದ್ದ. ಒಂದು ಬಿಳಿ ಕುದರಿ ಕಟ್ಟಿದ್ದ. ಎರಡು ಕರಿ ನಾಯಿ ಸಾಕಿದ್ದ ಮತ್ತೆನಂದ್ರ ಮತ್ತೆನಂದ್ರ ದಿನಾ ಊಟಾ ಎಂಥಾದಂತ ಕೇಳ್ತಿ. ಕರಚಿಕಾಯಿ, ನಿಂಬಿಕಾಯಿ, ಜಾಜಿಕಾಯಿ, ಮ್ಹಾಯಿನಕಾಯಿ, ಲಾಡು, ಬೂಂದಿ, ಬೆಸನ್ನು, ಚಿರೋಟಿ, ರಾಯ್ತಾ, ಕೊಸಂಬ್ರಿ, ಹಣ್ಣು ಹಂಪಲು, ಹಾಲು ಗೀಲು ತಿಂದಿದ್ದೇ ತಿಂದಿದ್ದು, ತಿಂದಿಂದ್ದೇ ತಿಂದಿದ್ದು (ಒಮ್ಮಿಂದೊಮ್ಮೆಲೆ ಮಾತು ನಿಲ್ಲಿಸಿ) ಭಾಳ ಹಸಿವ್ಯಾಗೇದ ನಿನ್ನ ಜೇಬನ್ಯಾಗ ೨೦ ಪೈಸಾ ಇದ್ರ ಕೊಡು, ನಿನ್ನ ಹೆಸರ ಹೇಳಿ ಎನಾದ್ರು ತಿಂತೀನಿ. (ಕ ನ ಕಡೆಗೆ ದೀನತೆಯಿಂದ ನೋಡುತ್ತಾನೆ.)

ಕ : (ನಗುತ್ತ) ಹುಚ್ಚಾ ನನ್ನ ಬಲ್ಲೆಲ್ಲಿಂದ ಬರಬೇಕು ಇದು ನನ್ನದೀ ನಾಕಣೆ ಉಪವಾಸ.

ಕಾ : (ನಕ್ಕು) ನೀನು ಉಪಾಸನೇನ? ಭಾಳ ಬೇಸಾಯ್ತು ಬಿಡು, ನಾನು ನೀನು ಜೋಡಿ, ನೀನು ನಾನು ಜೋಡಿ (ಕೈಮುಂದೆ ಚಾಚುತ್ತ) ಕೈ ಕಲಸು, ಕೈ ಕಲಸು ನೀ ನಾಕು, ನಾ ಮೂರು ನಾ ಮೂರು, ನೀ ನಾಕು, ನಾಕು ಮೂರೇಳು. ಮೂರು ನಾಕೇಳು. ಎಳೆರಡಲೆ......?

ಕ : ಸಾಕ ಮಾಡು, ಏಳು, ತಯಾರಾಗು.

ಕಾ : ಎಲ್ಲಿ ತಯಾರಾಗ್ಲಿ?

ಕ : ಎಲ್ಲಾದ್ರು ಹೋಧ್ರಾಯ್ತು ನಡೀ.

ಕಾ : ಎಲ್ಯಾಂದ್ರಂದ್ರ ಎಲ್ಲಿ?

ಕ : ಎಲ್ಲೆರ ಒಂದು ಕಡಿ.

('ಕಿ' ನ ಪ್ರವೇಶ. ತಲೆಯ ಮೇಲೆ ಕಾಗದದ ಟೊಪ್ಪಿಗೆ ಕೈಯಲ್ಲಿ ಮಕ್ಕಳ ಖುಳ ಖುಳಿ, ಮತ್ತು ಬಾಯಲ್ಲಿ ಒಂದು ರಂಗಣ್ಣಿ, ಕುಣಿಯುತ್ತ ಕುದುರೆಯ ನಡಿಗೆಯಂತೆ ನಡೆಯುತ್ತ ಬರುವುದು.)

ಕಿ : (ಖುಳಖುಳಿ ಬಾರಿಸುತ್ತ) ಕುಂತವ ಕೆರಿ, ನಿಂತವ ನದಿ, ಕುಂತವ ಕೆರಿ, ನಿಂತವ ನದಿ (ಕ, ಕಾ ಇಬ್ಬರ ಸುತ್ತ ತಿರುಗುತ್ತ ಮತ್ತೆ ಮತ್ತೆ ಕುಂತವ ಕೆರಿ ನಿಂತವ ನದಿ ಎಂದು ಹಾರಾಡುತ್ತಾನೆ) ನದೀ ಹರೀಯುತದ, ಕೆರಿ ನಿಂತಿರತದ.

ಕ : (ಆಶ್ಚರ್ಯದಿಂದ ಕಿ ಗೆ) ಯಾರಪ್ಪ ನೀನು? ನಾ ನಿಂತೀನಿ ನಾ ಕೆರಿ ಎನು?

ಕಾ : ನಾ ಕುಂತೀನಿ ನಾ ನದೀ ಎನು?

ಕಿ : (ತಲೆ ಅಲ್ಲಾಡಿಸುತ್ತ) ಅಲ್ಲಲ್ಲಾ, ಕುಂತವ ಕೆರಿ, ನಿಂತವ ನದಿ.

ಕಾ: ಯಾರೋ ನೀನು ? ನಿಂತವ ಹರೀತಾನ ಹ್ಯಾಂಗ ? ತಲಿ ಕೆಟ್ಟದೇನು ?

ಕಿ : ಇಲ್ಲಾ, ಕುಂತವನು ಹರೆಂಗಿಲ್ಲ, ನಿಂತವನು ಹರೆಂಗಿಲ್ಲ, ಹರಿವನೆ ಹರಿತಾನ ಹರದ ನದಿ ಆಗ್ತಾನ, ನದಿ ಮತ್ತು ಸಮುದ್ರಾಗ್ತಾನ.

ಕ : (ಕಿ ಗ) ಯಾರಪ್ಪಾ ನೀನು ?

ಕಿ : (ಕ್ರಮವಾಗಿ ಕ, ಕಾ ಇಬ್ಬರತ್ತ ಬೆರಳುಮಾಡಿ, ತೋರಿಸುತ್ತ) ಅವ್ರುಬಿಟ್ಟು ಇವ್ರುಬಿಟ್ಟು ಇವರ್‍ಯಾರು, ಇವ್ರುಬಿಟ್ಟು ಅವ್ರುಬಿಟ್ಟು ಅವರ್‍ಯಾರು ? ಅವ್ರುಬಿಟ್ಟು, ಇವ್ರುಬಿಟ್ಟು ಇವರ್‍ಯಾರು ? ಅವ್ರುಬಿಟ್ಟು ಅವ್ರುಬಿಟ್ಟು ಅವರ್‍ಯಾರು ?

ಕಾ: (ಎದ್ದು ಕಿ ನ ಹತ್ತಿರ ಹೋಗಿ) ಯಾರಪ್ಪ ನೀನು ಮಹಾರಾಯಾ ?

ಕಿ : ನಾನ ? ನಾ ನಾನು.

ಕಾ: ನಿನ್ನ ಹೆಸರೇನು ?

ಕಿ : ಬಸರಾದ್ರ, ಹೆಸರು ಗೊತ್ತು, ಬಸರಾಗಿಲ್ಲ.

ಕ : ನೀ ಹ್ಯಾಂಗ ಬಸರಾಗತ್ತ್ಯೊ—

ಕಿ : ಬಸರಿಗಿಡದಾಗ, ಬೇತಾಳ ಜೋತ ಬಿದ್ದದ—ಬೇತಾಳ ಕಾಲಾಗ ಎಲಿ ಐತಿ, ಎಲೀವಳ್ಯಾಲ ಕಣ್ಣವ—ಕೂಸಿನ ಕಣ್ಣಾಗ ಕಾಡಗಿ, ನಿನ್ನ ಕಣ್ಣಾಗ ಸುಣ್ಣಾಽ—(ರಂಗಣ್ಣಿ ಬಾಯಿಯಲ್ಲಿ ಇಟ್ಟುಕೊಂಡು "ಳು ಳು ಳು ಳು" ಎಂದು ಮಾಡುತಾನೆ.)

ಕಾ: (ಸಹಾನುಭೂತಿಯಿಂದ, ಕಿ ನ ಭುಜದ ಮೇಲೆ ಕೈಯಿಟ್ಟು), ಕೂಡಪ್ಪ ಕೂಡೂ—(ಕಿ, ಕ, ಕಾ, ಮೂವ್ವರು ಕೂಡುವರು).

ಕಿ : ನೀವೆಲ್ಲಾರು ಕುತ್ರ್ಯಾ ?

ಕ : ಹೊಂ ಕೂತೀವಿ.

ಕಿ : (ಗಂಭೀರ ದನಿಯಲ್ಲಿ) ನೀವೇನಾದ್ರು ಆ ರಾಯರ ಮಗಳ್ನ ನೋಡಿರ್‍ಯಾ ?

ಕಾ: ಯಾ ರಾಯರ ಮಗಳು ?

ಕಿ : ರತ್ತ್ರೋ ರತ್ತ್ರೋ ರಾಯನ ಮಗಳು—

ಕ : ಅವನ ಹೆಸರೇನು ?

ಕಿ : ಬಿತ್ತ್ರೋ ಬಿತ್ತ್ರೋ ಭೀಮನ ಮಗಳೆ.

ಕಾ: ಭೀಮ ಯಾರು ?

ಕಿ : ಸುಮ್ನ ಕೂಡ್ರಿ—(ತನ್ನಷ್ಟಕ್ಕೆ ತಾನೆ) ಸುಮ್ನ ಕೂಡ್ರಿ.

ರತ್ತೋ ರತ್ತೋ ರಾಯನ ಮಗಳೆ
ಬಿತ್ತೋ ಬಿತ್ತೋ ಭೀಮನ ಮಗಳೆ
ಹದಿನಾರೆಮ್ಮಿ ಕಾಸಲಾರೆ, ಕಟ್ಟಲಾರೆ
ಚೈತ ಗುಬ್ಬಿ ಬಾಳೆ ಕಂಬ
ಕುಕ್ಕರ ಬಸವಿ, ಕೂರ ಬಸವಿ.

ಕ : ನಿನ ರಾಯರ ಮಗಳ ಮನ್ಯಾಗ ಹದಿನಾರೆಮ್ಮಿ ಇದ್ದು ಏನು?

ಕಾ: ನನ್ನ ಕನಸನ್ಯಾಗ ಹದಿನಾರೆಮ್ಮಿ ಬಂದಿದ್ದು ಹಾಲು-ಮೊಸರು ಬೇಕಾದಷ್ಟಿತ್ತು.

ಕಿ : ನಿನ್ನ ಮನಿಯೊಳಗ ಗುಬ್ಬಿ ಇತ್ತೇನು? ಬಾಳೆಖಂಬಾ ಇತ್ತೇನು?

ಕಾ: (ವಿಚಾರಮಾಡಿ) ನೆನಪಿಲ್ಲ, ಇದ್ರನೂ ಇರಬೇಕು. ಈಗ ನಿನ್ನ ಮನೀ ಎಲ್ಲಿದ ತೋರಿಸು, ನಾ ನೋಡಕೊಂಡ ಬರತೀನಿ.

ಕ : ಎಚ್ಚರಿದ್ರ ನನ್ನ ಮನಿ ಕಾಣಸಂಗಿಲ್ಲ.

ಕಿ : ಕಾಣ್ಸಲಿಕ್ಕಿ ಎನ ಮಾಡಬೇಕು?

ಕಾ: ಮಲಗಬೇಕಾಗ್ತದ ಕಣ್ಮುಚ್ಚಿ ಕನಸ ಕಾಣಬೇಕಾಗ್ತದ.

ಕಿ : ಅಂದ್ರ ನೀನೇ ನೋಡಿ ಬಾ, ಹೋಗು—ನೋಡಿ ಬಾ.

ಕಾ: ನೋಡಿ ಬರಲ್ಯಾ ಅಂದ್ರ?

ಕ : ಎ ಮಾರಾಯಾ, ಇಷ್ಟ ಹೇಳದ್ರಾಯ್ತು. ಗೊರಕಿನೇ ಹೊಡಿಲಿಕ್ಕ ಸುರುಮಾಡತಾನ, ಸುಡಗಾಡ ಸಿದ್ಧ.

ಕಿ : ನೋಡಿ ಬರಲಿ, ನನಗೆ ಭಾಳ ಕೆಲಸ ಅದ, ಆ ಮನೀ ಪತ್ತಿ ಹಚ್ಚಬೇಕಾಗೇದ.

ಕಾ: ಹೋಗಿ ಬರತೀನಂದ್ರ ನೀವೆಲ್ಲಾರು ನಾ ತಿರಗಿಬರು ತನಕ ಇಲ್ಲೆ ಇರ್ರಿ (ಕಾಲು ಚಾಚಿ, ಕಣ್ಣುಮುಚ್ಚಿ ಮಲಗಿಬಿಡುತ್ತಾನೆ 'ಕಾ' ಅವನನ್ನು ದಿಟ್ಟಿಸಿ ನೋಡುತ್ತಾನೆ. ಕೆಲವು ನಿಮಿಷಗಳಾದ ನಂತರ 'ಕಾ' ಗೊರಕೆ ಹೊಡೆಯುವುದನ್ನು ಸುರುಮಾಡುತ್ತಾನೆ. ಕಿ ಅವನ ಹತ್ತಿರ ಬಂದು, 'ಕಾ' ನ ಮುಖಲಕ್ಷಣಗಳನ್ನು ನೋಡಿ 'ವಾಖ್ಯೆ' ಕೊಡುವಂತೆ ವರ್ಣಿಸಲು ಪ್ರಾರಂಭಿಸುತ್ತಾನೆ. ಕ, ಕಿ ಆಡುವ ಮಾತುಗಳನ್ನು ಆಶ್ಚರ್ಯದಿಂದ ಕೇಳುತ್ತಾನೆ).

ಕಿ : ಹಾ ಮನೀಗಿ ಬಂದ, ಎಷ್ಟು ಹಿಗ್ಗಿ ನೋಡು ಅಪ್ಪನ ಮಾರಿಮ್ಯಾಲ ತಮ್ಮಪ್ಪನ ಮನೀ ಅಂತೇ ತಿಳಿದಾನ. ಈಗ ಖೋಲಿಯೊಳಗ ಹೋದನಂತ ಕಾಣ್ಸತದ. ಹಾಂ ಹ್ಯಾಂಗ ಕುಂತಾನ ಮಂಚದ ಮ್ಯಾಲ ಜೋಕುಮಾರ ಕುಂತ್ಹಾಂಗ ಎನ್ ಶೀವಿ, ಎನ್ ಪೋಜು, ನವಾಬನ ಮೊಮ್ಮಗ ಕುಂತ್ಹಾಂಗ ಕುಂತಾನ ಈಗ ಏನ ಮಾಡಲೀಕತ್ಯಾನಿವಾ ? (ತಡೆದು) ಬಾಳ ಮಾಡಿ ಊಟಾ ಮಾಡಲೀಕತ್ಯಾನ. ಬಾಯಾಗ ಜೊಲ್ಲ ಬರಲೀ ಕತ್ತೈದ.

ಕ : (ಆಶ್ಚರ್ಯದಿಂದ) ಊಠಾ ಮಾಡತಾನ ? ಊಠಾನ ?

ಕಿ : ಹೊಂ ಊಟಾನೇ–ಊಟಾ ಅಂದಪಟಿನೆ ಹ್ಯಾಂಗ ಹಾರಿ ಬಿದ್ಯೋ ? ಎಂದೂ ಕಂಡಿಲ್ಲೇನು ಊಟಾ ? ಹುಟ್ಟಿದಾಗಿದಿಂದ ಉಪಾಸ ಬಿದ್ಹಾಂಗೆ ಮಾಡತೆಲ್ಲs ಎಂದೂ ಕಂಡಿಲ್ಲೇನು ?

ಕ : ಕಂಡಿಲ್ಲಪ್ಪ, ಕಂಡಿಲ್ಲ—ನಾ ಕನಸನ್ಯಾಗನೂ ಊಟಾ ಕಂಡಿಲ್ಲ.

ಕಿ : ನೀ ಹೊಟ್ಟಿ ತುಂಬ ಊಟಾ ಎಂದೂ ಮಾಡಿಲ್ಲೇನು ?

ಕ : (ತಲಿ ತಗ್ಗಿಸಿ, ನೊಗ ಹೊತ್ತ ಎತ್ತಿನಂತೆ ತಲೆ ಅಲ್ಲಾಡಿಸುತ್ತ, ಖಿನ್ನತೆ ಯಿಂದ ಮಾತನಾಡುತ್ತಾನೆ) ಸುಳ್ಯಾಕ ಹೇಳಲಿ, ಎಂದು ಮಾಡಿಲ್ಲಪ್ಪ ಎಂದೂ ಮಾಡಿಲ್ಲ—(ತಡೆದು) ನಾ ಮನುಷ್ಯಾ ಏನು ? ನಾ ದನ, ನಾ ಎತ್ತು, ನಾ ಎಮ್ಮಿ. ಹಳೇ ಮಾಲೀಕ ತಿನ್ನಲಿಲ್ಲ, ಹೊಸದಾಗ ಬಂದವ ತಾನೇ ತಿನ್ನಲಿಕ್ಕಿ ಸುರು ಮಾಡದಾ. ಹೊಸದಾಗಿದ್ದಂವ ನಮ್ಮಂವ ಹಾನ, ಇವೊತ್ತಿಲ್ಲ ನಾಳ್ಯಾದರೂ ತನ್ನ ಹೊಟ್ಟಿ ತುಂಬಿದ ಮ್ಯಾಲ ನನಗ ಕಡೀಗಿ ಉಳದಿದ್ದ ಸಳದಿದಾದ್ರು ಕೊಟ್ಟಾನಂತ ಸುಮ್ನ ಕೂತ್ರs, ಇಂವಾ ಬಕಾಸುರನ ವಂಶದಂವ ಹುಟ್ಟಿದಾ—ಇವನ ಹೊಟ್ಟೀನೆ ತುಂಬ ಮಲ್ದು—ಅಂದಮ್ಯಾಲ ನನ್ನ ಹೊಟ್ಟಿಗೇನ ಕೊಡತಾನ? ಹೊಸ ಧಣಿ, ತಾತಿಂದು ತೇಗತಾನ, ಮಕ್ಕಳು ಮೊಮ್ಮಕ್ಕಳಿಗಿ ತಿನ್ಸತಾನ ಅವು ತಿಂದು ತಿಂದು ತೇಗತಾವು ಆದ್ರ ನನ್ನಗತಿ...ನನ್ನ ಗತೀ...ತುತ್ತು ರೊಟ್ಟಿ ಇಲ್ಲ. ಸಾಯಲಿಕತ್ತೀನಿ, ಸಾಯ್ತೀನಿ, ಸಾಯಲೇಬೇಕು (ಕಾ ನನ್ನು ತೋರಿಸಿ) ಅನ್ನಗತಿನೂ ನನ್ಹಾಂಗ, ಆದ್ರ ಹುಚ್ಚ ಹಾನ ಅಂದಾ. ಕನಸ ಕಾಣತಾನ ಕನಸನ್ಯಾಗೆ ತಿಂತಾನ ಕನಸನ್ಯಾಗೆ ಉಣ್ಣತಾನ. ಡುರಕಿ ಹೊಡಿತಾನ—ಎಚ್ಚ್ರಾದ ಮ್ಯಾಲ—ನನ್ನ ಮುಂದ ಕೈ ಚಾಚಿ 'ಇಪ್ಪತ್ತು ಪೈಸಾ ಇದ್ರ ಕೊಡು ಅಪಾ ಹಸಿವ್ಯಾಗೇದ ಎನಾದ್ರು ತೊಗೊಂಡು ತಿಂತಿನೀ' ಅಂತ ಕೇಳ್ತಾನ ಹುಚ್ಚ ಹಾನ. (ತಡೆದು) ಆದ್ರ ನನ್ನ ಈಗ ಕನಸನೂ ಬರಂಗಿಲ್ಲ. ಅವನೂ ಬೇಜಾರ ಪಟ್ಟಾವಂತ ಕಾಣ್ಸತದ. ಹೌದು ಗ್ವಾಡಿ ಇಲ್ದ ಮನ್ಯಾಗ ಹ್ಯಾಂಗ ಬಂದಾವು ? ನೀರಿಲ್ದ ಮನ್ಯಾಗ ಹ್ಯಾಂಗ ನಕ್ಯಾವು ? ಕಾಳಿಲ್ದ ಮನ್ಯಾಗ ಹ್ಯಾಂಗ ಉಂಡಾವು ಖರೇ ಅವು ಬರಂಗಿಲ್ಲೀಗ, ಬರಂಗಿಲ್ಲ. (ಶೂನ್ಯದಲ್ಲಿ ನೋಡುತ್ತಾನೆ).

ಕಿ : ನಾನೊಂದ ಮಾತ ಹೇಳ್ತೀನಿ. (ತಡೆದು) ನೀ ನಿನ್ನ ಕನಸೀಗಿ ಹರಾಜ ಮಾಡು.

ಕಾ: ಯಾರು ತೊಗೊಂಡಾರು?

ಕಿ : ಯಾರು ತೊಗೋಮಂಗಿಲ್ಲ, ಗೊತ್ತು, ಆದ್ರೆ ಅದರ ಮ್ಯಾಲ ಒಂದು ಬಣ್ಣದ ಟೊಪ್ಪಿಗಿ ಹಾಕಿ ಹರಾಜಮಾಡಿ. ಮಂದಿ ಮಳ್ಳಿರತಾರ, ರಂಗ ನೋಡಿ ತೊಗೋತಾರ. (ಕಾ ಕುರ್ಚಿಯ ಮೇಲೆ ಆಲುಗಾಡುತ್ತಾನೆ).

ಕ : (ಕಾ ನನ್ನು ನೋಡಿ) ಅವನು ಕನಸಿನ ಬಾಗಲ್ದಿಂದ ಹೊರಗ ಬರಲೀ ಕತ್ಯಾಂತ ಕಾಣಸಲೀಕತ್ತೈದ.

ಕಿ : ಇಲ್ಲ ಇನ್ನೂ ಬಂದಿಲ್ಲ (ತಡೆದು) ಕಣತೆರದ್ರ ಕನಸಿನ ಬಾಗ್ಲನೂ ತೆರದ್ಹಾಂಗ ಅವು ಮುಚ್ಚಿದ್ದ್ದ ಅಂದ್ರs ಅದನು ಇನ್ನೂ ಮುಚ್ಚಿದ್ಹಾಂಗಂತ ತಿಳೀಬೇಕು.

ಕ : ಕಣ್ ತೆರದು ಕನಸ ನೋಡಲಿಕೆ ಬರಂಗಿಲ್ಲೇನು?

ಕಿ : ಬರತದ. ಆದ್ರs ಅಂಥಾ ಮಂದಿ ಶರಾನೇ ಬ್ಯಾರೆ ಇರತದ.

ಕಾ: (ಕಣ್ಣು ತೆರದು ಆನಂದದಿಂದ) ಆಹಾ! ಎನ್ ಖಾಸ ಖಾಸ ಕನಸಾ ಬಂದೂ ಅಪ್ಪಾ ಇರ್ವೊತ್ತುs.

ಕ : ನಿನ್ನ ಕನಸನ್ಯಾಗ ರಾಯರ ಮಗಳು ಕಾಣ್ಸದಳೇನು?

ಕಾ : ರಾಯರ ಮಗಳುs. (ವಿಚಾರಮಾಡಿ) ನಾಲ್ಕಾರು ಪೋರಿಗೋಳು ಬಂದಿದ್ದು ನನ್ನೀ (ಕೊರಳು ಮುಟ್ಟಿ) ಕೊಳ್ಳಾಗ ಜೋತು ಬಿದ್ದಿದ್ದು. (ತುಟಿ, ಗಲ್ಲಮುಟ್ಟಿ) ಇಲ್ಲೀ ಇಲ್ಲೀ ಮುಕ್ಕಾ ಕೊಟ್ಟು, ಅದರೊಳಗ ನಿನ್ನ ರಾಯರ ಮಗಳಾರಂತ ಗೊತ್ತಾಗಲಿಲ್ಲ. (ತಡೆದು) ಅಕೀ ರೂಪಾಹ್ಯಾಂಗಿತ್ತು ಹೇಳು, ಅಂದ್ರ ನಾ ಹೇಳ್ತೀನಿ ಆಕೀ ಇದ್ಳs ಇಲ್ಲಾಂತ.

ಕಿ : ಛಂದಿದ್ದಳು—ನೋಡದ್ರ ನೋಡದ್ರ ನೋಡೇಬೇಕನಸ್ಹಾಂಗಿದ್ದಳು.

ಕ : ಖುಲಾಸಾ ಹೇಳು—ಎನ್ ಮಾತಾಡ್ತಿ? ನೋಡದ್ರ ನೋಡಬೇಕಂತ ಅನಸ್ಹಾಂಗಿದ್ದಳಂತ. ಹಾಂಗ ಹಜ್ಜಾರ ಹಜ್ಜಾರ ಪೋರಿಗೋಳಿರತಾವ.

ಕಿ : ಹಾಂ, ಹಾಂಗ ಹಜ್ಜಾರ ಹಜ್ಜಾರ ಪೋರಿಗೋಳೊಳಗನು, ನಮ್ಮ ರಾಯರ ಮಗಳು ಕಾಣಸ್ಹಾಂಗ್ಹಾಳ.

ಕ : ನಿಮ್ಮ ರಾಯರ ಮಗಳು ಎನ್ ಮ್ಯಾಲಿಂದ ಉಚ್ಚಿಬಿದ್ದಾಳೇನು? ಎಲ್ಲಾರ ಮಗಳಗೋಳು ಕಾಣಸ್ಹಾಂಗ ಕಾಣಸ್ತಾಳಲ್ಲs!

ಕಿ : ಇಲ್ಲ, ಎಲ್ಲಾರ ಮಗಳಗೋಳು ಕಣ್ಣ ತೆರದ್ರ ಕಾಣಸ್ತಾವ, ರಾಯರ ಮಗಳು ಕಣ್ ಮುಚ್ಚದ್ರುನೂ ಕಾಣಸ್ತಾಳ.

ಕಾ: (ಸಂತೋಷದಿಂದ) ಭೇಷ, ಭೇಷ—ಎನ್ ಮಾತಾಡ್ದಿ—ಮುತ್ತಿನಂಥ ಮಾತಾಡ್ದಿ—ನನಗೂ ಕಣ್ ಮುಚ್ಚಿದ್ರ ಕಾಣಸ್ತಾವ, ನಿನಗೂ ಕಣ್ ಕಾಣಸ್ತಾವ ಅಂದ್ರs ನಾವಿಬ್ರು ಕಣ್ಣಮುಚ್ಚಿನೇ ನೋಡವ್ರಾದವಿ. ನಮ್ಮ ರಾಜ್ಯ ನಮ್ಮ

ಸಾಮ್ರಾಜ್ಯ, ನಮ್ಮ ಸುಖಾ ನಮ್ಮ ದುಃಖಾ, ನಮ್ಮ ನೋವು, ನಮ್ಮ ನರಳಾಟ ಎಲ್ಲವೂ ಕಣ್ ಮುಚ್ಚೇ ನಡಿತಾವ. ನಿದ್ದೀಗಣ್ಣಾಗೇ ಹುಟ್ಟಿ ನಿದ್ದೀಗಣ್ಣಾಗೇ ಸಾಯ್ತಾವ (ದನಿ ಎಳೆದು) ನಾನು ನೀನು ಜೋಡಿ, ನೀನು ನಾನು ಜೋಡಿ. ನಮ್ಮಂಥವ್ರಿಗೆ, ಎಚ್ಚರಂದ್ರ ಸಾವು, ನಿದ್ದೀ ಅಂದ್ರ ಜೀವು.

ಕ : (ನಿರಾಶೆಯಿಂದ) ನನಗೆ ಮಾತ್ರ ನಿದ್ದೀ ಅಂದ್ರೂ ಸಾವು ಎಚ್ಚರಂದ್ರೂ ಸಾವು ನನಗೆ ಎಚ್ಚರಂದ್ರ ನೋವು, ಎಚ್ಚರಂದ್ರ ಕೊಲೆ, ಸುಳಿಗಿ, ಖೂನಾ ಖೂನಿ ಮೋಸ, ಧೋಕಾಬಾಜಿ. ಇಂಥದ್ರ, ಪ್ರಪಂಚ ನನ್ನ ಪಾಲಿಗಿ— ನನ್ನ ಎಚ್ಚರಂದ್ರ ಒಂದು ದೊಡ್ಡ ಕ್ವಾಣಿಯೊಳಗ ಕೂಡಿಸಿ ದಿವಸಾ ಒಂದು ಹಿಡಿಗಾಳಿ ತಕ್ಕೊಂಡು ಹೋದ್ಹಾಂಗ, ದಿವಸಾ ಒಂದ್ಹನಿ ನೀರಸ್ಯಾಗ ವಿಷ್ಯಾಬೆರಸದ್ಹಾಂಗ, ದಿವಸಾ ಒಂದು ಹೆಜ್ಜಿ ಸಾವಿನ ಕಡೆಗೆ ಕರಕ್ಕೊಂಡ್ಹೋದ್ಹಾಂಗ ಹಿಡಿದಿದ್ದೆಲ್ಲಾ ಹಾಂವಾ ದ್ಹಾಂಗ, ಬಂದಿದ್ದೆಲ್ಲ ಸಾವು ಬಂದ್ಹಾಂಗ (ತಡೆದು) ನಾ ಏನ ಮಾಡಲಿ, ಏನ ಮಾಡಲೀ ?

ಕಿ : ಹುಚ್ಚಾಗು, ಹುದಲಾಗು, ಬದಕಬೇಕಾದ್ರ ಕಲ್ಲಾಗು, ಮಣ್ಣಾಗು. ನೀ ಮನುಷ್ಯಾ ಅಂತ ತಿಳಕೊಂಡ್ರ ನಿನ್ನ ಹೆಣಾ ಎತ್ತಾರೋ ನಿನ್ನ ಹೆಣ್ಣೂ ಎತ್ತ ತಾರ. ನಿನ್ನ ಸುಡಗಾಡದಾಗ ಹಾಕಿ ಸುಟ್ಟು ಬರತಾರೋ ಕುತ್ತಿಗಿ ಮಟಾ ತೆಗ್ಗ ತೋಡಿ ಹೂಳಿ ಬರುತಾರೋ. ಅದಕಂತ ಹೇಳತೀನಿ. ಹಗಲಾ ಹಾಡೇ ಹೆಣ್ಣೂ ಆಗೋ, ಹುಚ್ಚಾಗೋ ಹುದಲಾಗೋ. ಇದು ತಿಳಿಲಿಲ್ಲಾಂದ್ರ ನಿನ್ನ ಹಾಡಾ ಸೂಳೇರ ಜಾತ್ರ್ಯಾಗ ಗರತಿ ಹಾಡ ಆದ್ಹಾಂಗಾಗ್ತದೋ, ಗರತಿ ಹಾಡಾ ಆದ್ಹಾಂಗಾಗ್ತದ.

ಕಾ: (ಮಾತು ಬದಲಾಯಿಸಿ) ನಿನ್ನ ರಾಯರ ಮಗಳು ಹ್ಯಾಂಗಿದ್ದಳು ?

ಕಿ : ರತ್ತೋ ರತ್ತೋ, ಇದ್ದಳು.

ಕಾ: ಹದಿನಾರೆಮ್ಮಿ ಸಾಕಿದ್ದಳೇನು ?

ಕಿ : ಕಟ್ಟಲಾರೇ—ಕಾಸಲಾರೆ ಅಂತ ಹೇಳಿ ಓಡಿ ಹೋದಳು.

ಕಾ: ಹ್ಯಾಂಗ ಓಡಿ ಹೋದಳು ?

ಕಿ : ಗುಬ್ಬಿಹಾಂಗ ಫುರ್‌ಽಽಽ ಅಂತ ಹಾರಿ ಹೋದಳು.

ಕಾ: ಆಗ ನೀ ಏನು ಅನ್ನಲಿಲ್ಲೇನು ?

ಕಿ : ಬೈಠ ಗುಬ್ಬಿ ಅಂದೆ.

ಕಾ: ಆಗ ಆಕಿ ಏನೆಂದಳು ?

ಕಿ : ಆಗ ಆಕಿ ಬಾಳಿ ಖಂಬಾ ಅಂದಳು.

ಕಾ: ಅಂದ ಮ್ಯಾಲ ನೀ ಏನ್ ಅಂದಿ ?

ಕಿ : ನಾ ಕುಕ್ಕರ ಬಸವಿ, ಕೂರ ಬಸವಿ ಅಂದೆ.

ಕಾ: ಆಗ ಆಕಿ ಏನ ಮಾಡಿದಳು ?

ಕಿ : ಆಕಿ ಬಸವಿಯಂತೆ ಫುರಂತ ಓಡಿ ಹೋದಳು.
(' ರತ್ತೋ ರತ್ತೋ:—' ಹಾಡಲು ಪ್ರಾರಂಭಿಸುತ್ತಾನೆ, ಕ ಮತ್ತು ಕಾ ಇಬ್ಬರು ದನಿಗೂಡಿಸುತ್ತಾರೆ. ಕಣ್ಣು ಮುಚ್ಚಿ ಸಾಮೂಹಿಕ ಪ್ರಾರ್ಥನೆ ಮಾಡುವಂತೆ ಎಲ್ಲರೂ ಹಾಡುತ್ತಾರೆ.)

ರತ್ತೋ ರತ್ತೋ ರಾಯನ ಮಗಳೆ,

ಬಿತ್ತೋ ಬಿತ್ತೊ ಭೀಮನ ಮಗಳೆ

ಹದಿನಾರೆಮ್ಮಿ ಕಾಸಲಾರೆ, ಕಟ್ಟಲಾರೆ

ಬೈತ ಗುಬ್ಬಿ ಬಾಳೆ ಖಂಬಾ,

ಕುಕ್ಕುರ ಬಸವಿ ಕೂರ ಬಸವಿ

(ಹೀಗ ಒಂದೆರಡು ನಿಮಿಷ ಹಾಡಿ, ತರುವಾಯ ಒಮ್ಮಿಂದೊಮ್ಮೆಲೇ ಹಾಡು ನಿಲ್ಲಿಸಿ ಮೌನರಾಗುತ್ತಾರೆ.)
(ಕಿ ತನ್ನ ಜೋಬಿನಲ್ಲಿದ್ದ ಒಂದು ಕೋಳಿ ಪುಚ್ಚವನ್ನು ತೆಗೆದುಕೊಂಡು ತಲೆ ಗೂದಲಿನಲ್ಲಿ ಸೇರಿಸಿಕೊಂಡು ಗಂಭೀರ ಮುಖ ಲಕ್ಷಣಗಳಿಂದ, ಅತ್ತಿತ್ತ ನೋಡಿ.)

ಕಿ : ನಾ ನಿಮ್ಮೆಲ್ಲರ, ಈ ಪ್ರಪಂಚದ, ಈ ದೇಶದ, ಈ ಖಂಡದ, ಈ ಮಾಂಸದ ಈ ರಕ್ತದ, ಈ ವಿಶ್ವದ ಸಾಮ್ರಾಟನಿದ್ದೇನೆ, ಚಕ್ರವರ್ತಿ ಇದ್ದೇನೆ—ಮಹಾ ರಾಜಾಧಿ ರಾಜ, ರಾಜಾಧಿರಾಜ, ಮಹಾರಾಜ, ಶ್ರೀ ಶ್ರೀ ಶ್ರೀ ಗೆ.........ಜಯವಾಗಲಿ, ಜಯವಾಗಲಿ (ಕ ಮತ್ತು ಕಾ ನ ಕಡೆ ನೋಡಿ) ಏ, ನೀವು ನನ್ನ ಜಯ ಜಯಕಾರ ಯಾಕ ಮಾಡದಿಲ್ಲ ?

ಕ : ನೀ ಯಾರೋ. ಹೀಂಗ ಹುಚ್ಚನ್ಹಾಂಗ ಯಾಕ ಬೊಗಳಲಿಗತ್ತೀದಿ ?

ಕಿ : ನಾ ಹುಚ್ಚಲ್ಲ—ನಾ ನಿಮ್ಮ ರಾಜಾ, ನಿಮ್ಮ ಮಹಾರಾಜಾ, ನಿಮ್ಮ ಪೋತ ರಾಜ.

ಕ : ಹೌದು, ನೀ ಪೋತರಾಜನೇ. ಪೋತರಾಜನು ತನ್ನಷ್ಟಕ್ಕೆತಾನು ರಾಜಾ ಅಂತ ತಿಳಕೊಂಡಿದ್ದ. ಹೀಂಗಾಗೇದ ಗತಿ ನಮ್ಮ ರಾಜ್ಯದ್ದು. ಹದಗೆಟ್ಟು ಹಾಳಾಗೇದ.

ಕಿ : ನಿನ್ನ ದೇಶಾ ಯಾವಾದೋ ?

ಕ : ನನ್ನ ದೇಶಾ ಭೂಮಿ ಮ್ಯಾಲಿಂದು.

ಕಿ : ನಿನ್ನ ದೇಶಾ ಇರಲಿ ಭೂಮಿ ಮ್ಯಾಲ ಆದ್ರ ಅಸಾ, ನಾ ರಾಜಾ ಅಲ್ಲಂತ ನಿನಗ್ಹ್ಯಾಂಗ ಗೊತ್ತು ?

ಕ : ನಿನ್ನ ಮೋತೀನ ಹೇಳ್ತದ ನೀ ರಾಜಾ ಅಲ್ಲಂತ.

ಕಿ : ನನ್ನ ಮೋತಿ ಏನ ಹೇಳ್ತದ ?

ಕ : ನೀ ಲಫಂಗಾ, ನೀ ಲುಚ್ಚಾ, ನೀ ಹಲ್ಕಟ್, ನೀ ಕಳ್ಳಾ, ನೀ ಸುಳ್ಳಾ; ನೀ ಧೋಕೇಭಾಜಿ, ನೀ ಖಿಕನಾಶಿಗೇಡೀ ಅಂತ ಡೊಂಗರ ಹೊಡೆದು ಸಾರಕತ್ತೈದ ನಿನ್ನ ಈ ಮೋತಿ (ತಡೆದು) ನೀ ರಾಜಾ ಹ್ಯಾಂಗೋ ?

ಕಿ : ನೀ ಹ್ಯಾಂಗ ಪ್ರಜಾ ಹಾಂಗ ನಾ ರಾಜಾ.

ಕಾ : ಮತ್ತಾಯ್ತು. ಇಬ್ರೂ ಒಬ್ರಾಂಗ ಒಬ್ರಿದ್ರ ಮುಗೀತಲ್ಲ ಕತೀ. ಮತ್ಯಾಕ ತಕರಾರ ಮಾಡತೀರಿ. ನಿನ್ನ ಬಲಾ ಜಾಸ್ತಿ ಆಯ್ತಂದ್ರ ಇವ್ನ ತಿನ್ನು. ಅವನ ಬಲಾ ಜಾಸ್ತಿ ಆಯ್ತಂದ್ರ ನಿನ್ನ ತಿಂತಾನ. ನೀ ಇವ್ನ ತಿನ್ನು ಇಂವಾ ನಿನ್ನ ತಿಂತಾನ. ಒಟ್ಟು, ಒಬ್ರಿಗೊಬ್ರು ತಿನ್ನೋ ಕೆಲಸಾನೇ ಮಾಡ್ರಿ—ಬರೀ ತಿನ್ನೋ ಕೆಲಸ. ತಿನ್ನದ ಸಿಕ್ತಂದ್ರ ಏನಾದ್ರೂ ತಿನ್ರಿ—ಹೆಂಡ ತಿನ್ರಿ ಹೇಲ ತಿನ್ರಿ ಕಲ್ಲು ತಿನ್ರಿ ಮಂಣ ತಿನ್ರಿ ತಿನ್ರಿ ತಿನ್ರಿ—ಅದೊಂದೇ ಮಾಡರಿ—ತಿಳೀತಾ.

ಕ : (ಕಾ ಗೆ ಕಿ ನನ್ನು ತೋರಿಸಿ) ಇವನು ಇಲ್ಯಾಕ ಬಂದಾನ ?

ಕಾ : ಎದರೇ ಕುಂತಾನ ಕೇಳು.

ಕ : (ಕಿ ಗೆ) ನೀ ಇಲ್ಯಾಕ ಬಂದ ಕುಂತಿದೆಪ್ಪ ?

ಕಿ : ನಾನಂದ್ಯಾ ?

ಕ : ಹೂಂ ನೀನೆ.

ಕಿ : ಕೇಳಿ ಬರತೀನಿ ನಿಂದ್ರು.

ಕ : (ಆಶ್ಚರ್ಯದಿಂದ) ಯಾರನ್ನು ಕೇಳಿ ಬರತೀ.

ಕಿ : ಅಂವಾ ಅಲ್ಲಿ ಹೊರಗ ನಿಂತಾನ ಅವ್ನ ಕೇಳಿ ಬರತೀನಿ.

ಕಾ : ಅಂವಾ ಯಾರು ? ಮತ್ಯಾರಾದ್ರೂ ಬಂದಾರೇನು ? ಬಂದ್ರ ಹೊರಗೇ ಯಾಕೆ ನಿಂತಾರ ?

ಕಿ : ಹೊರಗ ಯಾಕ ನಿಂತಾನಂದ್ರ ಅವಾ ಹೊರಗಿನವನದಾನ.

ಕ : ಅಂವಾ ನಮ್ಮೊಳಗ ಯಾಕ ಬಂದಿಲ್ಲ ?

ಕಿ : ಹೊರಗ ನಿಂತ್ರೇ ಛಲೋ ಅಂತ ತಿಳಿಕೊಂಡು ಅಲ್ಲೆ ನಿಂತಾನ.

ಕಾ : ನಿನ್ನ ಹಾದೀ ಕಾಯಕೋತ ನಿಂತಾನೇನು ?

ಕಿ : ಇಲ್ಲ ನನ್ನ ಹಾದಿ ಕಾಯಕೋತ ನಿಂತಿಲ್ಲ. ಯಾಕಂದ್ರ ಬರಮುಂದ ಅವನ ಕೈಯಾಗ ನಾ ನನ್ನ ಹಾದಿ ಕೊಟ್ಟೇ ಬಂದೀನಿ.

ಕ : ಅವನ ಕೈಯಾಗ ಕೊಟ್ಟು ಬಂದ್ಯಾ? (ತಡೆದು) ಅವನು ನಿನ್ನ ಹಾದಿ ತೊಗೊಂಡು ಓಡಿಹೋಗಿದ್ನಂದ್ರ?

ಕಿ : ಎಲ್ಲಿ ಹೋಗ್ತಾನವ ಮಗ!

ಕ : ಎಲ್ಲ್ಯಾದ್ರು ನಿನ್ನ ತಪ್ಪಿಸಿ ಹೋದ್ರs?

ಕಿ : ಹಾಂಗ ಹೋಗ್ಲಿಕ್ಕೆ ಬರಂಗಿಲ್ಲ ಅವನೀಗೆ.

ಕಾ : ಯಾಕಿಲ್ಲ.

ಕಿ : ಯಾಕಂದ್ರ ನನ್ನ ಹಾದೀ ತೊಗೊಂಡು ನನ್ನ ಹಾದೀ ಮ್ಯಾಲ ನಡೀಲಿಕ್ಕೆ ಬರಂಗಿಲ್ಲ. ನಡದ್ರ ನನ್ನ ಹಾದೀ ಮ್ಯಾಲೇ ನಡೀಬೇಕಾಗ್ತದ—ನಡದ್ರ ನನ್ನ ಬಲ್ಲೇ ಬರಬೇಕಾಗ್ತದ.

ಕಾ : ಅಂದ್ರ ಅಂವಾ ಅಲ್ಲೆ ನಿಂತಾನೇನು?

ಕಿ : ಹೂಂ ನಿಂತಿರತಾನ.

ಕಾ : ನಿಂತ್ರ ಒಳಗ ಕರಕೊಂಡು ಬಾ.

ಕಿ : ಬ್ಯಾಡ, ಅವನೀಗೊಳಗ ತಂದು ಯಾಕ ಕೊಲ್ಲಲಿ?

ಕಾ : ಕೊಲ್ಲಲಿಕ್ಕೇನಾಗೇದ? ನಾವಿದ್ರವ್ರೇನು ಸತ್ತೀವೇನು?

ಕಿ : (ಭಯಂಕರ ನಗು) ನೀವು ಸತ್ತಿಲ್ಲಂದ್ರ ಬದುಕೀರೇನೂ? ಇಲ್ರ್ಯೋ ಇಲ್ಲ—ನೀವು ಹೆಣಗೋಳರ್ರ್ಯೋ, ನೀವು ಹೆಣಗೋಳು. ನೀವು ಹುಟ್ಟಿದ ಹತ್ತು ದಿನಾ ಮಾತ್ರ ಜೀವಂತಿಂದ್ರಿ ಅಲ್ಲಿಂದ ಸತ್ರಿ. ಸತ್ತೆ ಉಂಡ್ರಿ, ಸತ್ತೇ ತಿಂದ್ರಿ ಸತ್ತೇ ಬೆಳದ್ರಿ, ಸತ್ತೇ ದೊಡ್ಡವರಾದ್ರಿ, ಸತ್ತೇ ಮನೀ ಮಾಡಕೊಂಡ್ರಿ, ಸತ್ತೇ ಮಕ್ಕಳ ಹಡದರಿ, ಸತ್ತು ಸ್ವರ್ಗಾ ಕಂಡ್ರಿ, ಸತ್ತೆ ನರಕ ನೋಡಿದ್ರಿ—ಸತ್ತೇ ಉಸಿರಾಡಿಸಿದ್ರಿ —ಎಲ್ಲನೂ ಸತ್ತೇ ಮಾಡಿದ್ರಿ—ಅಂತೇ ನೀವು ಹೆಣಗೋಳರ್ಯೋ, ನೀವು ಹೆಣ ಗೋಳು. ನೀವು ಹೆಣಗೋಳರ್ಯೋ, ನೀವು ಹೆಣಗೋಳರ್ಯೋ. (ಕುಣಿಯುತ್ತಾನೆ).

ಕ : ನೀನ್ಯಾರಪ್ಪಾ?

ಕಿ : ನಾ ನಿಮ್ಮ ರಾಜಾ, ನಾ ಬೇತಾಳ, ನೀ ತ್ರಿತಾಳ.

ನಾ ದಿನ್ ದಿನಾ ನಾ ತಿನ್ ತಿನಾ

ನಾ ತ್ರಿಕ ದಿನಾ—ನಾ ದಿಂ ದಿನಾ—

ನಾ ಹಾಡಾ ಹಾಡತೀನಿ, ನೀವು ನಾಚ ಮಾಡ್ರಿ.

ಕಾ : ನಮಗs ನಾಚ ಬರಾಂಗಿಲ್ಲ.

ಕಿ : ಅಂದ್ರ ನಾ ಭಾಷಣ ಮಾಡ್ತೀನಿ ನೀವು ಭಾಷಣ ಕೇಳ್ರಿ.

ಕ : ಕೇಳತೀವಿ, ಕೇಳತೀವಿ ನೀ ಸುರುಮಾಡು (ಕ ಮತ್ತು ಕಾ ಇಬ್ಬರೂ ಕಿ ನ ಹಿಂದುಗಡೆ ಇದ್ದ ಕುರ್ಚಿಯ ಮೇಲೆ ಕೂಡುತ್ತಾರೆ. ಕಿ ಮುಂದೆ ನಿಲ್ಲುತ್ತಾನೆ ಎಲ್ಲರ ಮುಖ ಪ್ರೇಕ್ಷಕರ ಕಡೆಗಿರುವುವು).

ಕ : ಎ, ನಿಮ್ಮ ಮಾರಿ ಕಾಣಸವಲ್ಲವು—ನಿಮ್ಮ ಮಾರೀನೆ ಇಲ್ಲೇನು? ಮುಖಾನೆ ಇಲ್ಲೇನು? ಕೇಳವ್ರಿಗಿ ಮುಖಾನೆ ಇಲ್ಲೇನು?

ಕಾ: ಏ ಮಾರಾಯಾ, ನಿನ್ನ ಮುಖಾನು ಕಾಣಸವಲ್ಟು. ಹೇಳವ್ನಿಗೂ ಮುಖಾ ಇಲ್ಲೇನು?

ಕಿ: ಹಂಗೆ ಅನ್ನಲೀಕತ್ತೇದ—ನನ್ ಮುಖಾ ನಾ ಕಳಕೊಂಡೀನಿ ನಿಮ್ಮ ಮುಖಾ ನೀವು ಕಳಕೊಂಡೀರಂತ ಅನ್ನತದ. ಮಾತಾಡ್ಲಿಕ್ಕಿ ನನ್ಗ ಮುಖಾ ಇಲ್ಲ, ಮಾತು ಕೇಳಲಿಕ್ಕೆ ನಿಮ್ಗ ಮುಖಾ ಇಲ್ಲ—ಮುಖಾ ಇರಲಾರದವು ಎನ ಮಾತಾಡ ಬೇಕು? ಎನ್ ಮಾತು ಕೇಳಬೇಕು?

ಕ: ಮುಖಾ ಇರಲಾರದವ್ರನು ಮಾತು ಆಡೀ ಆಡ್ತಾರ, ಆಡೀ ಆಡ್ತಾರ, ಆಡೀ ಆಡ್ತಾರ.

ಕಾ: ಮುಖಾ ಇರಲಾರದೇನೆ ಮಾತಾಡ್ಲಿಕ್ಕಿ ನಾಚಕಿ ಬರಂಗಿಲ್ಲೇನು?

ಕ: ನಾಚಕಿ ಬರದು ಮುಖದ ಮ್ಯಾಲ, ಅದೇ ಇಲ್ಲ, ಅದು ಬರಬೇಕೆಲ್ಲಿ?

ಕಿ: ಇರಲಿಕಲಿ—ನಾ ಭಾಷಣಾ ಕೊಡತೀನಿ, ನೀವು ಕೇಳ್ರಿ.

ಕ ಮತ್ತು ಕಾ: ನೀ ಕೊಡು, ನಾವು ಕೇಳತೀವಿ.

ಕ: (ಭಾಷಣ ಮಾಡುವವನು) ಒಂದಾನೊಂದ ದೇಶ, ನಮ್ಮ ವೇಶ, ಸೈನ್ಯ, ಶಕ್ತಿ, ಕೋಳಿಶಕ್ತಿ, ನಮ್ಮ ಜಾತಿ—ಕರಡಿ, ವನ್ಯ ಪ್ರಾಣಿ. ಸತ್ಯ, ಅಹಿಂಸಾ, ಕೊಲೆ ನಾರಾಯಣ, ದೇವರು, ಮಾತ್ರೆ, ಗುಳಿಗೆ, ಹಿಪ್ಪಿ, ಗಿಪ್ಪಿ ಬಿದ್ದವರು, ಇಲಿಗಳ ಸ್ಪರ್ಧೆ—ಕಾಮದಹನ...ನಾನು ದೇಶದ—ನೀನು—ಮಣ್ಣು.

ಕಾ: ಏ ಮಾರಾಯಾ, ನಿನ್ನ ಮಾತೇ ತಿಳೀವಲ್ದು.

ಕ: ತಿಳಿವಲ್ಲವಾ? (ತಡೆದು) ಇವು ನಿಮ್ಗ ತಿಳೆಂಗಿಲ್ಲ.

ಕಾ: ಯಾಕ ತಿಳೆಂಗಿಲ್ಲ?

ಕಿ: ಯಾಕಂದ್ರ ಇವು ನನ್ನಂತ ರಂಗದಿಂದ, ನನ್ನ ಹೃದಯದಿಂದ ನನ್ನೊಳಗಿಂದ ನನ್ನೆದ್ಯಾಗಿಂದ ಬಂದ ಮಾತ್‌ಗಳಿವು.

ಕಾ: ಅಲ್ಲಿಂದ ಬಂದ್ರೇನಾಯ್ತು—ಯಾಕ ತಿಳಿಂಗಿಲ್ಲ?

ಕಿ: ಯಾಕಂದ್ರ ನಿಮ್ಗ ಬರೇ ಬಾಯಿಲಿಂದ ಬಂದ ಮಾತು ಕೇಳs ಚಟಾಬಿದ್ದದs ಅದನ್ನೇ ಕೇಳಿ ಕೇಳಿ ನೀವು ಒಳಗಿನಿಂದ ಬಂದ ಮಾತು ಕೇಳದು ಮರತ ಬಿಟ್ಟೀರಿ. ಆ ಭಾಷಾನೆ ನಿಮ್ಗ ಬರಂಗಿಲ್ಲ.

ಕ: ತಿಳೀಲಾರದ ನಿನ್ನ ಭಾಷಣ ಸಾಕ ಮಾಡು.

ಕಿ: ಸಾಕ ಮಾಡತೀನಿ. (ಕುರ್ಚಿಯ ಮೇಲೆ ಬಂದು ಕೂಡುವನು).

ಕಾ: ಈ ಮನೀ, ಅಂದ್ರs ಈ ಜಾಗಾ ಯಾರದು?

ಕಿ: ಈ ಮನೀ ಮಂಗಂದು.

ಕಾ: ಮಂಗೆಲ್ಲೇದ?

ಕಿ: ಗಿಡದ ಮ್ಯಾಲದ.

ಕಾ: ಗಿಡಾ ಎಲ್ಲೇದ?

ಕಿ: ಗುಡ್ಡದ ಮ್ಯಾಲೇದ.

ಕಾ: ಗುಡ್ಡಾ ಎಲ್ಲೇದ?

ಕಿ: ಮುಗಲ ಮ್ಯಾಲsದ.

ಕಾ: ಮುಗಲ ಎಲ್ಲೇದ?

ಕಿ: ಮಾಳಿಗಿ ಮ್ಯಾಲ್ಯದ.

ಕಾ: ಮಾಳಿಗೆಲ್ಲsದ?

ಕಿ: ತಲಿ ಮ್ಯಾಲsದ.

ಕಾ: ತಲಿ ಎಲ್ಲೇದ?

ಕಿ: ಧಡದ ಮ್ಯಾಲದ.

ಕಾ: ಧಡಾ ಎಲ್ಲೇದ?

ಕಿ: ಕಾಲ ಮ್ಯಾಲsದ.

ಕಾ: ಕಾಲೆಲ್ಲsದ?

ಕಿ: ನೆಲ್ದ ಮ್ಯಾಲsದ.

ಕಾ: ನೆಲಾ ಎಲ್ಲೇದಿ?

ಕಿ: ನೆಲ್ದ ಮ್ಯಾಲsದ.

ಕಾ: ನೆಲ್ದ ಮ್ಯಾಲsದ?

ಕಿ: ಹೂಂ ನೆಲ್ದವ್ಯಾಲಽದ.

(ಮೂವರು ಚಪ್ಪಾಳೆ ಬಾರಿಸುತ್ತ 'ನೆಲ್ದವ್ಯಾಲಽದ, ನೆಲ್ದವ್ಯಾಲಽದ, ನೆಲ್ದವ್ಯಾಲಽದ ಎಂದು ಹಾಡುವರು.)

ಕ: ನೆಲಾ ನೆಲ್ದವ್ಯಾಲಽದ ...... ಖೀ ಖೀ ಖೀ (ವಿಚಿತ್ರ ನಗು) ನೆಲಾ ನೆಲ್ದ ವ್ಯಾಲಽದ. ಅದರ ವ್ಯಾಲದು ಅದು, ಅದ್ರ ವ್ಯಾಲ ಅದು ಆದ (ತಡೆದು) ಅಲ್ಲಪ್ಪ ರಾಜಾ—

ಕಿ: ಹೇಳಪ್ಪ ಪ್ರಜಾ.

ಕ: ಇಗಾ ನೋಡು ನಿನ್ಗ ಈಗ ಇಲ್ಲಿದ್ದಲ್ಲೆ, ಸಧ್ಯಾಕ್ಕ ಏಕಾಏಕಿ (ಕೈಮಾಡಿ ತೋರಿಸುತ್ತ) ಇಷ್ಟು ಬಂಗಾರ ಸಿಕ್ರ ನೀ ಏನ್ ಮಾಡ್ತೀ?

ಕಿ: (ವಿಚಾರ ಮಾಡಿ) ಏನ್ ಮಾಡ್ತಿನಂದ್ರ ಆ ಬಂಗಾರದಿಂದ ಒಂದು ಕಿರೀಟ ಮಾಡಸಿ ತಲಿವ್ಯಾಲ ಹಾಯಕೋತೀನಿ.

ಕಾ: ಎಂಥ ಬಂಗಾರದಂಥ ವಿಚಾರಪ್ಪ ನಿಂದು, (ತಡೆದು) ಅಲ್ಲೋ ನಾವಿಬ್ರು ಹೊಟ್ಟಿಹಸಿದು ಹೊಯಕೋಳಿಕತ್ತೀವಿ ತಿನ್ನಾಕ್ಕ ಅನ್ನಿಲ್ಲಂತ—ನೀ ನಮ್ಗ ಒಂದಿಷ್ಟು ಸಾಹಾಯಾ ಮಾಡದ ಬಿಟ್ಟು ಕಿರೀಟ ಮಾಡಿಸಿ ಹಾಯಕೊಂಡು ಮೆರಿಬೇಕಂತ ಮಾಡೀದೆಲ್ಲೋ? ಇದೆಂಥ ನಿನ್ನ ಮನಸಾ?

ಕಿ: ಎಂಥ ಮನಸ್ಸಂದ್ರ? ಭಂಗಾರದಂಥಾ ಮನಸಾ. ನಾ ಒಂದು ಬಾರಿ ಕಿರೀಟ ಹಾಯಕೊಂಡನಂದ್ರಾಯ್ತು (ತನ್ನ ತಲೆ ಮುಟ್ಟಿಕೊಂಡು) ಇಲ್ಲಿದ್ದ ಮನಸಾ ಇಲ್ಲಿ ಬಂದ ಸೇರತದ. ಮನಸ ತಲೀಗೇರತದ ಮನಸ ತಲೀಗೇರದ ವ್ಯಾಲ ಎಲ್ಲಾ ಬರೋಬರಿ ಆಗ್ತದ.

ಕ: ಅಂದ್ರ ನೀ ಇದ್ಹಾಂಗೆ ಇರು ನಾ ನಿನ್ಗ ಶಾಪ ಕೊಡತೀನಿ.

ಕಾ: ಹೌದು, ನೀ ಇದ್ಹಾಂಗೆ ಇರು ನಾನೂ ಶಾಪ ಕೊಡತೀನಿ.

ಕಿ: ನಾ ಇದ್ಹಾಂಗೇ ಇರತೀನಿ ನನ್ಗ ಬದಲಾಸದ ಬ್ಯಾಡ. ನಾ ಹೊಟ್ಟಿದ್ದಿನಿ— ನನ್ನ ವ್ಯಾಲ ತೊಗಲದ, ತೊಗಲಿನ ವ್ಯಾಲ ಬಣ್ಣಾ ಅದ, ಅದ್ರ ಖರೇ ಖರೇ ಮಾತಂದ್ರ, ನಾ ಬರೇ ಹೊಟ್ಟಿದ್ದೀನಿ. ಸುಡಗಾಡ ಕಟಿಗಿ ಹೊಟ್ಟಿದ್ದೀನಿ. ನನ್ಗ ಎನಾದ್ರು ಮಾಡಬೇಕಂತ ಯಾರಾದ್ರು ಕೈಮುಟ್ಟಿದ್ರ ನಾ ಹೊಟ್ಟು ಉದ್ರದ್ಹಾಂಗ ಉದರತೀನಿ, ಉದರಿ ಮಣ್ಣ ಪಾಲಾಗ್ತೀನಿ.

ಕ: ಬರೋಬರಿ ಅದ. ನೀ ಹೊಟ್ಟಿ ಹೌದು—ಆದರೂ ನಿನ್ನ ಈ ದೇಹ ಬೇಕಾಗಿಲ್ಲ. ಇದು ಕೆಲಸಕ್ಕ ಬರತದ, ನೀರ ಕಾಸಲಿಕ್ಕಿ ಬರತದ.

ಕಾ: ನೀ ಭಾಳ ಶ್ಯಾಣ್ಯಾ ಅಂತ ಕಾಣಸ್ತಿ.

ಕ: ಕಾಣಸಬೇಕ್ಯಾಕ, ನಾ ಇದ್ದೀನಿ.

ಶಾ: ಹ್ಯಾಂಗಿದ್ಬ ತೋರ್ಸು.

ಕ: ತೋರ್ಸತೀನಿ.

ಶಾ: ಹ್ಯಾಂಗ ತೋರ್ಸತಿ ?

ಕ: ನಡ್ದ ತೋರಸ್ತೀನಿ, ಕುಂತ ತೋರಸ್ತೀನಿ, ನಕ್ಕು ತೋರಸ್ತೀನಿ, ಅತ್ತ ತೋರಸ್ತೀನಿ, ಕುಣದ ತೋರಸ್ತೀನಿ, ಮಣ್ಣ ತೋರಸ್ತೀನಿ.

ಕಿ: ಇವೆಲ್ಲಾ ಮಾಡಿ ತೋರಸ್ದರ ಶ್ಯಾಣ್ಯಾ ಅಂತಾರೆನು ?

ಕ: ಶ್ಯಾಣೇರು ಮತ್ತೇನ ಮಾಡತ್ಯಾರ ?

ಕಿ: ಶ್ಯಾಣೇರು ಸತ್ತು ತೋರಸ್ತಾರ ತ್ಯಾಗ ಮಾಡತಾರ ಜೀಂವಾ ಬಲಿಕೊಡತಾರ, ಹಿಂಗ ಸಾಯ್ತಾರ, ಸತ್ತು ಶ್ಯಾಣೇರಂತ ಸಿದ್ಧಮಾಡಿ ತೋರಸ್ತಾರ.

ಕ: ಹಾಂಗಿದ್ರ, ನಾ ಸತ್ತನೂ ತೋರಸ್ತೀನಿ.

ಕಿ: ತೋರಸಂದ್ರ.

ಕ: ಏಕಾ ಏಕಿ ಹ್ಯಾಂಗ ಸಾಯಲಿ ?

ಶಾ: ಉರಲ ಹಾಯಕೊ, ವಿಷಾ ಕುಡಿ, ಮ್ಯಾಳಿಗಿ ಮಾಲಿಂದ ಜಿಗಿ, ಏನಾದ್ರ ಮಾಡು, ಆದ್ರ ಸತ್ತು ತೋರಿಸು.

ಕ: (ತನ್ನಷ್ಟಕ್ಕೆ ತಾನೆ—ಎದೆ ಮುಟ್ಟಿಕೊಂಡು) ಇದಕ ಉರಲ ಹಾಕದ್ರ, ವಿಷಾ ಕುಡಿಸ್ದ್ರ ಮಾಲಿಂದ ಕೆಳಕ ವಗದ್ರ ನಾ ಹ್ಯಾಂಗ ಸಾಯುಲಿ ?

ಕಿ: (ಕ ನ ಮಾತುಕೇಳಿ) ಅದು ಸತ್ರ, ನೀ ಸತ್ತ ಹಾಂಗೆ. ನೀ ಇದ್ಕ ಕೊಲ್ಲು. ಕೊಲ್ಲಿ ಶ್ಯಾಣ್ಯಾ ಅಂತ ಸಿದ್ಧಮಾಡು.

ಕ: ಮಾಳಿಗಿ ಮಾಲಿಂದ ಜಿಗಿ ಬೇಕಂದ್ರ ಈ ಮನೀಗಿ ಮಾಳಗೀನೇ ಇಲ್ಲ. ಮ್ಯಾಲ ಹತ್ತಬೇಕಂದ್ರ ಪಾವಟಿಗೇನೆ ಇಲ್ಲ. ವಿಷಾ ಕುಡೀಬೇಕಂದ್ರ ವಿಷಾ ತರಲಿಕ್ಕೆ ದುಡ್ಡಿಲ್ಲ. ಇನ್ನುಳಿದೊಂದೇ ಹಾದಿ. ಉರಲು ಹಾಯಕೊಂಡು ಸಾಯಬೇಕು. (ಶಾ ಗೆ) ನೀ ಹಗ್ಗಾ ತೊಗೊಂಡ ಬಾ ನಾ ಸಾಯ್ತೀನಿ.

(ಶಾ ಗೋಡೆಯ ಹತ್ತಿರ ಬಟ್ಟೆಹಾಕುವುದಕ್ಕೆ ಕಟ್ಟಿದ ಹಗ್ಗ ಬಿಚ್ಚಿಕೊಂಡು ತಂದು ಅದನ್ನು ಮೇಲೆ ಜಂತಿಗೆ ತೂಗು ಹಾಕುತ್ತಾನೆ. ನಂತರ ನೇಣಿನಂತೆ ಮಾಡಿ—ಕ ನ ಕೈಗೆ ಕೊಡುತ್ತ, ಸಮೀಪದ ಸ್ಟೂಲೊಂದನ್ನು ಮುಂದೆ ಸರಿಸುತ್ತಾನೆ.)

ಕ: (ಸ್ಟೂಲಿನ ಮೇಲೆ ಹತ್ತಿ) ಬರಾಬರಿ ಹಾಯಕೋತೀನಿ. ನಾ ಅಂಜಪುಕ್ಕಳಿ ಅಲ್ಲಾ, ನಾ ಶ್ಯಾಣ್ಯಾ ಆದಿನ. (ಕೊರಳಿಗೆ ಹಗ್ಗ ಸೇರಿಸಿಕೊಳ್ಳುತ್ತಾನೆ. ಕ ಮತ್ತು ಕಿ ಶಾ ನ ಎಡ ಬಲಕ್ಕೆ ಬಂದು ನಿಲ್ಲುತ್ತಾರೆ.) ಒಂದು, ಎರಡು, ಮೂರು, (ಎಂದು

ಸ್ಟೂಲಿಗೆ ಕಾಲಿನಿಂದ ಸರಿಸುತ್ತಾನೆ, ಅವನ ಭಾರ ತಾಳಲಾರದೆ ಹಗ್ಗ ಹರಿದು, ಕೆಳಗೆ ಬೀಳುತ್ತಾನೆ. ಯಾವ ಸದ್ದಿಲ್ಲದೆ ಹಾಗೆ ನೆಲದಮೇಲೆ ಬಿದ್ದಿರುತ್ತಾನೆ).

ಕಿ: (ಆನಂದದಿಂದ) ಸತ್ತಾ ಸತ್ತಾ ಶ್ಯಾಣ್ಯಾ ಮನಷಾ ಸತ್ತಾ (ಕುಳಿತು ಕನ ಎದೆಯ ಮೇಲೆ ಕಿವಿಯಿಟ್ಟು ನೋಡುತ್ತಾನೆ. ಕಾ ನಾಡಿ ಪರೀಕ್ಷೆ ಮಾಡುತ್ತಾನೆ. ನಂತರ ಅವನು ಸತ್ತಾನೆಂದು ಖಾತ್ರಿ ಮಾಡಿಕೊಂಡು ಪರಸ್ಪರ ಮುಖ ನೋಡಿ ಅಳುವುದಕ್ಕೆ ಪ್ರಾರಂಭಿಸುತ್ತಾರೆ—ಹಾಸ್ಯಾಸ್ಪದ ಅಳು.)

ಕಾ: (ಅಳುವುದನ್ನು ನಿಲ್ಲಿಸಿ) ಗಿಳಿಯು ಪಂಜರದೊಳಿಲ್ಲ ರಾಮಾ ರಾಮಾ ಗಿಳಿಯು ಪಂಜರದೊಳಿಲ್ಲ (ಎಂದು ಹಾಡುತ್ತಾನೆ, ಕಿ ದನಿಗೂಡಿಸುತ್ತಾನೆ. ಒಂದೆರಡು ನಿಮಿಷಗಳಾದ ನಂತರ ಹಾಡುತ್ತಲೆ 'ಕ' ನಿಧಾನವಾಗಿ ಏಳುತ್ತಾನೆ. ಕ ಮತ್ತು ಕಾ ಒಂದೇ ಸಾಲಿನಲ್ಲಿ ಕೂಡುತ್ತಾರೆ, ಕಿ ಅವರಿಬ್ಬರ ಹಿಂದೆ ನಿಲ್ಲುತ್ತಾನೆ. ಕ ಮತ್ತು ಕಾ ಗಿಳಿಯು ಪಂಜರದೊಳಿಲ್ಲ ಎಂದು ಹಾಡುವಾಗ ಕ ಹಿಂದೆ ನಿಂತು)— 'ರತ್ತೋ ರತ್ತೋ ರಾಯನ ಮಗಳೆ ಬಿತ್ತೋ ಬಿತ್ತೋ ಭೀಮನ ಮಗಳೆ'

(ಹಾಡುತ್ತಾನೆ. ನಂತರ ಕ್ರಮೇಣ ದನಿ ಕುಗ್ಗುತ್ತದೆ. ಎಲ್ಲರೂ ಹೆಣಗಳಂತೆ ನಿಶ್ಚಲವಾಗಿ ಬಿಡುತ್ತಾರೆ.)

(ತೆರೆ)

ಪಾತ್ರಗಳು :

ಹೆಣ್ಣು 1

ಹೆಣ್ಣು 2

ಹೆಣ್ಣು 3

ಹೆಣ್ಣು 4

ಗಂಡು 1 : ಪ್ರದೀಪ್
ಗಂಡು 2 : ಶ್ಯಾಮ್

ಗಂಡು 3

ರಂಗರಾಜ್

ಮೇಜರ್

ರಾಮಪ್ಪ

ಮಣಿ

ರಾಮು

ಕುಟ್ಟಿ

# ಪುನರ್ಜನ್ಮ

## ದೃಶ್ಯ : ೧

(ರಂಗರಾಜ್ ಅವರ ಮನೆಯಲ್ಲಿ ಪಾರ್ಟಿ)

(ಗೌಣ ಧ್ವನಿ: ಜನರ ಗುಜಗುಜು ಪಾರ್ಟಿ ಮಾತು ನಗು.

ಶಬ್ದ: ಲಘು ಸಂಗೀತ, ಜನರ ಓಡಾಟ, ಲೋಟಗಳ ತಟ್ಟಿಗಳ ಸದ್ದು, ಸೋಡ ಬಾಟ್ಲ್ ತೆಗೆಯುವ ಸದ್ದು ಸ್ವಲ್ಪ ದೂರದಲ್ಲಿ.

ಕೆಲವರು ಮಾತಾಡುತ್ತಾ ಮೈಕ್ ಹತ್ತಿರ ಬರುತ್ತಾರೆ, ದೂರ ಸರಿಯುತ್ತಾರೆ.)

ಹೆಣ್ಣು 1: ನಮ್ಮ ಮಕ್ಕಳೊಂದ್ರೆ ಒಂದು ತರಹಾಮ್ಮ. ತುಂಬಾ Love ಸಿಗುತ್ತೆ— ಒಳ್ಳೆ education ಕೊಡುಸ್ತೀವಿ. ಆದ್ರೆ ಅವರು ಅಷ್ಟು ದುಡ್ಡಿಟ್ಟಕೊಂಡು

ಹೆಣ್ಣು 2: ಅಯ್ಯೋ ಬಿಡ್ರಿ ದುಡ್ಡಿನಿಂದೇನು? ಸಾಯೋವಾಗ ಜೊತೇಲಿ ಬರುತ್ಯೆ? ದುಡ್ಡು ಮುಖ್ಯ ಅಲ್ಲ.

ಗಂಡು (ಪ್ರದೀಪ್) 1: ಆದ್ರೂ ಬಿಟ್ಟುಹೋಗೋಕೆ ಮನಸ್ಸೇ ಬರೋಲ್ಲ ಶ್ಯಾಮ್. ಇಷ್ಟು ವರ್ಷ ಸರ್ವೀಸ್ ಹಾಕಿ, ಇಷ್ಟು ವರ್ಷ ಸರ್ವೀಸ್ ಹಾಕಿ, ಕೆಲಸಾನ ಕೋಟು ಬಿಚ್ಚಿಹಾಕಿದ ಹಾಗೆ 'ಬಿಡೋಕಾಗುತ್ಯೆ, fashion' ಅಂತ.?

ಗಂಡು (ಶ್ಯಾಮ್) 2: ಅಯ್ಯೋ ಬಿಡಿ ಪ್ರದೀಪ್. ಅದು ನಿಮ್ಮ ಸ್ವಂತ ನಿರ್ಧಾರ. ಹ ಹ ಹ ಅದ್ರೂ ಆತ್ಮ ದೇಹಾನ್ನೇ ಬದಲಾಯಿಸುತ್ತಂತೆ, ನಾವು ಬಟ್ಟೆ ಬದಲಾಯಿಸಿದ ಹಾಗೆ. ನೀವು ಕೆಲಸಕ್ಕೆ ಅಂಟುಕೊಂಡಿದ್ದೀರಿ.

ಗಂಡು (ಪ್ರದೀಪ್): ನಿಮ್ಮದು ಯಾವತ್ತೂ ತಮಾಷೆ. ಏನು ರಂಗರಾಜ್ ಭಾರಿ ಪಾರ್ಟಿ ಮಾಡಿಸಿಬಿಟ್ರಿ. ಈ ವಯಸ್ಸಿನಲ್ಲೂ ವೈಭವದ ಹುಟ್ಟಿದ ಹಬ್ಬ ಮಾಡಿಸ್ತಿದೀರಿ.

ರಂಗರಾಜ್: ಸುಮ್ಮನೆ ಎಲ್ಲಾ ಸೇರಿಕೊಂಡು ಮಜಾ ಮಾಡೋಕೆ ಒಂದು ನೆವ ಅಷ್ಟೇ. ನೀವೇನು ಖಾಲಿ ಗ್ಲಾಸ್ ಹಿಡಕೊಂಡು ಸೀರಿಯಸ್ಸಾಗಿ ಮಾತಾಡ್ತಾ ನಿಂತುಬಿಟ್ಟರಿ? ಕೊಡಿ ಲೋಟಗಳಿಗೆ ಮತ್ತೆ ಜೀವ ತುಂಬಿಸಿಕೊಡ್ತೀನಿ.

ಶ್ಯಾಮ್: ಇರಲಿ. ನಾವೇ ಹೋಗ್ತೀವಿ. ಇವ್ರೇನೋ ಕೆಲಸ ಬಿಡೋದೋ ಬೇಡವೋ ಅಂತ ಯೋಚನೆ ಮಾಡ್ತಾ ಇದ್ದರು.

ಪ್ರದೀಪ್: ಅದಕ್ಕೆ ಇವರು ದೇಹ ಆತ್ಮಾಂತ ಹೋಲಿಸ್ತಿದ್ದರು. ಕೆಲಸ ಬಿಟ್ರೆ ತಿರಗಿ ಕೆಲಸ ಸಿಗೋದು ಅನುಮಾನ ಅಲ್ಲವಾ? ರಂಗರಾಜ್.

ಶ್ಯಾಮ್ : ಹ ಹ ಹ ಹಾಗೆ ಆತ್ಮಕ್ಕೆ ಇನ್ನೊಂದು ದೇಹ ಸಿಗೋದೂ ಅನುಮಾನ ಅಲ್ಲವೇನ್ರಿ, ಮೊದಲು ಆತ್ಮ ಇರೋದೇ ಅನುಮಾನ, ಸುಮ್ಮನೆ ತಮಾಷಗೆ.

ರಂಗರಾಜ್ : ಹಾಗೆಲ್ಲಾ ತಮಾಷೆ ಅನ್ನಬೇಡೀಪ್ಪ, ಈಚೆಗೆ ನನಗೆ ಆತ್ಮ, ಪುನರ್ಜನ್ಮ ಅನ್ನೋದೆಲ್ಲಾ ತಳ್ಳಿಹಾಕೋ ಹಾಗಿಲ್ಲ ಅಂತ ಅನ್ನಿಸುತ್ತೆ.

ಶ್ಯಾಮ್ : ಇದೀಗ ನಿಜವಾದ ತಮಾಷೆ. ಅಲ್ಲಾ ರಂಗರಾಜ್, ನೀವು ಒಬ್ಬ ಸೈನ್‌ಟಿಸ್ಟ್ ಆಗಿದ್ದುಕೊಂಡು.........

ಪ್ರದೀಪ್ : ಇದೆಲ್ಲಾ ನಂಬಿಕೆ ವಿಚಾರ. ವಿಜ್ಞಾನಕ್ಕೂ ಅದಕ್ಕೂ ಏನು ಸಂಬಂಧ. ಮೂಡಿ ಅವರ ಪುಸ್ತಕ ಓದಿದ್ದೀರಾ ?

ರಂಗರಾಜ್ : ನೋಡಿದ್ದೀನಿ. ಓದಿಲ್ಲ, ಓ, ಮೇಜರ್ ಬಂದ್ರು. ಬರ್ತೀನಿ. ಹಲೋ ಮೇಜರ್ ಬನ್ನಿ.

ಶ್ಯಾಮ್ : ಪ್ರದೀಪ್, ಇಲ್ಲಾ ನೀವು ಆಗಲೇ ತುಂಬಾ ಕುಡಿದಿದ್ದೀರಿ, ಅಥವಾ ಸಾಕಷ್ಟು ಕುಡಿದಿಲ್ಲ. ಎಲ್ಲಾ ವಿಷಯಾನೂ ಸೀರಿಯಸ್ಸಾಗಿ ತಗೋತೀರಿ. ಬನ್ನಿ ಲೋಟ ತುಂಬಿಸಿಕೊಳ್ಳೋಣ. (Fade out)

ರಂಗರಾಜ್ : ತುಂಬಾ thanks Major. ಆದ್ರೂ ನೀವು gift ಏನೂ ತರಬೇಕಿರಲಿಲ್ಲ.

ಮೇಜರ್ : ಹಾಗಂದ್ರೇನು. ಹುಟ್ಟಿದ ಹಬ್ಬ ಹೊಸ ವರ್ಷಕ್ಕೆ ನಾಂದಿ ಅಲ್ಲವೇ. ನಮಗೆ ಸೈನ್ಯದಲ್ಲಿದ್ದವರಿಗೆ ಮಾತ್ರ, ಪ್ರತಿ ದಿನ ಹೊಸ ಮನುಷ್ಯರಾಗಿ ಏಳ್ತೀವೆ. ನಮಗೆ ಅಲ್ಲಿ ನಿತ್ಯ ಹುಟ್ಟಿದ ಹಬ್ಬ. ಹ ಹ ಹ.

ರಂಗರಾಜ್ : ಹ ಹ ಹ ಅಂದರೇನು ? ಪ್ರತಿನಿತ್ಯ gift ಸಿಗೋದೋ ?

ಮೇಜರ್ : ಅರೇ ರಂಗರಾಜ್, ಜೀವಾನೇ gift ಆಗ. ಬದುಕಿರ್ತೀವಿ ಅನ್ನೋ ಭರವಸೆ ಇಲ್ಲದೇ ಇದ್ದಾಗ, ಸೂರ್ಯನ ಜೊತೆ ಬದುಕಿ ಎದ್ದರೆ ಅದೇ ಸಾಕು.

ರಂಗರಾಜ್ : ಅದಕ್ಕೇ ನೀವುಗಳು ಅಷ್ಟು ಖುಷಿಯಾಗಿರೋದು. ಅಲ್ಲವಾ ? ಅದಿರ್ಲಿ ಮೇಜರ್, ನಿಮಗೆ ಕುಡಿಯೋಕೆ ಏನು ಕೊಡಲಿ.

ಮೇಜರ್ : ಏನೂ ಬೇಡ. ನಾನು ಕುಡಿಯೋಲ್ಲ.

ರಂಗರಾಜ್ : ಇದೂ ಆಶ್ಚರ್ಯ. ಮಿಲಿಟರಿಯಲ್ಲಿದ್ದು.........

ಮೇಜರ್ : ತುಂಬಾ ಕುಡೀತಿದ್ದೆ. ಎಲ್ಲಾ ಬಿಟ್ಟುಬಿಟ್ಟಿದ್ದೀನಿ. ಬಿಟ್ಟಾಗ್ಲಿಂದ ನನಗೆ ಪುನರ್ಜನ್ಮವೇ ಆಗಿದೆ. ತುಂಬಾ ಆರೋಗ್ಯವಾಗಿದ್ದೀನಿ. ನನ್ನ ಲವಲವಿಕೆ ಹೆಚ್ಚಿದೆ. (Fade in)

ಹೆಣ್ಣು 1 : ಬನ್ನಿ, ಇಲ್ಲೆ ಕೂತಿದ್ದಾರೆ, ರಂಗರಾಜ್.

ಹೆಣ್ಣು 2 : ನಡೀರಿ, ಸ್ವಲ್ಪ ರೇಗಿಸೋಣ.

ಹೆಣ್ಣು 1, 2: ನಮಸ್ಕಾರ ಮೇಜರ್. Happy birth day ರಂಗರಾಜ್.

ಮೇಜರ್: ಓ ಹಲ್ಲೊ, ಹೇಗಿದ್ದೀರಿ.

ರಂಗರಾಜ್: Thanks.

ಹೆಣ್ಣು 1: ಏನ್ರೀ, ರಂಗರಾಜ್, ನೀವು ಪ್ರದೀಪ್ ಅವರನ್ನು ತುಂಬಾ ಕನ್‌ಫ್ಯೂಸ್ ಮಾಡ್ಬಿಟ್ಟಿದ್ದೀರಿ.

ರಂಗರಾಜ್: ಹೂಂ, ಇವತ್ತು ಯಾಕೋ, ಅವರಿಗೆ ಸ್ವಲ್ಪ ಬೇಗ ಏರಿಬಿಟ್ಟರೋ ಹಾಗಿದೆ.

ಹೆಣ್ಣು 2: ಹೂಂ, ಅದರಮೇಲೆ ನೀವು ಪುನರ್ಜನ್ಮ ಇರಬಹುದು ಅಂತ ಅಂದು ಬಿಟ್ಟಿರಂತೆ. ಅಲ್ಲಿ ಗೊಳೋಂತ ಭಾಷಣ ಹೊಡೀತಾ ಕೂತಿದ್ದಾರೆ.

ರಂಗರಾಜ್: ಯಾಕನ್ನಬಾರದು? ನನಗೇನೋ ಆತ್ಮ ಇಲ್ಲಾಂತನ್ನೊ ಧೈರ್ಯ ಕಳೆದು ಹೋಗಿದೆ.

ಹೆಣ್ಣು 1: ನಿಮಗೇನು ಅನ್ನಿಸುತ್ತೆ ಮೇಜರ್?

ಮೇಜರ್: ನಮ್ಮ ಜೀವನದಿಂದ ನಾವು ಯಾವುದರ ಬಗ್ಗೇನೂ ಖಚಿತವಾದ ಅಭಿಪ್ರಾಯ ಇಟ್ಟುಕೊಳ್ಳದೇ ಇರೋದು ಕಲಿತುಬಿಡ್ತೀವಿ. ನಾವು ಖಚಿತವಾಗಿರೋದು ಅಂದ್ರೆ ಎದ್ದ ತಕ್ಷಣ ಸ್ನಾನ ಮಾಡಬೇಕು, ಪ್ರತಿದಿನ ಕಸರತ್ತು ಮಾಡಬೇಕು; ದೊಡ್ಡವರ ಮಾತನ್ನು ಕೇಳಬೇಕು, ದೇಶ ಪ್ರೀತಿಸಬೇಕು ಅಷ್ಟೆ. ಅದಕ್ಕೂ ಕಾರಣ ಹುಡುಕೋಲ್ಲ, ಕೊಡೋಲ್ಲ. ನಾಳೆ ಬೆಳಗ್ಗೇ ಬಗ್ಗೇನೆ ಹೆಚ್ಚು ಯೋಚನೆ ಮಾಡದೇ ಇರೋರಿಗೆ ಸತ್ತ ಮೇಲೇನೂ ಅಂತ ಯಾಕೆ ಕೇಳಬೇಕು.

ರಂಗರಾಜ್: ನೀವು ಮಿಲಿಟರಿ ಜನ, ನಿಮಗೆ ಯುದ್ಧ ಅಲ್ಲದೇ ಬೇರೆ ಅನುಭವಾನೇ ಇಲ್ಲ ಅನ್ನೋ ತರಹ ಮಾತಾಡ್ತೀರಲ್ಲಾ, ಯಾಕೆ? ಯೂನಿಫಾರಂ ಹಾಕಿ, ನೀವು ಕೆಲಸದ ಮಟ್ಟಿಗೆ ಅನಾಮಿಕರಾಗಿರ್ತೀರಿ ನಿಜ. ಆದರೂ ನಿಮ್ಮ ಮನಸ್ಸನ್ನೇ, ನಿಮ್ಮ ವ್ಯಕ್ತಿತ್ವಾನ್ನೇ ಅಳಿಸಿ ಅದಕ್ಕೂ ಯೂನಿಫಾರಂ ಹಾಕ್ತೀರಲ್ಲಾ?

ಹೆಣ್ಣು 1: ಆತ್ಮಕ್ಕೇ ಅನ್ನಿ.

ಹೆಣ್ಣು 2: ಅವರ ವ್ಯಕ್ತಿತ್ವ ಹಾಗಿರಲಿ. ನೀವು Scientist ಆಗಿ, ಹೀಗೆಲ್ಲಾ ಆತ್ಮ, ಪುನರ್ಜನ್ಮ ಅಂತ ನಂಬ್ತೀರಿ ಅಂದ್ರೆ.........

ರಂಗರಾಜ್: ನಿಮಗೆ ಅದ್ರಲ್ಲಿ ನಂಬಿಕೆ ಇಲ್ಲಾಂತ ಆಯ್ತು.

ಹೆಣ್ಣು 2: ಸಾವಿನಾಚೆ ಜೀವನ ಇದೇ ಅಂತ ಯಾರು ನಮಗೆ ಹೇಳಬೇಕು? ಹಾಗೆ ಯಾರೋ ಸಾಯದಿರೋವರೇ ಹೇಳಿದ್ರೆ ಅದನ್ನ ಬುದ್ಧಿ ಜೀವಿಗಳಾದ ನೀವು ಹೇಗೆ ನಂಬ್ತೀರಿ? ನಿಮ್ಮ ಫಿಸಿಕ್ಸ್ ಅದರ ಬಗ್ಗೆ ಏನು ಹೇಳುತ್ತೆ?

ರಂಗರಾಜ್: ನೀವು ಹೇಳೋದು ಒಂದು ತರಹ ಸರಿ. ನಮ್ಮ ಫಿಸಿಕ್ಸ್‌ಗೆ ಅದು ಇನ್ನೂ ಎಟುಕೋಲ್ಲ. ಆದರೆ ನಾನು ಈಚೆಗೆ ಖುಷೀಗೆ ವಶೀಕರಣ ಪ್ರಯತ್ನಿಸುತ್ತಿದ್ದೀನಿ. ಅದರಿಂದ ನನ್ನ ಅನುಮಾನ......

ಹೆಣ್ಣು 1: ವಶೀಕರಣ ಅಂದ್ರೆ?

ಮೇಜರ್: Hypnosis, ಕನ್ನಡದವರಾಗಿ ನಿಮಗೆ ಕನ್ನಡ ಗೊತ್ತಿಲ್ಲವಲ್ಲಾ! ಆದರೆ ರಂಗರಾಜ್, ನಿಮಗೇನು ಅದ್ರಲ್ಲಿ ಆಸಕ್ತಿ ಬಂದುದ್ದು?

ರಂಗರಾಜ್: ನಿಜವಾಗಿ ನನಗೆ ಆಸಕ್ತಿ ಇದ್ದದ್ದು ಜ್ಞಾಪಕ ಶಕ್ತೀಲಿ. ನೋಡಿ, ವಶೀಕರಣದಲ್ಲಿದ್ದಾಗ, ವಶವಾದ ವ್ಯಕ್ತಿಗೆ ಹಳೇದೆಲ್ಲಾ ಜ್ಞಾಪಕ ಇರುತ್ತೆ. ಜಾಗ್ರತವಾಗಿರೋವಾಗ ಮರೆತಿದ್ದೆಲ್ಲಾ ಅಸ್ವಪ್ನಾವಸ್ಥೆಯಲ್ಲಿ ಜ್ಞಾಪಕ ಬರುತ್ತೆ.

ಹೆಣ್ಣು 1: ಹೌದಾ? ನೀವು ಈಗ hypnosis ಬೇರೆ ಮಾಡ್ತೀರ? ಇನ್ನು ಮೇಲೆ ನಿಮ್ಮ ಹತ್ತಿರ ಹುಷಾರಾಗಿರಬೇಕಪ್ಪಾ.

ರಂಗರಾಜ್: ಯಾಕೆ?

ಹೆಣ್ಣು 1: ಮತ್ತೆ ನಮ್ಮನ್ನು ವಶೀಕರಣ ಮಾಡಿಕೊಂಡು ನಮ್ಮ ಮನಸ್ಸಿನಲ್ಲಿರೋದೆಲ್ಲಾ ಬಯಲುಮಾಡಿಬಿಟ್ಟರೆ?

ಹೆಣ್ಣು 2: ಹೌದು, ರಂಗರಾಜ್, ವಶೀಕರಣಮಾಡಿ ಅವರ ಕೈಲಿ ಏನು ಬೇಕಾದ್ರೂ ಮಾಡಿಸಿಕೋಬಹುದಂತೆ ಹೌದಾ?

ಹೆಣ್ಣು 1: ಹೌದಾ?

ರಂಗರಾಜ್: ವಶೀಕರಣದ ಹಳೇ ಕಥನೇ ಇದೆಯಲ್ಲಾ. ಒಬ್ಬಾತ, ತನ್ನ ಶಿಷ್ಯರಿಗೆ ವಶೀಕರಣದ ಶಕ್ತಿ ತೋರಿಸುತ್ತಾ ಇದ್ದ. ಒಬ್ಬಳು ಮುದ್ದಾದ ಹುಡುಗೀನ ವಶ ಮಾಡಿಕೊಂಡಿದ್ದ. ಆಕೆ ಅವನು ಕೊಟ್ಟ ಆಜ್ಞೆಗಳನ್ನು ಪಾಲಿಸ್ತಾ ಇದ್ದಳು. ಏನೋ ಕೆಲಸ ಬಂದು ಅವನು ಹೊರಗೆ ಹೋದ. ಆಗ ಶಿಷ್ಯರಲ್ಲೊಬ್ಬ, ಇದೇ ಸಮಯಾಂತ ಅವನೂ ಒಂದು ಸಲಹೆ ಕೊಟ್ಟ. ಗಾಢಸ್ವಪ್ನಾವಸ್ಥೆಯಲ್ಲಿದ್ದ ಹುಡುಗಿ ಎದ್ದು ಅವನ ಕಪಾಳಕ್ಕೆ ಹೊಡೆದು ಹೊರಟಳು.

ಮೇಜರ್: ಹ ಹ ಹ, ಅವನು ಏನು ಹೇಳಿದ್ದಾಂತ ನಾನು ಊಹಿಸಿಕೋಬಲ್ಲೆ.

ಹೆಣ್ಣು 2: ಬನ್ರೀ, ಇವರ ಮಾತು ಯಾಕೋ ಅಪಾಯ. ಮುಂದೆ ಇನ್ನೇನು ಬರುತ್ತೋ? ನಾವು ಹೋಗಿ ಇನ್ನು ಊಟ ಬಡಿಸೋಕೆ ಸಹಾಯಮಾಡೋಣ.

ಮೇಜರ್: ಹ ಹ ಹ, ಚೆನ್ನಾಗಿ ಓಡಿಸಿದ್ರಿ ಅವರನ್ನ. ಹ ಹ ಹ, ಆದರೆ ವಶೀಕರಣ, ಪುನರ್ಜನ್ಮ!

ರಂಗರಾಜ್: ಆಗಲೇ ಹೇಳಿದೆನಲ್ಲಾ, ಜ್ಞಾಪಕಶಕ್ತೀನ ಅರ್ಥಮಾಡಿಕೊಳ್ಳೋ ಪ್ರಯತ್ನ. ಆದರೆ ಈಗ ನನ್ನ ಬಳಿ ಬರ್‍ತಿರೊ ವ್ಯಕ್ತಿ ಅದನ್ನ ಎಳೆದುಕೊಂಡು ಹೋಗಿ ನನ್ನ ಸಾವಿನಾಚೆ ಕರೆದುಕೊಂಡು ಹೋಗಿದ್ದಾನೆ.

ಮೇಜರ್: ಒಹೋ, ಹಾಗೋ, ಅದರಿಂದ ನಿಮಗೆ ನಂಬಿಕೆ ಬಂತು.

ರಂಗರಾಜ್: ನಂಬಿಕೆ ಅಂದರೆ ನಂಬಿಕೆ ಅಲ್ಲ, ಆದರೆ ಅದರ ಬಗ್ಗೆ ಆಲೋಚನೆ ಮಾಡ್ತಿದ್ದೀನಿ. ಆಸಕ್ತಿ ಹುಟ್ಟಿದೆ.

(ಊಟ ಬಡಿಸುವ ತಟ್ಟೆ, ಲೋಟಗಳ ಶಬ್ದ)

ಹೆಣ್ಣು 1: ತಗೊಳ್ಳಿ ಊಟ.

ಮೇಜರ್: ಥ್ಯಾಂಕ್ಸ್.

ಹೆಣ್ಣು 1: ತಗೊಳ್ಳಿ, ನೀರು ತರ್‍ತೀನಿ.

ಮೇಜರ್: ಅರೇ, ರಂಗರಾಜ್ ನೀವು ಪುನರ್ಜನ್ಮ ಅಂತ ಹೇಳಿ ಈಗ ಕೋಳಿ ಪಲಾವ್‌ನಲ್ಲಿ ಮೊಟ್ಟೆ ತಿನ್ನೋದು ಕಷ್ಟ ಆಗ್ತಿದೆ ನೋಡಿ, ಹ ಹ ಹ.

ರಂಗರಾಜ್: ಹ ಹ ಹ, ಒಳ್ಳೇ ಜೋಕು. ಆದ್ರೆ ಅದೇ ಕೋಳಿ ಅದೇ ಮೊಟ್ಟೇಲಿ ಅಂತ ಹೇಗೆ ಹೇಳೋದು? ಹ ಹ ಹ.

ಮೇಜರ್: ಹ ಹ ಹ, ಆದಿರ್‍ಲಿ, ರಂಗರಾಜ್ ನೀವು ನನ್ನ ಕೆರಳಿಸಿಬಿಟ್ರೆ. ಈ ವ್ಯಕ್ತಿ ವಿಷಯ ಏನು?

ರಂಗರಾಜ್: ಅವನು ಸಾಧಾರಣ ಮನುಷ್ಯ. ರಾಮಪ್ಪ ಅಂತ. ಇಲ್ಲೇ ಒಂದು ಆಫೀಸಿನಲ್ಲಿ ಗುಮಾಸ್ತ ಆಗಿದ್ದಾನೆ. ಆದರೆ ಅವನ್ನ ವಶೀಕರಣ ಮಾಡಿ ಅವನ ಜ್ಞಾಪಕಶಕ್ತೀನ ಕೆರಳಿಸಿದ್ರೆ, ತನ್ನ ಬಾಲ್ಯಾವಸ್ಥೆ ಎಲ್ಲಾ ಜ್ಞಾಪಿಸಿಕೊಂಡು, ಅಲ್ಲಿಂದ ಹಿಂದಕ್ಕೆ ಕಳಿಸಿದ್ರೆ ಅವನ ಹುಟ್ಟನ್ನೇ ಜ್ಞಾಪಿಸಿಕೊಂಡ.

ಮೇಜರ್: ತನ್ನ ಹುಟ್ಟನ್ನೇ! ಆಶ್ಚರ್ಯ, ಅಲ್ಲಿಂದ ಹಿಂದಕ್ಕೆ ಕಳಿಸಿದ್ರೆ?

ರಂಗರಾಜ್: ನನಗೂ ಅದೇ ಪ್ರಶ್ನೆ ಬಂತು.

ಮೇಜರ್: ಇನ್ನೂ ಹಿಂದಕ್ಕೆ ಕಳಿಸಿದ್ರಾ?

ರಂಗರಾಜ್: ಹೂಂ, ಆಗಲೇ ಬಂದದ್ದು ಪಜೀತಿ. ಹುಟ್ಟನಿಂದ ಹಿಂದಕ್ಕೆ ಹೋದರೆ ಅವನು ಸಾವನ್ನು ವರ್ಣಿಸಿದ. ಅಲ್ಲಿಂದ ಹಿಂದಕ್ಕೆ ಮಲಬಾರಿನ ಯಾವದೋ ಊರಿನಲ್ಲಿ ಪೂಜಾರೀನೋ ಏನೋ, ಕೋಮರಂ ಗೋವಿಂದನ್ ನಾಯರ್ ತನ್ನ ಹೆಸರು ಅಂತ ಹೇಳಿ ಅವನ ವಿಷಯ ಹೇಳಿದ.

ಮೇಜರ್: ಕೋಮರಂ, ಅಂದರೆ ಪೂಜಾರಿಯಲ್ಲ, ಅವನೊಬ್ಬ ಭಕ್ತ. ಕತ್ತಿಯಲ್ಲಿ ತನ್ನ ಹಣೆಗೆ ಹೊಡೆದುಕೊಂಡು ಕುಣೀತಾನೆ. ಅವನ ಮೈಮೇಲೆ ದೇವರು ಬಂದಹಾಗೆ ಆಗಿ ಶಾಸ್ತ್ರ ಗೀಸ್ತ್ರ ಹೇಳ್ತಾನೆ.

ರಂಗರಾಜ್: ಕೇರಳದ ಬಗ್ಗೆ ನಿಮಗೆ ಹೇಗೆ ಅಷ್ಟೊಂದು ಗೊತ್ತು?

ಮೇಜರ್: ಅರೇ, ನಾನು ಕೇರಳದಲ್ಲಿ ಎಂಟು ವರ್ಷ ಕಳೆದನಲ್ಲಾ. ಚೂರುಪಾರು ಮಲೆಯಾಳಂ ಕೂಡ ಮಾತಾಡಬಲ್ಲೆ. ಅದಿರಲಿ, ರಾಮಪ್ಪನ ಅಥವಾ ಕೋಮರಂ ಗೋವಿಂದನ್ ನಾಯರ್ ಊರು ಯಾವುದೂಂತ ಹೇಳ್ತಾನೆ?

ರಂಗರಾಜ್: ಅದು ಯಾವುದೋ ನಿಲಂಬೂರ್ ಹತ್ತಿರ ತುವ್ವೂರ್ ಹಳ್ಳಿ ಅಂತಾನೆ.

ಮೇಜರ್: ನಿಲಂಬೂರು ಅಂದ್ರೆ, ಇಲ್ಲೇ ಬೆಟ್ಟ ಹತ್ತಿ ಇಳಿದರೆ ಸಿಗುತ್ತೆ, ಕೊಚಿನ್‌ಗೆ ಹೊಗೋ ದಾರಿ. ಆ ಆಸುಪಾಸೆಲ್ಲಾ ನನಗೆ ಗೊತ್ತು. ನಮ್ಮ ಸ್ನೇಹಿತರಿದ್ದಾರೆ ಅಲ್ಲಿ.

ರಂಗರಾಜ್: ಹಾಗಾದ್ರೆ ನೀವು ನನಗೆ ಸಹಾಯ ಮಾಡಬಹುದು.

ಮೇಜರ್: ಸಹಾಯ ಅಂದ್ರೆ?

ರಂಗರಾಜ್: ನಮ್ಮ ರಾಮಪ್ಪನ್ನ ಮತ್ತೆ ವಶೀಕರಣಕ್ಕೆ ಕರೆದಾಗ ನೀವೂ ದಯ ವಿಟ್ಟು ಬನ್ನಿ.

ಮೇಜರ್: ಖಂಡಿತಾ ಬರುತ್ತೇನೆ. ನನಗಂತೂ, ಸರ್ವೀಸ್ ಬಿಟ್ಟಮೇಲೆ ಯಾವತ್ತೂ ಇಷ್ಟು ಹುಮ್ಮಸ್ಸು ಬಂದಿರಲಿಲ್ಲ.

ರಂಗರಾಜ್: ಅವನು ಕೊಡೋ ವರ್ಣನೇನ ಸರಿಯೋ ಅಲ್ಲವೇ ಅಂತ ನೋಡ ಬಹುದು. ನನಗದೇ ಪಜೀತಿ. ಅವನು ನಿಜ ಹೇಳ್ತಿದ್ದಾನೋ ಸುಳ್ಳು ಹೇಳ್ತಿ ದಾನೋ ತಿಳಿಯೋಲ್ಲ. ಪುನರ್ಜನ್ಮದ ಪ್ರಶ್ನೆ ಇರಲಿ ಅವನು ಕೊಡೋ ವಿವರಗಳು ಸರಿಯೋ ಅಲ್ಲವೇ ಮೊದಲು ನೋಡಬೇಕು. ಅಲ್ಲದೇ ಇದ್ದರೆ ಯಾವದೋ ಕಾಗಕ್ಕ ಗುಬ್ಬಕ್ಕನ ಕಥೆ ಕಟ್ತಿರಬಹುದು.

ಮೇಜರ್: ನಾನು ಬರ್ತಿನಿ. ನಾನು ನಿಮಗೆ ಸಹಾಯ ಮಾಡೋದಿರಲಿ. ನನಗೇ ನೋಡಬೇಕು ಅನ್ನಿಸ್ತಿದೆ.

ರಂಗರಾಜ್: ಬನ್ನಿ. ನಮ್ಮ ಮುಂದಿನ ಬೈಠಕ್ ಸೋಮವಾರ ಸಂಜೆ 7 ಗಂಟೆಗೆ.

ಹೆಣ್ಣು 3: ಏನ್ರಿ, ನೀವು? ಇನ್ನೂ ಐಸ್‌ಕ್ರೀಂ ತಗೊಂಡಿಲ್ಲವೇ? ಬನ್ನಿ ಮೇಜರ್.

ಮೇಜರ್: ಹೂಂ, ಬರ್ತೀನಿ, Mrs. ರಂಗರಾಜ್, ಊಟ ಮಾತ್ರ ಭರ್ಜರಿಯಾ ಗಿತ್ತು. ಅದರಮೇಲೆ ನಿಮ್ಮ ರಂಗರಾಜ್ ಮಾತಿನ ಒಗ್ಗರಣೆ. ಅಹಾಹ.
(ಜನರ ಗುಜು ಗುಜು, ಖುಷಿ ಹೆಚ್ಚು. ಅವ್ರವ್ರಲ್ಲೆ ಗುಂಪು ಮಾಡಿಕೊಳ್ಳುತ್ತಿದ್ದಾರೆ).

ಹೆಣ್ಣು 3: ಯಾರಾದ್ರೂ ಹಾಡು ಹೇಳ್ರಿ.

ಹೆಣ್ಣು 2: ನೀವು ಶುರು ಮಾಡ್ರಿ.

ಗಂಡು 3: (ಹಾಡಲು ಪ್ರಾರಂಭಿಸುತ್ತಾರೆ).—ಗಂಗಮ್ಮಾ 'ರಾಜಾ ನನ್ನ ರಾಜ' ಚಿತ್ರದ ಹಾಡು).

(ವಿಲ್ಲು Bridge Music ಕೇರಳದ ಒಂದು ವಾದ್ಯ—ಬಿಲ್ಲಿನಂತೆ ಇರುತ್ತದೆ).

### ದೃಶ್ಯ ೨

(ರಂಗರಾಜ್ ಕೋಣೆ, ಬಾಗಿಲು ಹಾಕಿದೆ.)

ಮೇಜರ್: ರಂಗರಾಜ್, ರಂಗರಾಜ್.

ರಂಗರಾಜ್: (ಒಳಗಿನಿಂದ) ಬನ್ನಿ, ಮೇಜರ್.

(ಒಳಗಿನಿಂದ ಗಿಟಾರ್ ನುಡಿಸುತ್ತಿರುವ ಸದ್ದು. ಬಾಗಿಲು ತಟ್ಟುವ ಸದ್ದು. ಬಾಗಿಲು ತೆಗೆದ ಸದ್ದು. ಸಂಗೀತ ಜೋರಾಗಿ ಕೇಳುತ್ತದೆ. ಬಾಗಿಲು ತೆಗೆಯುತ್ತಿದ್ದಂತೆ ರೇಡಿಯೋ ಅನೌನ್ಸ್‌ಮೆಂಟ್ ಕೇಳುತ್ತದೆ ...'ನಿಲಯ ಅಂಟೋನಿನಿಯವರ Last year at Marienbad ಚಿತ್ರ ಪರಿಚಯ ಮುಗಿಯಿತು. ಇನ್ನು ಮುಂದೆ ದಶಾವತಾರ ಕಾಲಕ್ಷೇಪದ ಆರನೆಯ ಭಾಗ. ಮಾಡುವವರು.........'

ರೇಡಿಯೋ ನಿಲ್ಲಿಸುತ್ತಾನೆ.

ಇಲ್ಲಿಂದ ಮುಂದಕ್ಕೆ ರಂಗರಾಜ್ ಗಿಟಾರ್ ನುಡಿಸುತ್ತಿರುತ್ತಾನೆ. ನಿಲ್ಲಿಸುತ್ತಾನೆ. ತನ್ನ ಮಾತುಗಳಿಗೆ ತಾನೇ Background score ಕೊಟ್ಟ ಹಾಗೆ.)

ಮೇಜರ್: Disturb ಮಾಡ್ಲಿಲ್ಲ ತಾನೆ?

ರಂಗರಾಜ್: ಇಲ್ಲ ಬನ್ನಿ. ನಾನು ನಿಮಗಾಗಿಯೇ ಕಾಯುತ್ತಿದ್ದೆ. ಇನ್ನೇನು ರಾಮಪ್ಪ ಬರಬೇಕು. ಸುಮ್ಮನೆ ರೇಡಿಯೋ ಹಾಕಿದ್ದೆ. ಸ್ವಾರಸ್ಯವಾಗಿತ್ತು. ಕೇಳ್ತಾ ಕೂತೆ.

ಮೇಜರ್: ಸಂಗೀತ ಬೇರೆ ಅಭ್ಯಾಸ ಮಾಡ್ತಿರೊ ಹಾಗಿದೆ?

ರಂಗರಾಜ್: ಅಭ್ಯಾಸಾಂತ ಏನೂ ಅಲ್ಲ. ಚಟ ತೀರಿಸ್ಕೊಳ್ಳೋದು. ಈಗ ಉಪಯೋಗಕ್ಕೆ ಬರ್‍ತಿದೆ.

ಮೇಜರ್: ಈಗ ರಾಮಪ್ಪನ ಬಗ್ಗೆ ನಿಮ್ಮ ಅಭಿಪ್ರಾಯ ಏನು?

ರಂಗರಾಜ್: ಹೇಳೋದು ಕಷ್ಟ, ಮೇಜರ್. ಈಗ ನೋಡೋಣ, ಅವನು ಹೇಳ್ತಿರೋದ್ರಲ್ಲಿ ನಿಜಾಂಶ ಎಷ್ಟು ಇದೇಂತ. ಅವನು ಕೊಡೋ ವಿವರಗಳು ಸರಿಯಾದರೂ ಏನೂ ಖಚಿತವಾಗಿ ಹೇಳೋದು ಕಷ್ಟ.

ಮೇಜರ್: ಯಾಕೆ? ವಿವರ ಸರಿಯಾದ ಮೇಲೆ.........

ರಂಗರಾಜ್: ವಿವರಗಳು ಅವನ ಸ್ವಂತ ಅನುಭವದಿಂದ ಬಂದಿರಬಹುದು. ಕೆಲವು ಸಲ ನಮ್ಮ ಮನಸ್ಸಿನಲ್ಲಿ ನಮ್ಮ ಅನುಭವಗಳು ಬಣ್ಣ ಬದಲಾಯಿಸುತ್ತವೆ ಉತ್ಪ್ರೇಕ್ಷೆ ಆಗುತ್ತವೆ. ಕಲಸಿಕೊಂಡು ಬಿಡುತ್ತವೆ. ಹಾಗಿದ್ರೆ......

ಮೇಜರ್: ಅಂದ್ರೆ, ನೀವನ್ನೋದು, ತನ್ನ ಇನ್ನು ಯಾವದೋ ಅನುಭವಕ್ಕೆ ಮಸಾಲೆ ಹಾಕಿ ಹೀಗೆ ಮಾಡಬಹುದು ಅಂತಲೇ ?

ರಂಗರಾಜ್: ಹೂಂ, ಕೆಲವು ಸಲ ತನ್ನ ಸ್ವಂತ ಅನುಭವಾನೂ ಬೇಡ. ಯಾರೋ ಹೇಳಿದ್ದು, ಎಲ್ಲೊ ಓದಿದ್ದು, ನಮ್ಮ ಮನಸ್ಸಿಗೆ ಎಷ್ಟು ಚೆನ್ನಾಗಿ ತಟ್ಟುತ್ತೇಂತಂದರೆ, ಅದು ನಮಗೇ ನಡೆದದ್ದೇನೋ ಅನ್ನಿಸಿಬಿಡುತ್ತೆ.

ಮೇಜರ್: ಹೌದೌದು, ನನಗೂ ಎಷ್ಟೋ ಸಲ, ನಾನು ಓದಿದ್ದು ಯಾವುದು, ನೋಡಿದ್ದು ಯಾವುದೂಂತ ತಿಳಿಯೋದು ಕಷ್ಟ.

ರಂಗರಾಜ್: ಹೌದು. ಈ ತರಹ ಹಳೇ ಜನ್ಮದ ವಾಸನೆ ಕಥೆಗಳು ಬಹಳ ಕೇಳಿ ಬಂದಿವೆ. ಯಾವುದರಲ್ಲೂ ಖಚಿತವಾಗಿ ಏನೂ ತಿಳಿದಿಲ್ಲ.

ಮೇಜರ್: ಹಾಗೆ ಹಳೇ ಜನ್ಮದ ಕಥೆ ಹೇಳಿದ್ರೆ, ಹೋಗಿ ನೋಡಿ ಹಿಂದೆ ಇಂಥವರು ಇದ್ದರೇ ಅಂತ ಹುಡುಕಿದ್ರೆ ಗೊತ್ತಾಗಬೇಕಲ್ಲ.

ರಂಗರಾಜ್: ಹೂಂ, ಗೊತ್ತಾಗಬಹುದು. ಕೆಲವು ಸಲ ಅವರು ಕೊಡೋ ವಿವರ ಎಲ್ಲಾ ಪೂರ್ತಿ ಸರಿಯಾದರೂ, ಕಷ್ಟವಾಗಿದೆ. ಬಹಳ ಕಥೆಗಳಿವೆ, ಈ ತರಹ.

ಮೇಜರ್: ಹೂಂ, ನಮ್ಮ ದೇಶದಲ್ಲಂತೂ ಬಹಳಾನೇ ಇರಬೇಕಲ್ಲವೆ ? ನಾನು ಉತ್ತರದಲ್ಲಿದ್ದಾಗ ಕೇಳ್ತಿದ್ದೆ.

ರಂಗರಾಜ್: ಹಿಂದೆ ಅವರು ಇದನ್ನು ಅಧ್ಯಯನಾನೂ ಮಾಡಹೊರಟರು. ಆದರೆ ತುಂಬಾ ಊಹಾಪೋಹ ಬೆರತು ಹೋಗುತ್ತೇಂತ ಬಿಟ್ಟುಬಿಟ್ಟರು.

ಮೇಜರ್: ಬೇರೆ ದೇಶದಲ್ಲೂ ಇವೆಯಾ ?

(ಬಾಗಿಲು ತಟ್ಟುತ್ತದೆ. ಬಾಗಿಲು ತೆಗೆಯುತ್ತದೆ. ಮುಚ್ಚುತ್ತದೆ.)

ರಂಗರಾಜ್: ಹೂಂ, ಅಲ್ಲೂ ಬೇಕಾದಷ್ಟು ಇವೆ. ಯಾಕೆ? ಹಿಂದೆ ಮೋರಿ ಬರ್ನ್‌ಸ್ಟೈನ್ ಒಬ್ಬರ ಕಥೆ.........ಬನ್ನಿ, ಬನ್ನಿ ರಾಮಪ್ಪ. ಸರಿಯಾದ ಟೈಂಗೆ ಬಂದಿದ್ದೀರಿ. ಇವರು ನನ್ನ ಸ್ನೇಹಿತರು ಮೇಜರ್ ಗುರು. ಈವತ್ತು ಇವರೂ ಇರ್ತಾರೆ. ಪರವಾಗಿಲ್ಲತಾನೆ ?

ರಾಮಪ್ಪ: ಓ, ನನಗೇನು ಸಾರ್? ನಿಮ್ಮಿಷ್ಟದಂತೆ ನಾನು ಮಾಡ್ತೀನೀಂತ ಮೊದಲೇ ಒಪ್ಪಿಕೊಂಡಿದ್ದೇನೆ. ನನಗೆ ನೀವು ಕೊಡೋದು ಕೊಟ್ರೆ ಸರಿ. ನಿಮ್ಮ ವಶೀಕರಣದಿಂದ ನನಗೇನೂ ಕಷ್ಟ ಇಲ್ಲ. ಹಾಗೆ ನೋಡಿದ್ರೆ ಇಲ್ಲಿ ಬರೋಕೆ ಶುರು ಮಾಡಿದಾಗಿನಿಂದ ನನಗೆ ಚೆನ್ನಾಗಿ ನಿದ್ದೆ ಬರುತ್ತೆ.

ಮೇಜರ್: ರಾಮಪ್ಪನವರೇ, ನೀವು ಕೇರಳದ ಕಡೆ ಯಾವಾಗಾದ್ರೂ ಇದ್ದಿರಾ ? ನಿಮ್ಮನ್ನು ಎಲ್ಲೋ ನೋಡಿದ ಹಾಗೆ ಇದೆ.

ರಾಮಪ್ಪ: ಇಲ್ಲ ಸಾರ್, ಮೈಸೂರು ಸ್ಟೇಟ್ ಬಿಟ್ಟು ಬೇರೆ ಎಲ್ಲೂ ಹೋಗಿಲ್ಲ.

ಮೇಜರ್: ಮಲಯಾಳಿಂ ಪರಯೂಂ ಪಟ್ಮೋ ?

ರಾಮಪ್ಪ: ಕ್ಷಮಿಸ್ಸಿ, ಸಾರ್, ನನಗೆ ತಮಿಳು ತಿಳಿಯೋದಿಲ್ಲ.

ಮೇಜರ್: ಕ್ಷಮಿಸ್ಸಿ, ನನ್ನದೇ ತಪ್ಪು. ನಿಮಗೆ ಮಲಯಾಳಂ, ಅದು ಮಲಯಾಳಿ, ತಮಿಳಲ್ಲ ಹೇಗೆ ಗೊತ್ತಿದ್ದೀತು ?

ರಾಮಪ್ಪ: ಪರವಾಯಿಲ್ಲ ಸಾರ್. ಅದರೆ ನಾನು ಹೆಚ್ಚು ಓದಿಲ್ಲ. ನಮ್ಮ ನೆಂಟರ ಸಹಾಯದಿಂದ ಕೆಲಸ ಸಿಕ್ಕಿತು. ಬರೋದ್ರಲ್ಲಿ ಸಂಸಾರ ಸಾಗುತ್ತೆ. ಎಲ್ಲೂ ಹೋಗಿಲ್ಲ.

ಮೇಜರ್: ನಿಮ್ಮ ವಯಸ್ಸೆಷ್ಟು ರಾಮಪ್ಪ ?

ರಾಮಪ್ಪ: ನಲವತ್ತು ವರ್ಷ ಸಾರ್.

ರಂಗರಾಜ್: ರಾಮಪ್ಪನವರೇ, ನೀವು ರೆಡೀನಾ ? ಕಾಫಿ ಏನಾದ್ರೂ ತಗೋತೀರಾ ?

ರಾಮಪ್ಪ: ಬೇಡಿ ಸಾರ್, ಮುಗಿಸಿಕೊಂಡೆ ಬಂದೆ.

ರಂಗರಾಜ್: ರೆಡಿಯಾದ್ರೆ ಬನ್ನಿ ಮಲಗಿಕೊಳ್ಳಿ. ಮೇಜರ್, ಈ ದೀಪ ಆರಿಸಿ, ಕಡಿಮೆ ದೀಪ ಹಾಕಿಕೋತೀನಿ. ಪರವಾಗಿಲ್ಲ ತಾನೆ ?

ಮೇಜರ್: ಖಂಡಿತ ರಂಗರಾಜ್, ನಾನು ಬಂದಿರೋದು ಅದಕ್ಕೆ ಅಲ್ಲವೇ ?

ರಂಗರಾಜ್: ನೀವು ಅಲ್ಲಿ ಕೂತುಕೊಳ್ಳಿ ಮೇಜರ್.

ಮೇಜರ್: Thank you ನನ್ನ ಬಗ್ಗೆ ನೀವು ಯಾಕೆ ಯೋಜನೆ ಮಾಡ್ತೀರಿ ?

(ವಶೀಕರಣ ಸಮಯದಲ್ಲಿ ಗಿಟಾರ್ ಒಂದು ಏಕತಾನವನ್ನು ಏಕ ಲಯದಲ್ಲಿ ನುಡಿಯುತ್ತದೆ. ಅದೂ ವಶೀಕರಣ ತಂತ್ರದಲ್ಲಿ ಸಹಾಯವಾಗುತ್ತದೆ.)

ರಂಗರಾಜ್: ರಾಮಪ್ಪ ಆರಾಮಾಗಿ ಮಲಗಿದ್ದಿರಿ ತಾನೆ ? ಕೈ ಕಾಲು ಸಡಿಲ ಬಿಡಿ. ಹಾಂ, ಹಾಗೆ. ಈಗ ನನ್ನ ಮಾತು ಕೇಳ್ತಾ ಇದೆ ತಾನೆ ? ಈಗ ದೀರ್ಘವಾಗಿ ಉಸಿರು ತಗೊಳ್ಳಿ. ಹಾಂ ಉಸಿರು ತೆಗೆದುಕೊಳ್ಳಿ, ದೀರ್ಘವಾಗಿ. ಈಗ ಉಸಿರು ಬಿಡಿ. ಒಳಗೆ, ಹೊರಗೆ, ಒಳಗೆ, ಹೊರಗೆ, ಹಾಗೆ ಆರಾಮವಾಗಿ ಮಲಗಿ. ಈಗ. ಹೂಂ. ದೀರ್ಘವಾಗಿ ಉಸಿರು ತಗೊಳ್ಳಿ. ಬಿಡಿ. ಆರಾಮವಾಗಿ ಮಲಗಿ. ಆರಾಮವಾಗಿ. ಈಗ ನನ್ನ ಮಾತು ಕೇಳ್ತಿದೆಯಾ ?

ರಾಮಪ್ಪ: ಕೇಳ್ಸೈತೆ. ಚೆನ್ನಾಗಿ ಕೇಳ್ಸೈತೆ.

ರಂಗರಾಜ್: ಹಾಗೆ ಕಣ್ಣು ಮುಚ್ಚಿ ಮಲಗಿ. ಆರಾಮವಾಗಿ. ನನ್ನ ಮಾತಲ್ಲದೆ ಇನ್ನೇನು ಕೇಳುತ್ತೆ ?

ರಾಮಪ್ಪ: ಇನ್ನೇನೂ ಕೇಳಲ್ಲ.

ರಂಗರಾಜ್: ಭೇಷ್. ಈಗ ಹಾಗೇ ಆರಾಮವಾಗಿ ಮಲಗಿ ನಿಧಾನವಾಗಿ ಮೈ ಕೈ ಎಲ್ಲಾ ಸಡಿಲ ಬಿಡಿ. ಆರಾಮವಾಗಿ. ಈಗ ನಿಮ್ಮ ಕಾಲೆಲ್ಲಾ ಸಡಿಲ, ಆರಾಮ,

ಮಂಡಿ ಸಡಿಲ. ಹಾಗೆ ದೀರ್ಘವಾಗಿ ಉಸಿರು ಬಿಡಿ. ತೊಡೆ ಎಲ್ಲಾ ಸಡಿಲ ಸೊಂಟ ಹಾಗೇ, ಆರಾಮವಾಗಿ ಮಲಗಿ. ಕೈ ಎಲ್ಲಾ ಸಡಿಲ ಹೊಟ್ಟೆ ಸಡಿಲ ಎದೆ ಎಲ್ಲಾ ಹಾಗೆ. ಹಾಗೇ ಆರಾಮ. ಈಗ ನಿಮ್ಮ ಮೈ ಎಲ್ಲಾ ಹಗುರ. ಇನ್ನು ನಿಧಾನವಾಗಿ ಹತ್ತರ ತನಕ ಎಣಿಸಿ. ಹತ್ತರ ಹೊತ್ತಿಗೆ ನಿಮಗೆ ನಿದ್ದೆ. ಆರಾಮ, ದೀರ್ಘವಾಗಿ ಉಸಿರು ಎಳೆಯಿರಿ. ಆರಾಮ. ಆರಾಮ. ಎಣಿಸಿ, ನಿಧಾನ.

ರಾಮಪ್ಪ: ಒಂದು... ಎರಡು... ಮೂರು...

ರಂಗರಾಜ್: ಆರಾಮ... ಆರಾಮ...

ರಾಮಪ್ಪ: ನಾಕು... ಐದು...

ರಂಗರಾಜ್: ಈಗ ನಿಮಗೆ ನಿದ್ದೆ ಬರ್ತಾ ಇದೆ. ಆರಾಮ... ಆರಾಮ...

ರಾಮಪ್ಪ: ಆರು... ಏಳು...

ರಂಗರಾಜ್: ನಿದ್ದೆ, ಒಳ್ಳೆ ನಿದ್ದೆ ಬರ್ತಿದೆ. ತುಂಬಾ ನಿದ್ದೆ.

ರಾಮಪ್ಪ: ಎಂಟು... ಒಂಬ...

ರಂಗರಾಜ್: ಚೆನ್ನಾಗಿ ನಿದ್ದೆ ಮಾಡ್ತಿದೀರಿ. ಆರಾಮ... ಆರಾಮ... ಈಗ ನನ್ನ ಮಾತು ಕೇಳ್ತಿದೆಯಾ?

ರಾಮಪ್ಪ: ಎಲ್ಲೋ ದೂರ್ದಾಗ ಮಾತಾಡ್ತಿದ್ದಂಗೆ ಕೇಳ್ತದೆ. ಬಾವಿ ಒಳಗಿಂದ.

ರಂಗರಾಜ್: ಆರಾಮ ಮಲಗಿ. ನಿದ್ದೆ ಚೆನ್ನಾಗಿ ಬರುತ್ತೆ. ಆರಾಮ...... ಆರಾಮ. ಈಗ ಒಳ್ಳೆ ನಿದ್ದೆ ಬಂದಿದೆ. ನಿಮಗೆ ಇಲ್ಲಿರೋದೇನೂ ಕೇಳ್ತಾ ಇಲ್ಲ. ನನ್ನ ಮಾತು ಮಾತ್ರ ಕೇಳುತ್ತೆ. ನಮ್ಮ ಮೇಜರ್ ಮಾತಾಡಿದ್ರೆ ಸ್ವಲ್ಪ ಕೇಳುತ್ತೆ. ಒಳ್ಳೆ ನಿದ್ದೆ. ಮೇಜರ್, ನೀವು ಮಾತಾಡಿಸಿ.

ಮೇಜರ್: ಏನು ರಾಮಪ್ಪ—ನಿನಗೆ ನನ್ನ ಮಾತು ಕೇಳುತ್ತಾ?

ರಾಮಪ್ಪ: ಎಲ್ಲೋ, ತುಂಬಾ ಆಳವಾದ ಭಾವೀಲಿ ಮಾತಾಡ್ದಂಗೆ ಕೇಳ್ತೈತೆ.

ಮೇಜರ್: ವೆರಿ ಗುಡ್. ಎಷ್ಟು ಚೆನ್ನಾಗಿ ನಿದ್ದೆ ಬಂದಿದೆ.

ರಂಗರಾಜ್: ಈಗ ರಾಮಪ್ಪನವರೇ ನೀವು ಚೆನ್ನಾಗಿ ನಿದ್ದೆ ಮಾಡ್ತಿದ್ದೀರಿ. ಆರಾಮವಾಗಿ. ಹಾಗೇ ದೀರ್ಘವಾಗಿ ಉಸಿರಾಡ್ತಿರಿ. ನಿಮಗೆ ನಾವು ಹೇಳಿದ್ದು ಮಾತ್ರ ಕೇಳಿಸುತ್ತೆ. ನಮ್ಮಲ್ಲಿ ಮಾತಾಡಿದ್ರೂ ಕೇಳೋಲ್ಲ. ಆರಾಮ. ರಾಮಪ್ಪ ನೀವು ಈಗ ನಿಮ್ಮ ಬಾಲ್ಯ, ಅಂದರೆ ಚಿಕ್ಕ ವಯಸ್ಸಿನದು ಜ್ಞಾಪಿಸಿಕೊಳ್ಳಿ. ಜ್ಞಾಪಕ ಬರ್ತಿದೆಯಾ?

ರಾಮಪ್ಪ: ಹೂಂ, ಕಣ್ಣಿಗೆ ಕಟ್ಟಿದಂಗೈತೆ. ನನ್ನ ಕಿವಿಯಾಗೆ ಆ ಶಬ್ದ ಕೇಳ್ತೈತೆ.

ರಂಗರಾಜ್: ನೀವು ಏನು ಮಾಡ್ತಿದ್ದೀರಿ? ಎಲ್ಲಿದ್ದೀರಿ? ಹೇಳಿ.

ರಾಮಪ್ಪ: ನಮ್ಮ ಹೈಸ್ಕೂಲು. ಸಾಯಂಕಾಲ ನಾವೆಲ್ಲಾ ಸ್ಕೌಟ್ ಬ್ಯಾಂಡ್ ಪ್ರಾಕ್ಟೀಸ್ ಮಾಡ್ತಿದ್ದೀವಿ. ನಮ್ಮ ಸ್ಕೌಟ್ ಮೇಸ್ಟ್ರು ಕುಟ್ಟಿ ಮೇಸ್ಟ್ರು ಅದೇನೋ ಬರೀತಾ ಕುಂತವ್ರೆ. ನಾನು ಬ್ಯೂಗಲ್ ಊದುತ್ತಾ ಇದ್ದೀನಿ. ಮಣಿ ಓಡಿ ಬರ್ತಿದಾನೆ.

(ಹುಡುಗರು ಬ್ಯಾಂಡ್ ಪ್ರಾಕ್ಟೀಸ್ ಮಾಡುತ್ತಿರುವ ಶಬ್ದ ಸಣ್ಣಗೆ ಕೇಳುತ್ತೆ.)

——ನಾವೆಲ್ಲಾ ಗಲಾಟೆ ನಿಲ್ಲಿಸಿದಿವಿ——

(Flash back)

ಮಣಿ: ರಾಮು, ರಾಮು, ಕುಟ್ಟಿ ಮೇಸ್ಟ್ರು ಎಲ್ಲಿ?

ರಾಮು: ಅಲ್ಲಿ ಕುಂತವ್ರೆ. ಯಾಕೋ, ಈಗ ಬರ್‍ತೀ?

ಮಣಿ: ಸಾರ್, ಸಾರ್... ಗಾಂಧಿ ಸತ್ತುಹೋದರು.

ಕುಟ್ಟಿ: ಏನು ಹೇಳ್ತಿದೀಯೋ? ಅಂಥ ವಿಷಯ ತಮಾಷೆ ಮಾಡಬಾರದು.

ಮಣಿ: ತಮಾಷೆ ಅಲ್ಲ ಸಾರ್. ರೇಡಿಯೋಲಿ ಬಂತು.

ಕುಟ್ಟಿ: ಏನಂತೆ? ಯಾವಾಗ ಬಂತು?

ಮಣಿ: ಈಗ ಸಾರ್, ಪ್ರಾರ್ಥನೆಗೆ ಹೋದ್ರಂತೆ. ಯಾರೋ ಗುಂಡು ಹೊಡೆದು ಸಾಯಿಸಿದ್ರಂತೆ.

ರಾಮು: ಸಾರ್, ನಮ್ಮ ರೇಡಿಯೋದಲ್ಲಿ ಕೇಳೋಣ.

ಕುಟ್ಟಿ: ಹುಂ, ನಡೀರಿ, ಅಸೆಂಬ್ಲಿ ಹಾಲಿಗೆ ಹೋಗೋಣ.

ಎಲ್ಲಾ ಓಡಿದ್ವಿ ರೇಡಿಯೋ ಹಾಕಿದ್ವಿ.

(ರೇಡಿಯೋದಲ್ಲಿ ಶೋಕ ಸಂಗೀತ ನಿಂತು...
ವೈಷ್ಣವ ಜನತೋ ಆರಂಭವಾಗುತ್ತದೆ.)

ಆ ಹಾಡು ಕೇಳಿ ಕುಟ್ಟಿ ಮೆಸ್ಟ್ರಿಗೆ ಗಾಂಧಿ ಸತ್ತಿದ್ದು ನಿಜ ಅಂತ ಗೊತ್ತಾಯ್ತು. ಅವರ ಮುಖ ಒಂದು ತರಹಾ ಆಯಿತು. ರೇಡಿಯೋ ಆರಿಸಿದ್ರು. ನಮ್ಮನ್ನೆಲ್ಲಾ ನಿಲ್ಲಿಸಿದ್ರು.

ಕುಟ್ಟಿ: ಗಾಂಧಿ ಬಹಳ ದೊಡ್ಡ ಮನುಷ್ಯ. ಅವರು ಸತ್ತಿರೋದು ಬಹಳ ಅನ್ಯಾಯ. ಆದರೆ ಗಾಂಧಿ ಹಾಗೆ ಸಾಯೋಲ್ಲ. ಅವರು ಅಮರರು. ಅವರ ಆತ್ಮಕ್ಕೆ...... ಶಾಂತಿ...ಪ್ರಾರ್ಥನೆ... ಒಂದು ನಿಮಿಷ ಮೌನ (ಅವರ ಧ್ವನಿ ಗದ್ಗದ. ಮೌನ) ಅವರ ಕಣ್ಣಲ್ಲಿ ನೀರು, ತುಟಿ, ಗಲ್ಲ ಅದರುತ್ತಿವೆ. ನನಗೂ ಒಳಗೆ ಒಂದು ತರಹಾ ಆಗ್ತಾ ಐತೆ (ಇವರ ಧ್ವನಿಯೂ ಗದ್ಗದ).

(Flash back over)

ರಂಗರಾಜ್: ಹೊಂ, ಈಗ ನೀವು ನಿದ್ದೆ ಮಾಡಿ. ಆರಾಮವಾಗಿರಿ... ಆರಾಮ... ....ಆರಾಮ... ದೀರ್ಘವಾಗಿ ಉಸಿರಾಡಿ ಎಲ್ಲಾ ಆರಾಮ.

ಮೇಜರ್: ಅರೇ, ರಂಗರಾಜ್, ಏನು ಆಶ್ಚರ್ಯ, ವಿವರಗಳೆಲ್ಲಾ ಜ್ಞಾಪಕ ಇಟ್ಟಿದ್ದಾನೆ.

ರಂಗರಾಜ್: ಅದೇ ವಶೀಕರಣದ ಅದ್ಭುತ. ಇನ್ನೂ ನೋಡಿ. ರಾಮುಪ್ಪ ಚೆನ್ನಾಗಿ ನಿದ್ದೆ ಮಾಡ್ತಿದ್ದೀರಿ. ಆರಾಮವಾಗಿ. ನನ್ನ ಮಾತು ಕೇಳ್ತಿದೆಯಾ?

ರಾಮುಪ್ಪ: ಹೂಂ. ಎಲ್ಲೋ ತುಂಬಾ ದೂರದಿಂದ ಆಡಿದಂಗೆ ಐತೆ.

ರಂಗರಾಜ್: ಈಗ ಇನ್ನೂ ಹಿಂದಕ್ಕೆ ಹೋಗಿ ರಾಮುಪ್ಪ. ಜ್ಞಾಪಿಸಿಕೊಳ್ಳಿ. ಇನ್ನೂ ಹಿಂದೆ. ನೀವು ಹುಟ್ಟೋ ದಿನಕ್ಕೆ. ನಿಮ್ಮ ಜನ್ಮಕ್ಕೆ. ಆರಾಮವಾಗಿ ಹಾಂ. ಜ್ಞಾಪಕ ಬರ್ತಿದೆಯಾ?

ರಾಮುಪ್ಪ: ಹೂಂ.

ರಂಗರಾಜ್: ಹಾಗೇ. ನೀವು ಈಗ ಎಲ್ಲಿದ್ದೀರಿ? ಏನು ಮಾಡ್ತಿದ್ದೀರಿ?

ರಾಮುಪ್ಪ: ಒಂದು ಮೊಟ್ಟೆ ತರಹ ಚೀಲದಲ್ಲಿದ್ದೀನಿ. ಮುದುರಿಕೊಂಡು ಮಲಗಿದ್ದೀನಿ. ಕೈ ಕಾಲು ಅಲ್ಲಾಡಿಸೋಕೆ ಜಾಗ ಸಾಲದು. ಈ ಒಂದು ಹಗ್ಗ ಬಂದು ನನ್ನ ಹೊಕ್ಕಳಿಗೆ ಗಂಟು ಬಿದ್ದು ಕತ್ತು ಸುತ್ತ ಬಂದ್ಬೈತೆ. ಆಂ, ತುಂಬಾ ಗಲಾಟೆ ಆಗ್ತೈತೆ. ಈ ಚೀಲ ಹಿಸುಕಿದಂಗಾಗ್ತೈತೆ ಆಂ, ಓಂ, ಬಹಳ ಬಿಗಿ, ನನ್ನ ಹಿಡಿದು ನೂಕ್ದಂಗಾಗ್ತೈತೆ. ಜಾಗ ಸಾಲದು, ಆಂ, ತುಂಬಾ ಕಷ್ಟ......

ರಂಗರಾಜ್: ಆರಾಮ ಮಾಡಿ, ರಾಮುಪ್ಪ. ನಿಧಾನವಾಗಿ, ದೀರ್ಘವಾಗಿ ಉಸಿರಾಡಿ. ನಿದ್ದೆ ಮಾಡಿ. ಮೈ ಕೈ ಎಲ್ಲಾ ಸಡಿಲ ಆಗ್ತಾ ಇದೆ. ಮತ್ತೆ ಎಲ್ಲಾ ಆರಾಮವಾಗಿದೆ. ಕಾಲು ಸಡಿಲವಾಗ್ತಾ ಇದೆ, ತೊಡೆ ಸಡಿಲ ಆಗ್ತಾ ಇದೆ. ಸೊಂಟ ಸಡಿಲ ಆಗ್ತಾ ಇದೆ. ಹಾಗೆ. ಈಗ ಕೈ ಸಡಿಲ ಆಗ್ತಾ ಇದೆ. ಹಾಗೇ...ದೀರ್ಘವಾಗಿ ಉಸಿರಾಡಿ. ಒಳಗೆ, ಹೊರಗೆ, ಒಳಗೆ, ಹೊರಗೆ... ಹಾಗೇ ಆರಾಮ ... ಆರಾಮ ... ಹಾಗೇ ಈಗ ಮತ್ತೆ ನಿದ್ದೆ ಬರುತ್ತಿದೆ. ಈಗ ಮತ್ತೆ ಗಾಢವಾದ ನಿದ್ದೆ ಬಂತು...ಮನಸ್ಸೆಲ್ಲಾ ಹಗೂರವಾಗಿದೆ. ಆರಾಮವಾಗಿರಿ. ಹಾಗೇ ನೋಡಿದ್ರಾ ಮೇಜರ್, ಅವನ ಹುಟ್ಟಿನ ಅನುಭವ.

ಮೇಜರ್: ಅರೇ ಆ ಜ್ಞಾಪಕ ಎಷ್ಟು ಸ್ಪಷ್ಟ ಅಂದರೆ... ಅವನು ನಿಜವಾಗಿ ತಿರುಗಿ ಹುಟ್ಟುತ್ತಿದ್ದಾನೇನೋ ಅನ್ನೋಹಾಗೆ ಒದ್ದಾಡಿಬಿಟ್ಟನಲ್ಲಾ. ಅಲ್ಲಾ, ಎಷ್ಟು ಕಷ್ಟಪಟ್ಟುಬಿಟ್ಟ.

ರಂಗರಾಜ್: ಹೌದು, ಈಗ ಮತ್ತೆ ಅನುಭವಿಸುತ್ತಿದ್ದಷ್ಟು ಸ್ಪಷ್ಟವಾದ ಅನುಭವ.

ಮೇಜರ್: ಅದೇನೋ, ಗಲಾಟೆ ಅಂದನಲ್ಲಾ, ಏನಿರಬಹುದು?

ರಂಗರಾಜ್: ನನ್ನ ಅನುಮಾನ ರಕ್ತದಪ್ರವಾಹ, ಕರುಳಿನ ಶಬ್ದ ಇರಬಹುದೂಂತ.

ಮೇಜರ್: ಅರೇ ಹೌದಲ್ಲಾ, ನನಗದು ಹೊಳೆದಿರಲಿಲ್ಲ—ಭಾರಿ ಪೈಪ್ ಲೈನ್ ಇದೆಯಲ್ಲವಾ ಒಳಗೆ. ಆದ್ರೂ ಮಗೂಗೆ ಅದೆಲ್ಲಾ ಗೊತ್ತಾಗಬಹುದೂ ಅಂತಲೂ

ಹೊಳೆದಿರಲಿಲ್ಲ. ಮಗೂಗೆ ಆಗಲೇ ಕಿವಿ ಕೇಳುತ್ತಾ? ಅರೇ ಅದಿರಲಿ, ರಾಮಪ್ಪನ್ನ ಇನ್ನೂ ಹಿಂದಕ್ಕೆ ಕಳಿಸ್ತೀರಾ ಈಗ.

ರಂಗರಾಜ್: ಹೂಂ, ಸ್ವಲ್ಪ ಸುಧಾರಿಸಿಕೊಳ್ಳಲಿ ಅಂತ ಬಿಟ್ಟಿದ್ದೆ. ರಾಮಪ್ಪ ನಿದ್ದೆ ಮಾಡ್ತಿದೀರಲ್ಲಾ. ಆರಾಮವಾಗಿ. ಮಾತು ಕೇಳಿಸ್ತಿದೆಯಾ?

ರಾಮಪ್ಪ: ಹೂಂ.

ರಂಗರಾಜ್: ಮೈ ಮನಸ್ಸೂ ಎಲ್ಲಾ ಹಗೂರವಾಗಿದೆಯಲ್ಲಾ. ಆರಾಮವಾಗಿದ್ದೀರಾ?

ರಾಮಪ್ಪ: ಹೂಂ, ಆರಾಮ... ತೇಲ್ತಾ ಇರೋ ಹಾಗೆ.

ರಂಗರಾಜ್: ಈಗ ಇನ್ನೂ ಹಿಂದಕ್ಕೆ ಹೋಗಿ. ಸ್ವಲ್ಪ ಹಿಂದಕ್ಕೆ. ಜ್ಞಾಪಕ ಬರ್‍ತಿದೆಯಾ?

ರಾಮಪ್ಪ: ಬರ್‍ತಿದೆ. ಈಗ ನಾನು ಒಂದು ಜ್ವಾಲೆ. ಉರೀತಿದ್ದೀನಿ. ಮೇಲೆ ಏಳ್ತಾ ಇದ್ದೀನಿ. ಹಾರಿಕೊಂಡು ತೇಲಿಕೊಂಡು ಏಳ್ತಾ ಇದ್ದೀನಿ. ನಾನು ಬಿಟ್ಟು ಬಂದ ದೇಹ ಅಲ್ಲೆ ಬಿದ್ದಿದೆ. ನಾನು ಮೇಲೆ ಏಳ್ತಾ ಇದ್ದೀನಿ.

ಮೇಜರ್: ಅದು ಯಾರ ದೇಹ ರಾಮಪ್ಪ?

ರಂಗರಾಜ್: ರಾಮಪ್ಪನ ಹಳೇ ದೇಹ. ಕೋಮರಂ ಗೋವಿಂದನ್ ನಾಯರ್‌ದು. ಹೇಳು, ನೀನೇನು ಮಾಡ್ತಿದ್ದೀ ಈಗ?

ರಾಮಪ್ಪ: ಮೇಲೆ, ಮೇಲೆ, ಮೋಡ ದಾಟಿ ಆಕಾಶದಲ್ಲಿ ಮೇಲೆ ಹತ್ತುತ್ತಾ ಇದ್ದೀನಿ. ಇನ್ನೂ ಮೇಲೆ. ಇಲ್ಲಿ ತಣ್ಣಗಿದೆ; ಗಾಳಿ ಇಲ್ಲ.

(ಸಂದರ್ಭೋಚಿತ ಸಂಗೀತ.)

ನಾನು ಬದಲಾಯಿಸ್ತಾ ಇದ್ದೀನಿ. ಜ್ವಾಲೆ ಹೋಗಿ ಈಗ ನೀರಾಗ್ತಾ ಇದ್ದೀನಿ. ಒಂದು ಹನಿಯಾದೆ. ಈಗ ಹನಿಯಾಗಿ ನುಗ್ತಾ ಇದ್ದೀನಿ. ಪ್ರಪಂಚ ದೂರದಲ್ಲಿ ಚುಕ್ಕಿಯಾಗಿ ಕಾಣ್ತಾ ಇದೆ. ನಾನು ಸುತ್ತಾ ತಿರುಗ್ತಾ ಇದ್ದೀನಿ. ವೇಗವಾಗಿ. ಉದ್ದವಾದ ಹನಿಯಾಗಿ ವೇಗವಾಗಿ ಸುತ್ತುತ್ತಾ ಇದ್ದೀನಿ. ಈಗ ವೇಗ ಇನ್ನೂ ಹೆಚ್ಚುತ್ತಾ ಇದೆ. ಈಗ ನನ್ನ ಉದ್ದ ಕಡಿಮೆ ಆಗ್ತಾ ಇದೆ. ಉದ್ದ ಇನ್ನೂ ಕಡಿಮೆ ಆಗ್ತಿದೆ. ವೇಗ ಹೆಚ್ಚುತ್ತಾ ಇದೆ. ಈಗ ಮತ್ತೆ ಇಳೀತಾ ಇದ್ದೀನಿ. ಭೂಮಿ ಕಡೆ. ಈಗ ಯಾವುದೋ ಸುರಂಗದಲ್ಲಿ ಹೋಗ್ತಾ ಇದ್ದೀನಿ. ಕತ್ತಲೆ ಸುರಂಗ. ದೂರ ಏನೂ ಕಾಣೋಲ್ಲ. ಸುರಂಗ ಚಿಕ್ಕದಾಗ್ತಾ ಇದೆ. ದೂರದಲ್ಲಿ ಸಣ್ಣ ಬೆಳಕು ಕಾಣ್ತಾ ಇದೆ. ಈಗ ಯಾವದೋ ಸಣ್ಣ ನಾಳದಲ್ಲಿ ಸೇರಿಕೊಂಡು ಬಿಟದ್ದೀನಿ. ಈಗ ನಾಳದಿಂದ ಹಾರಿ ಮತ್ತೆ ಹನಿಯಾದೆ. ಸುತ್ತ ಒಂದು ಚೀಲ. ಈ ಚೀಲದಲ್ಲಿ ಬೆಚ್ಚಗಿದೆ. ನಾನು ತೆಪ್ಪಗೆ ನಿದ್ದೆ ಮಾಡ್ತಿದ್ದೀನಿ. ಆರಾಮವಾಗಿ.

ಮೇಜರ್: ಅರೆ, ಇದೆಲ್ಲಾ ಏನು? ಬೆಂಕಿ, ಜ್ವಾಲೆ, ಹನಿ ನನಗಂತೂ ಅರ್ಥವಾಗೋಲ್ಲ.

ರಂಗರಾಜ್ : ಅದೇ ಆತ್ಮ ಅಂದುಕೋಬಹುದು ಮೇಜರ್. ಒಂದು ದೇಹ ಬಿಟ್ಟು ಇನ್ನೊಂದು ದೇಹದಲ್ಲಿ ಸೇರಿಕೊಂಡಿತು ಅಂತ ಒಂದು ಕಲ್ಪನೆ ಸಾಧ್ಯ.

ಮೇಜರ್: ಅರೇ ರಂಗರಾಜ್, ನಾನು ಎದುರುನೋಡಿದ್ದಕ್ಕಿಂತ ಹೆಚ್ಚು ಕೌತುಕದ ಅನುಭವ ಆಗ್ತಾ ಇದೆ. ನನ್ನ ಕುತೂಹಲ ತಡೆಯೋಕೆ ಆಗ್ತಾ ಇಲ್ಲ. ಅವನನ್ನ ಇನ್ನೂ ಹಿಂದಕ್ಕೆ ಕಳಿಸಿ ರಂಗರಾಜ್. ನನಗಿಷ್ಟು ಉತ್ಸಾಹ ನನ್ನ ಸರ್ವೀಸಿನಲ್ಲೂ ಕಡಿಮೆ.

ರಂಗರಾಜ್: ಕಳಿಸೋಣ ಮೇಜರ್. ರಾಮಪ್ಪನವರೇ ನಿಷ್ಠೆ ಚೆನ್ನಾಗಿ ಮಾಡ್ತಿದ್ದೀರಿ. ಇನ್ನೊಂದು ಸ್ವಲ್ಪ ಜ್ಞಾಪಿಸಿಕೊಳ್ಳೋಕೆ ರೆಡೀನಾ.

ರಾಮಪ್ಪ: ಓಹೋ, ಈಗ ಆರಾಮವಾಗಿ ಬೆಚ್ಚಗೆ ಮಲಗಿದ್ದೀನಿ.

ರಂಗರಾಜ್: ಇನ್ನೂ ಹಿಂದಕ್ಕೆ ಹೋಗಿ ರಾಮಪ್ಪನವರೇ. ಚೆನ್ನಾಗಿ ಜ್ಞಾಪಿಸಿಕೊಳ್ಳಿ, ಇನ್ನೂ ಹಿಂದೆ. ಹಿಂದಕ್ಕೆ ಹೋಗಿ.

(ಚಂಡೆ ಮದ್ದಳೆ.)

ರಾಮಪ್ಪ: ಚಂಡೆ ಮದ್ದಳೆ ಕೇಳಿಸ್ತಾ ಇದೆ. ಮಲಬಾರ್, ನಿಲಂಬೂರಿನ ದೇವಸ್ಥಾನದಲ್ಲಿ ಉತ್ಸವ. ನಿಲಂಬೂರು ರಾಜವರ್ಮ ಬರ್ತಾರೆ.

ರಂಗರಾಜ್: ನೀವು ಏನು ಮಾಡ್ತಾ ಇದ್ದೀರಿ?

ರಾಮಪ್ಪ: ನಾನು ಗೆಜ್ಜೆಗಳು ಕಟ್ಟಿಕೋತಾ ಇದ್ದೀನಿ. ನಾನಿನ್ನೇನು ಕೋಮರಂಗೆ ಹೋಗಬೇಕು. ವೇಷ ಎಲ್ಲಾ ಹಾಕಿಕೊಂಡೆ. ಈ ಗೆಜ್ಜೆಗಳು ಕಟ್ಟಿಕೊಂಡರೆ ಆಯಿತು.

ಮೇಜರ್: ನಿನ್ನ ಹೆಸರು ಏನು?

ರಾಮಪ್ಪ: ಕೊಮರಂ ಗೊವಿಂದನ್ ನಾಯರ್.

ಮೇಜರ್: ನಿಮ್ಮೂರು?

ರಾಮಪ್ಪ: ತುವ್ವೂರು, ಹಳ್ಳಿ, ನಿಲಂಬೂರು ಹತ್ತಿರವೇ.

ಮೇಜರ್: ಏನು ಕೆಲಸ?

ರಾಮಪ್ಪ: ಕೃಷಿ. ದೇವಸ್ಥಾನದಲ್ಲಿ ಕೋಮರಂ.

ರಂಗರಾಜ್: ಅದಕ್ಕೆ ಯಾಕೆ ಸೇರಿಕೊಂಡೆ?

ರಾಮಪ್ಪ: ದೇವರು ಕರೆದ. ದೇವಸ್ಥಾನದ ಕರೆ ಬಿಡೋದು ಸಾಧ್ಯವೇ?

ಮೇಜರ್: ಮಳಯಾಳಂ ಪರಯಾಂ ಪಟ್ಮೋ?

ರಾಮಪ್ಪ: ಹೂಂ.

ಮೇಜರ್: ನೀವು ಮಲೆಯಾಳಿ ಅಲ್ವೆ?

ರಾಮಪ್ಪ: ಅದೇ, ಮಲಬಾರ್ ವಿಟ್ಟು ನಾಲ್ಪದು ವರ್ಷಂ ಆಯಿ. ಮಲಯಾಳಂ ಮರನ್ನು (ಹೌದು, ಆದರೂ ಮಲಯಾಳಂ ಬಿಟ್ಟು, ನಲವತ್ತು ವರ್ಷ ಆಯಿತು. ಮರೆತುಹೋಗಿದೆ).

(ಚಂಡೆ ಮದ್ದಳೆ ನಿಂತಿದೆ. ಜನರ ಸಂದಣಿ ಸದ್ದು.)

ಮೇಜರ್: ಅದೂ ನಿಜವೇ. ಆಗಲಿ ಹೇಳು, ನೀನು ಏನು ಮಾಡ್ತಿದ್ದಿ?

ರಾಮಪ್ಪ: ಗೆಜ್ಜೆ ಎಲ್ಲಾ ಕಟ್ಟಿಕೊಂಡೆ. ನನ್ನ ವೇಷ ಪೂರ್ತಿಯಾಯಿತು. ದೇವಸ್ಥಾನದ ಒಳಕ್ಕೆ ನಾವೆಲ್ಲಾ ಸಾಲಾಗಿ, ಹೋಗ್ತಿದ್ದೀವಿ. ಜನ ತುಂಬ ಸೇರಿದ್ದಾರೆ. ಈವತ್ತು ಕೋಮರಂ ಚೆನ್ನಾಗಿ ಆಗುತ್ತೆ. ರಾಜಮನೆತನದವರು ಮುಂದೇನೆ ನಿಂತಿದ್ದಾರೆ. ಒಳಗೆ ಸುತ್ತ ಹದಿನೇಳೂವರೆ ಕತ್ತಿ ಜೋಡಿಸಿದ್ದಾರೆ.

ಮೇಜರ್: ಹದಿನೇಳೂವರೆ ಕತ್ತಿ? ಅರ್ಧಕತ್ತಿ ಅಂದರೇನು?

ರಾಮಪ್ಪ: ಕತ್ತಿ ತುದಿಯಲ್ಲಿ ಚಂದ್ರಾಕಾರವಾಗಿ ಬಗ್ಗಿದ್ರೆ ಅದು ಅರ್ಧ ಕತ್ತಿ.

ಮೇಜರ್: ಮುಂದೆ?

(ಗೆಜ್ಜೆ ಶಬ್ದ. ಮೊದಲು ನಿಧಾನವಾದ ತಾಳ.
ಬರು ಬರುತ್ತಾ ವೇಗವಾಗಿ ಕೊನೆಗೆ ತೀವ್ರವಾಗುತ್ತದೆ.)

ರಾಮಪ್ಪ: ನಾವೆಲ್ಲಾ ನಿಧಾನವಾಗಿ ಅವರ ಸುತ್ತ ಕುಣಿಕೊಂಡು ಸುತ್ತುತ್ತೀವಿ. ಸುತ್ತುತ್ತಾ, ಸುತ್ತುತ್ತಾ, ನಮ್ಮ ವೇಗ ಹೆಚ್ಚುತ್ತಾ ಇದೆ. ಬರ್‍ತಾ ಬರ್‍ತಾ ಬಹಳ ಬಿರುಸಾಗಿ ಕುಣೀತಿದ್ದೀವಿ. ನನಗೆ ಆವೇಶ ಬರ್‍ತಾ ಇದೆ. ನಾನು ನುಗ್ಗಿ ಒಂದು ಕತ್ತಿ ಎಳಕೊಂಡೆ. ಎಲ್ಲರೂ ಒಬ್ಬೊಬ್ಬರಾಗಿ ಕತ್ತಿ ಎಳೆದುಕೋತಾ ಇದಾರೆ. ನಾನು ಅವರಿಗಾಗಿ ಕಾಯೋಲ್ಲ. ನಾನು ಕತ್ತೀಲಿ ನನ್ನ ಹಣೇಗೆ ಹೊಡೆದು ಕೋತಾ ಇದ್ದೀನಿ.

ರಂಗರಾಜ್: ಕತ್ತೀಲಿ ಹಣೇಗೆ ಹೊಡೆದುಕೊಳ್ಳೋದೆ? ನೋವಾಗೊಲ್ಲವೆ?

(ಸಮಯೋಚಿತವಾಗಿ ಗೆಜ್ಜೆ.)

ರಾಮಪ್ಪ: ನನಗೆ ಗೊತ್ತಾಗೊಲ್ಲ. ರಕ್ತ ಹಣೆಯಿಂದ ಸುರೀತಾ ಇದೆ. ಹೆಚ್ಚು ಹೆಚ್ಚು ಹೊಡೆದುಕೋತಾ ಇದ್ದೀನಿ. ನನ್ನ ವೇಗ ನನಗೇ ತಡಿಯೋಕೆ ಆಗ್ತಾ ಇಲ್ಲ. ನನ್ನ ಕಣ್ಣು ಸರಿಯಾಗಿ ಬಿಡೋಕಾಗ್ತಾ ಇಲ್ಲ. ಮುಖದ ಮೇಲೆಲ್ಲಾ ರಕ್ತ ಹರೀತಿದೆ. ನನಗೆ ತಡಿಯೋಕೆ ಆಗ್ತಾ ಇಲ್ಲ. ದೇವರು ನನ್ನ ನಡೆಸ್ತಾ ಇದ್ದಾನೆ. ದೇವರೇ ನನ್ನ ಹಣೇಗೆ ಹೊಡೀತಾ ಇದ್ದಾನೆ. ಹಂ. ರಾಮೇಂದ್ರನ್ ನನ್ನ ಹಿಂದುಗಡೆಯಿಂದ ಬಂದು ಕೈ ಕಟ್ಟಿ ಹಿಡಿದು ಮೇಲೆತ್ತಿಬಿಟ್ಟ. ನನ್ನ ದೇಹ ಎಲ್ಲಾ ಬಿರುಗಾಳೀಲಿ ಎಲೆ ತರಹ ಅದುರುತ್ತಾ ಇದೆ. ಅವನು ನನ್ನ ಗಟ್ಟಿಯಾಗಿ ಹಿಡಿದುಕೊಂಡೇ ಇದ್ದಾನೆ. ನನಗೆ ಆವೇಶ ನಿಧಾನವಾಗಿ ಇಳೀತಾ ಇದೆ. ಈಗ

ಎಲ್ಲಾ ಇಳೀತು. ಈಗ ರಾಮೇಂದ್ರನ್ ನನ್ನ ಕೆಳಗೆ ಇಳಿಸಿದ. ನಾನು ಹೋಗಿ ಆ ದೇವನ ಪೀಠಕ್ಕೆ ನಮಸ್ಕಾರ ಮಾಡಿ ಅರಿಶಿನ ತೆಗೆದುಕೊಂಡು ಹಣೇಗೆಲ್ಲಾ ಹಚ್ಚಿಕೊಂಡೆ. ರಕ್ತ ಸ್ವಲ್ಪ ಹೆಪ್ಪುಗಟ್ಟಿತು. ಯಾರೋ ಮಗುವನ್ನು ಎತ್ತಿಕೊಂಡು ಹತ್ತಿರ ಬರ್‍ತಾರೆ. ನನ್ನ ಹತ್ತಿರ ಶಾಸ್ತ್ರ ಕೇಳಬೇಕು ಅಂತ ಇರಬೇಕು. ಹಂ. ಮಗುವಿಗೆ ಖಾಯಿಲೆಯಂತೆ ಆಹಾ .........!

(ಮಗು ಕಿಟಾರೆಂದು ಕಿರಚಿಕೊಂಡು ಅಳುತ್ತೆ).

......... ನಾನು ಹೇಳಿದೆ ಮಗುವಿನ ಖಾಯಿಲೆ ಇನ್ನು ಈ ಅರಿಶಿನದಿಂದ ವಾಸಿಯಾಗುತ್ತೆ. ಅದರ ಪ್ರಾಣ ಉಳೀಬೇಕು, ಉಳಿಯುತ್ತೆ. ಆದರೆ ನನ್ನ ಪ್ರಾಣ ಉಳಿಯೊಲ್ಲ. ನನ್ನ ಕಡೆಯ ಕೋಮರಂ ಆಯಿತು. ಈ ಕಡೆಯ ಕೋಮರಂನಿಂದ ಈ ಮಗು ಉಳಿಯುತ್ತೆ ........... ಹ ಹ ಹ ಅಷ್ಟು ಆಶ್ವಾಸನೆ ಕೊಟ್ರೊ ಆ ಮಗೂಗೆ ಏನು ಅರ್ಥ ಆಗಬೇಕು. ಅಳುತ್ತೆ. ಸಾವನ್ನ ಅವನಿಂದ ಪಡೆದುಕೊಂಡು ಬದುಕನ್ನ ಕೊಟ್ಟೆ. ಅದಕ್ಕೆ ಅರ್ಥ ಎಲ್ಲಾಗುತ್ತೆ? ಅಳುತ್ತೆ. ಹಾಗೆ ನೋಡಿದರೆ ಯಾರಿಗೆ ಅರ್ಥ ಆಗುತ್ತೆ! (ನಿಟ್ಟುಸಿರು) ನನಗೆ ಒಂದು ತರಹ ಆಗ್ತಾ ಇದೆ. ನನಗೆ ತಲೆ ತಿರುಗ್ತಾ ಇದೆ. ಇನ್ನು ನನ್ನ ಕಥೆ ಮುಗೀತು. ಬಿದ್ದೆ. ಯಾರು ಯಾರೋ, ರಾಮೇಂದ್ರನೂ ಇದ್ದಾನೆ, ನನ್ನ ಹಿಡಕೊಂಡು ಎತ್ತಿಕೊಂಡು ಬರ್‍ತಾರೆ. ನನಗೇನೊ ಒಂದು ತರಹಾ ಆಗ್ತಾ ಇದೆ, ತಲೆ ತಿರುಗು. ಜ್ಞಾನ ತಪ್ಪುತ್ತಾ ಇದೆ. ಏನೂ ಗೊತ್ತಾಗೊಲ್ಲ. ಅವರು ಯಾರೋ .........

(Fade out)

ರಂಗರಾಜ್: ನಿದ್ದೆ ಮಾಡಿ, ಆರಾಮವಾಗಿ, ದೀರ್ಘವಾಗಿ ಉಸಿರಾಡಿ; ಆರಾಮ.

ಮೇಜರ್ : ಸಾಕು, ರಂಗರಾಜ್, ಈ ಬೈಠಕ್ಕು. ನನಗೇ ಹೇಗೆ ಹೇಗೋ ಆಗ್ತಾ ಇದೆ.

ರಂಗರಾಜ್: ಈಗ ಆರಾಮವಾಗಿ ನಿದ್ದೆಮಾಡಿ ರಾಮಪ್ಪ, ಆರಾಮವಾಗಿರಿ. ಈಗ ನಾನು ಐದು ಎಣಿಸ್ತೀನಿ, ಆಗ ನಿಮಗೆ ಎಚ್ಚರ ಆಗುತ್ತೆ. ಈಗ ಆದದ್ದನ್ನೆಲ್ಲಾ ನೀವು ಮರೆತುಬಿಟ್ಟಿರ್‍ತೀರಿ. ಸುಖವಾಗಿ, ಆರಾಮವಾಗಿ ನಿದ್ದೆಯಿಂದ ಎದ್ದ ಹಾಗೆ ಏಳ್ತೀರಿ. ಒಂದು, ಎರಡು, ಮೂರು, ನಾಲ್ಕು, ಐದು.

ರಾಮಪ್ಪ : ಹಾಂ, ಓ, ಏನು ಮೇಜರ್, ನೀವು ಇನ್ನೂ ಇಲ್ಲೆ ಇದ್ದೀರಾ?

ಮೇಜರ್ : ಹಾಂ, ಹೂಂ.

ರಂಗರಾಜ್: ಹೇಗಿದ್ದೀರಿ ರಾಮಪ್ಪ?

ರಾಮಪ್ಪ : ಆರಾಮವಾಗಿದ್ದೀನಿ ಸಾರ್, ಒಳ್ಳೆ ನಿದ್ದೆ ಆಯ್ತು. ಏನು ಮೇಜರ್, ಯಾಕೋ ಒಂದು ತರಹಾ ಇದ್ದೀರಲ್ಲಾ?

ಮೇಜರ್ : ಹಾಂ, ಹುಂ, ಏನಿಲ್ಲಾ, ಯಾಕೆ, ಏನಿಲ್ಲವಲ್ಲ.

ರಾಮಪ್ಪ : ನಾನಿನ್ನೂ ಬರಲೇ ಸಾರ್?

ರಂಗರಾಜ್: ಸರಿ, ರಾಮಪ್ಪ, ಬನ್ನಿ. ಮತ್ತೆ ಬೇಕಾದರೆ ಹೇಳಿ ಕಳುಹಿಸ್ತೀನಿ. ಯಾತಕ್ಕೂ ಮುಂದಿನ ವಾರ ಬಂದು ನೋಡಿ. ಲೆಕ್ಕ ಫೈಸಲ್ ಮಾಡಿಬಿಡೋಣ.

ರಾಮಪ್ಪ : ಹಾಗಾದ್ರೆ ನನ್ನ ಕೆಲಸ ಮುಗೀತೆ ಸಾರ್?

ರಂಗರಾಜ್: ಈಗ ಸದ್ಯಕ್ಕೆ ಮುಗೀತು. ಮತ್ತೆ ಬೇಕಾದ್ರೆ ನೋಡೋಣ. ಫೈಸಲ್ಲಾದ ಲೆಕ್ಕ ಮತ್ತೆ ಶುರುಮಾಡಬಹುದು.

ರಾಮಪ್ಪ : ಸರಿ, ಸಾರ್, ಹೋಗಿಬರ್ತೀನಿ ಸಾರ್. ಹೋಗಿಬರ್ತೀನಿ ಮೇಜರ್.

ಮೇಜರ್ : ರೈಟ್ ರಾಮಪ್ಪ ಹೋಗಿ ಬನ್ನಿ.

ರಂಗರಾಜ್: ಸರಿ. ಏನು ಮೇಜರ್, ಕಾಫಿ ತರಿಸೋಣೇನು?

ಮೇಜರ್ : ತರಿಸಿ, ತರಿಸಿ.

ವಿಲ್ಲು (ಕೇರಳದ ಒಂದು ವಾದ್ಯ—ಬಿಲ್ಲಿನಂತೆ ಇರುತ್ತದೆ) bridge music.

## ದೃಶ್ಯ ೩

(ರಂಗರಾಜ್ ಅವರ ಪ್ರಯೋಗಶಾಲೆ)

ಮೇಜರ್ : ರಂಗರಾಜ್, ರಂಗರಾಜ್ ......... ರಂಗರಾಜ್ ಅವರಿಲ್ಲವಾ?

(ಫೋನ್ ಮಾಡುತ್ತಾಳೆ.)

ಹೆಣ್ಣು 4 : ಕೂತ್ಕೊಳ್ಳಿ ಸಾರ್, ಹೇಳ್ತೀನಿ. ಹಲೋ ಎನರ್ಜಿ ಲ್ಯಾಬ್ ಅ. ಅಲ್ಲಿ ರಂಗರಾಜ್ ಇದ್ದರೆ ಅವರನ್ನು ನೋಡೋಕೆ ಯಾರೋ ···......... ಆಗಲೇ ಹೊರಟರಾ. Thanks.

ರಂಗರಾಜ್: ಓ, ಮೇಜರ್ ಇದೇನು? ಶೀಲಾ, ಮೇಜರ್. ಇವರು ನಮ್ಮ ರಿಸರ್ಚ್‌ಫೆಲೋ.

ಮೇಜರ್ : ಹಲೋ. ರಂಗರಾಜ್ ನಾನು ಕೇರಳದಿಂದ ಈಗಿನ್ನೂ ಬರ್ತಿದೀನಿ.

ರಂಗರಾಜ್: ಬನ್ನಿ ಮೇಜರ್, ಒಳಗೆ ಹೋಗೋಣ.

ಮೇಜರ್ : ಅರೇ ರಂಗರಾಜ್, ಆಶ್ಚರ್ಯ ಅಂದ್ರೆ ಆಶ್ಚರ್ಯ. ನಿಮ್ಮನ್ನ ಕೆಲಸದ ವೇಳೇಲಿ, ಇಲ್ಲಿ ಬಂದು ನೋಡ್ತಿರೋದಕ್ಕೆ ಕ್ಷಮಿಸಿ.

ರಂಗರಾಜ್: ಕೂತ್ಕೊಳ್ಳಿ ಮೇಜರ್, ಬಹಳ ಆತುರದಲ್ಲಿದ್ದೀರಿ.

ಮೇಜರ್ : ಕೇರಳದಿಂದ ಬಂದವನು ಇನ್ನೂ ಮನೇಗೆ ಹೋಗಿಲ್ಲ. ನನಗೆ ತಡೆದು ಕೊಳ್ಳೋಕೆ ಆಗ್ಲಿಲ್ಲ. ಕೋಮರಂ ಗೋವಿಂದನ್ ನಾಯರ್ ಜೀವಂತ ಮನುಷ್ಯ.

ರಂಗರಾಜ್: ಜೀವಂತ?

ಮೇಜರ್ : ಅಂದ್ರೆ ನಿಜವಾಗಿಯೂ ಬದುಕಿದ್ದ ಮನುಷ್ಯ. ರಾಮಪ್ಪ ಕೊಟ್ಟ ವಿವರಗಳೆಲ್ಲಾ ಸರಿ.

ರಂಗರಾಜ್: ಯಾವ ವಿವರ?

ಮೇಜರ್ : ಗೋವಿಂದನ್ ನಿಲಂಬೂರಿನ ಹತ್ತಿರ ತುವ್ವೂರು ಹಳ್ಳೀಲಿ ಕೃಷಿ ಮಾಡುತ್ತಿದ್ದವನು ಕರೆಬಂದು ಕೋಮರಂಗೆ ಸೇರಿದ. ಗೋವಿಂದನ್ ನಾಯರ್ ಪ್ರಸಿದ್ಧನಾಗಿ ಕೋಮರಂ ಗೋವಿಂದನ್ ನಾಯರ್ ಆದ. ನಲವತ್ತು ವರ್ಷದ ಕೆಳಗೆ ಅವನು ತೀರಿಹೋದ.

ರಂಗರಾಜ್: ನಲವತ್ತು ವರ್ಷದ ಕೆಳಗೆ.

ಮೇಜರ್ : ಹೌದು. ಅವನ ಕಡೆಯ ಕೋಮರಂ ವಿವರಗಳು ನಾವು ಕೇಳಿದಂತೆಯೇ ಇದ್ದವು. ಅವತ್ತು ಗೋವಿಂದನ್ ನಾಯರ್ ಅದ್ಭುತವಾಗಿ ಕುಣಿದನಂತೆ. ಅವನು ಮಗುವಿಗೆ ಶಾಸ್ತ್ರ ಹೇಳಿದ್ದು ಈಗಲೂ ಜನ ಜ್ಞಾಪಿಸಿಕೊಳ್ಳುತ್ತಾರೆ. ಆ ಮಗು ಚೆನ್ನಾಗಿದ್ದಾನಂತೆ. ಕಥಕಳೀಲಿ ಬಹಳ ದೊಡ್ಡ ಹೆಸರಂತೆ. ಅವನಿಗೂ ಗೋವಿಂದನ್ ಅಂತಲೇ ಹೆಸರಿಟ್ಟಿದ್ದಾರಂತೆ!

ರಂಗರಾಜ್: ಕೋಮರಂ ಗೋವಿಂದನ್ ನಾಯರ್ ಅವತ್ತೇ ಸತ್ತನಂತೇನು?

ಮೇಜರ್ : ಇಲ್ಲ. ಅದೇ ಅವನ ಕೊನೆಯ ಕೋಮರಂ. ಅವತ್ತು ಬಹಳ ಜೋರಾಗಿ ತನ್ನನ್ನು ತಾನು ಕತ್ತಿಯಿಂದ ಹೊಡೆದುಕೊಂಡವನು ಬಹಳ ಪೆಟ್ಟು ಮಾಡಿಕೊಂಡಿದ್ದನಂತೆ. ಮೆದುಳಿಗೆ ಪೆಟ್ಟಾಗಿ ಹಾಸಿಗೆ ಹಿಡಿದವನು ಮತ್ತೇಳಲೇ ಇಲ್ಲವಂತೆ. ಮೂರು ವರ್ಷ ಆದಮೇಲೆ ಅವನು ಸತ್ತನಂತೆ. ಮೂರು ವರ್ಷ ನರಳಿ ನಲವತ್ತು ವರ್ಷದ ಕೆಳಗೆ ಸತ್ತನಂತೆ. ಪುನರ್ಜನ್ಮ ಅನ್ನೋದು ನಿಜ ಅನ್ನಿಸುತ್ತಲ್ಲವಾ ರಂಗರಾಜ್. ನಮ್ಮ ರಾಮಪ್ಪನ ವಯಸ್ಸೂ ನಲವತ್ತು ವರ್ಷ ಅಲ್ಲವಾ? ಅವನು ಸತ್ತಿದ್ದು, ಇವನು ಹುಟ್ಟಿದ್ದು ನಲವತ್ತು ವರ್ಷದ ಕೆಳಗೆ. ಅವನ ಸಾವೂ ಇವನ ಹುಟ್ಟೂ ಒಂದೇ ವರ್ಷ ಅಂದಮೇಲೆ .........

ರಂಗರಾಜ್: ಇಲ್ಲ ಮೇಜರ್, ಅದೇ ಈಗ ನನ್ನ ಅನುಮಾನ.

ಮೇಜರ್ : ಅನುಮಾನ? ಯಾಕೆ—ನೀವು ಹೇಳ್ತಿದ್ರಲ್ಲಾ ಅವನ ಆಫೀಸ್ ರೆಕಾರ್ಡ್ಸ್ ನೋಡಿದ್ದೀರಿ ಅಂತ. ಅವತ್ತು ಅವನು ಹೇಳಿದ್ದೂ ಅಷ್ಟೇ ಅಲ್ಲವಾ?

ರಂಗರಾಜ್: ಅದೆಲ್ಲಾ ಹೌದು, ಮೇಜರ್.

ಮೇಜರ್ : ಅರೇ ರಂಗರಾಜ್, ಹಾಗಾದ್ರೆ ನಮ್ಮ ಪೂರ್ವೀಕರು ಹೇಳಿದ್ದು......

ರಂಗರಾಜ್: ತಾಳಿ ಮೇಜರ್, ರಾಮಪ್ಪ ಹೇಳಿದ್ದು ತನಗೆ ನಲವತ್ತು ವರ್ಷ ವಯಸ್ಸೂಂತ. ಅವನು ಹೇಳಿದ್ದೇ ಅವನ ಆಫೀಸಿನಲ್ಲಿ ಬರೆದುಕೊಂಡಿರೋದು. ಆದರೆ ಅವನು ಕೊಟ್ಟ ವಯಸ್ಸು ಸರಿಯಲ್ಲ.

ಮೇಜರ್ : ಸರಿಯಲ್ಲಾ ಯಾಕೆ ?

ರಂಗರಾಜ್ : ಆವತ್ತು ಅವನು ಹೇಳಿದ್ದು ಗಾಂಧಿ ಸತ್ತಾಗ ಅವನು ಹೈಸ್ಕೂಲಿನಲ್ಲಿದ್ದ.

ಮೇಜರ್ : ಹೌದು ಆದರೆ ಅದಕ್ಕೂ ಇದಕ್ಕೂ .........

ರಂಗರಾಜ್ : ಸಂಬಂಧ ಇದೆ ಮೇಜರ್. ಆಗ ಹೈಸ್ಕೂಲಿನಲ್ಲಿ ಕಡಿಮೆ ಅಂದ್ರೆ IV form ಅಥವ ಒಂಬತ್ತನೆ ಕ್ಲಾಸು,

ಮೇಜರ್ : ಹೌದು.

ರಂಗರಾಜ್ : ಕಡಿಮೇ ಅಂದ್ರೆ ಆಗ ಅವನಿಗೆ ಹದಿಮೂರು ಹದಿನಾಲ್ಕು ವರ್ಷ ವಯಸ್ಸು.

ಮೇಜರ್ : ಅರೇ ಹೌದಲ್ಲಾ.

ರಂಗರಾಜ್ : 1948 ರಲ್ಲಿ ಹದಿನಾಲ್ಕಾದರೆ ಈಗ ಅವನಿಗೆ ಕಡಿಮೇ ಅಂದ್ರೂ ನಲವತ್ತಮೂರು ವರ್ಷ ವಯಸ್ಸು.

ಮೇಜರ್ : ಅರೇ ರಂಗರಾಜ್ ನೀವು ಹೇಳೋದು ಕರೆಕ್ಟು.

ರಂಗರಾಜ್ : ಹೂಂ, ಅಂದರೆ ರಾಮಪ್ಪ ಹುಟ್ಟಿ ಮೂರು ವರ್ಷ ಆದ ಮೇಲೆ ಕೋಮರಂ ಗೋವಿಂದನ್ ನಾಯರ್ ಸತ್ತಿದ್ದು.

ಮೇಜರ್ : ಅಂದರೆ ಅವನು ಇವನಾಗಿ ಹುಟ್ಟಿದ್ದು ಸಾಧ್ಯವಿಲ್ಲ ಅನ್ನಿಸುತ್ತಲ್ಲವಾ? ಮತ್ತೆ ಇವನ ನೆನಪುಗಳು .........

ರಂಗರಾಜ್ : ಅದೇ ಈಗ ಪ್ರಶ್ನೆ. ಕೇರಳದ ವಿವರಗಳು ಅದೂ ಗೋವಿಂದನ್ ನಾಯರ್ ವಿವರಗಳು, ಅವನ ಕಡೆಯ ಕೋಮರಂನ ವಿವರಗಳು ಇವನಿಗೆ ಹೇಗೆ ಗೊತ್ತಾದುವು ? ಈ ರಾಮಪ್ಪ ಮೈಸೂರು ಬಿಟ್ಟು ಹೋಗಿಲ್ಲ.

ಮೇಜರ್ : ಅರೇ ರಂಗರಾಜ್, ಆ ಕಡೇ ಕೋಮರಂ ಆದ ಮೇಲೆ ಗೋವಿಂದನ್ ನಾಯರ್ ಮೂರು ವರ್ಷ ಸುಮ್ಮನೆ ನರಳಿದ ಅಷ್ಟೇ. ಆ ಕೋಮರಂನಲ್ಲೇ ಅವನ ಆತ್ಮ ಅವನ್ನ ಬಿಟ್ಟು.

ರಂಗರಾಜ್ : ಅದಕ್ಕೆ ಏನು ಪುರಾವೇ ? ರಾಮಪ್ಪ ಗಾಂಧಿ ಸತ್ತಾಗ ಹೈಸ್ಕೂಲಿನಲ್ಲಿರ ದಿದ್ದರೆ, ಅದೇ ತಪ್ಪಾದರೆ ......... ?

ಮೇಜರ್ : ಅರೇ, ಅವನು ವಿವರಗಳನ್ನೆಲ್ಲಾ ಹೇಳಿದ. ಅವನ ಸ್ನೇಹಿತರೂ, ಸ್ಕೌಟು ಮೇಷ್ಟ್ರು, ಕುಟ್ಟಿಮೇಷ್ಟ್ರು .........

ರಂಗರಾಜ್ : ಮೇಜರ್, ಕುಟ್ಟಿಮೇಷ್ಟ್ರು ಕೇರಳದವರಲ್ಲವಾ. ಅವರೇನಾದ್ರೂ ಇವನಿಗೆ ಕೇರಳದ ಕಥೆ ಹೇಳಿದ್ರೋ ?

ಮೇಜರ್ : ಅರೇ ಅದೂ ಸಾಧ್ಯ ಅಲ್ಲವಾ? ಪುನರ್ಜನ್ಮ ಒಂದು ಪ್ರಶ್ನೇನೇ ಆಗಿ ಉಳೀತು. ರಂಗರಾಜ್, ನೀವು ಇನ್ನೊಂದಷ್ಟು ಜನರನ್ನು ವಶೀಕರಣಪಡಿಸಿ ನೋಡಬೇಕು,

ಹೆಣ್ಣು 4 : ಕ್ಷಮ್ಸಿ ಸಾರ್, ಕಾಫಿ ತರಿಸಿದ್ದೀನಿ.

ರಂಗರಾಜ್: ಇಲ್ಲ ಮೇಜರ್, ನನಗೆ ಸಾಕಾಗಿ ಹೋಗಿದೆ. ಹೆಚ್ಚು ಖಚಿತವಾಗಿ, ಸ್ಪಷ್ಟವಾಗಿ ಪರೀಕ್ಷೆ ಮಾಡಬಹುದಾದ ವಿಷಯಗಳೇ ನಮ್ಮ ಜಾಯಮಾನಕ್ಕೆ ಸರಿ. ಕಾಫಿ ತಗೊಳ್ಳಿ.

ವಿಲ್ಲು — Bridge music

## ಪಾತ್ರಗಳು

ಗಂಡ

ಹೆಂಡತಿ

ಗಾಯತ್ರಿ; ಅವರ ಮಗಳು

ವ್ಯಕ್ತಿ: ಹಜಾಮ ಮುನಿಸ್ವಾಮಿ

# ಗಿಳಿಯು ಪಂಜರದೊಳಿಲ್ಲ

## ದೃಶ್ಯ ೧

(ಮಧ್ಯಮ ವರ್ಗದ ಮನೆ. ತೆರೆ ಏಳುವ ಸಮಯದಲ್ಲಿ ಮಗುವಿನ ಅಳು. ತಾಯಿ ಸುಮ್ಮನಿರಿಸಲು ಹಾಡುವ ಹಾಡು, ಚೀರಾಟ, ಗಂಟೆ ಇತ್ಯಾದಿ ಸಪ್ಪಳ. ತೆರೆ ಎದ್ದಾಗ ಸುಮಾರು ಹನ್ನೆರಡು ವರ್ಷದ ಹುಡುಗಿ ಗಿಲಕಿಗಾಗಿ ಕುರ್ಚಿ, ಟೇಬಲ್ ಕೆಳಗೆ ಹುಡುಕುತ್ತಿರುವಳು, 'ಸಿಗ್ತಾ ಇಲ್ಲಮ್ಮ' ಎಂದು ಹೇಳಿ ಒಳಗೆ ಹೋಗುವಳು. ಮನೆಯ ಯಜಮಾನರ ಪ್ರವೇಶ.)

ಗಂಡ: ಶಭಾಸ್, ಹ್ಯಾಗೆ ಅಳ್ತಿದಾನೆ ನನ್ನ ಮಗ! ಗಂಗೂ, ಪಾಪ ಯಾಕೆ ಅಳ್ತಿದೆ ಗೊತ್ತಿಲ್ಲವೇನೇ?

ಹೆಂಡತಿ: ಹೇಳಿ.

ಗಂಡ: ಬಾ ಇತ್ತ. ನಿನ್ನ ಕುಮಾರನ ದರ್ಶನ ಆಗಲಿ.

ಹೆಂಡತಿ: ಮಲಗುತ್ತೆ, ಸುಮ್ಮನಿರಿ.

ಗಂಡ: ಏನಂದೆ?

ಹೆಂಡತಿ: (ಗಟ್ಟಿಯಾಗಿ) ಮಲಗುತ್ತೆ! ಸುಮ್ಮನಿರಿ!

ಗಂಡ: ಭಪ್ಪರೆ, ನನ್ನ ಮಗ ಮಲಗ್ತಾನೆ!

ಹೆಂಡತಿ: ಕಪ್ಪೆ ಥರ ಒಟಗುಟ್ಟೋದೇ ನಿಮ್ಮ ಕೆಲಸ.

ಗಂಡ: ಬಾರೆ ಮತ್ತೆ ಪರವಾಗಿಲ್ಲ. ಗಾಯತ್ರಿ ಮಲಗಿಸ್ತಾಳೆ.

ಹೆಂಡತಿ: ಸರಿ (ಬಂದು) ಬಂದೆ, ಅದೇನು ಹೇಳಿ.

ಗಂಡ: ನನಗೆ ಅದೇ ಪ್ರಾಬ್ಲಮ್ ಚಿನ್ನ:
ಬೀಜದಿಂದ ಮರವೋ ಮರದಿಂದ ಬೀಜಾನೋ—ಇದ್ದ ಹಾಗೆ, ನಿನ್ನ ಹಾಡಿನಿಂದ ಅತ್ತನೋ, ಅವನು ಅತ್ತಿದ್ರಿಂದ ಹಾಡಿದೆಯೋ—

ಹೆಂಡತಿ: ಮಹಾ! ನಂಗೂ ಅದೇಕಣ್ರೀ ಪ್ರಾಬ್ಲಮ್, ಹುಡುಗ್ರು ಧಡ್ರು ಅಂತ ಪಾಠ ಹೆಳ್ತೀರೋ, ನೀವು ಪಾಠ ಹೇಳಿದ್ರಿಂದ್ರ ಧಡ್ಡರಾದ್ರೋ—

ಗಂಡ: (ನಗು ಸಂಪೂರ್ಣ ಅಳು ನಿಲ್ಲಿಸಿದ್ದು ಕೇಳಿ) ಹ್ಞಾ! ನೋಡು ಯಾರು ಹೇಳಿದ್ದು ನಿಜ?

ಹೆಂಡತಿ: ನಿಮ್ಮ ಗದ್ದಲಕ್ಕೆ ಹೆದರ್ಕೊಂಡಿರಬೇಕು, ಅಷ್ಟೆ—

ಗಂಡ: ಅಲ್ಲ!

ಹೆಂಡತಿ: ಗಂಟೆ ಸದ್ದಿಗೆ ಸುಮ್ಮನಾಗಿರಬೇಕು.

ಗಂಡ: ಅಲ್ಲ!

ಹೆಂಡತಿ: ರಿಪಿ ರಿಪಿ ಮಾಡೋದೇ ನಿಮ್ಮ ಕೆಲಸ, ಕೈಬಿಡಿ.

ಗಂಡ: ಕೂತ್ಕೋ, ಮಾತಾಡೋಣ.

ಹೆಂಡತಿ: ಕೈ ಬಿಡ್ರೀ, ಗಾಯಿತ್ರಿ ಬರ್ತಾಳೆ.

ಗಂಡ: ಕೂತ್ಕೋ ಅಂದ್ರೆ ಕೂತ್ಕೊಬೇಕು. ಗಾಯಿತ್ರಿ ನಾಳೆ ನಿಂಗೆ ಟೆಸ್ಟ್ ಅಲ್ವಾ?

ಗಾಯಿತ್ರಿ: ಹೌದಪ್ಪ.

ಗಂಡ: ಅಲ್ಲೇ ಕೂತ್ಕೊಂಡು ಓದ್ಕೋ ಮರಿ. ಈ ಸಲ ಫಸ್ಟ್ ಕ್ಲಾಸ್ ಬರಬೇಕು.

ಹೆಂಡತಿ: ಬಹಳ ಪ್ರೀತಿ ಮಗಳ ಮೇಲೆ. ಅವಳ ಕ್ಲಾಸ್ ಯಾವುದು ಹೇಳಿ?

ಗಂಡ: (ಗೊತ್ತಿಲ್ಲದೆ) ಗೊತ್ತು ಬಿಡೆ. (ಈ ಮಧ್ಯೆ ತನ್ನ ಯೋಗ್ಯತೆಗೆ ತಕ್ಕ ರೀತಿಯಲ್ಲಿ ಪ್ರೀತಿ ತೋರುವನು.)

ಹೆಂಡತಿ: ಏನು ಗೊತ್ತು, ಹೇಳಿ.

ಗಂಡ: ನಾವು ನಂದಿಗೆ ಹೋಗಿದ್ದಾಗ ಅವಳಿಗೆ ಏಳು ವರ್ಷ.

ಹೆಂಡತಿ: ಸರಿ, ಏಳರಲ್ಲಿ ಎರಡು ಹೋದ್ರೆ ಐದು.

ಗಂಡ: ಊಟಿಯಲ್ಲಿದ್ದಾಗ ನಾನೇ ಹದಿನಾಲ್ಕರ ಮಗ್ಗಿ ಬರೆದುಕೊಟ್ಟಿದ್ದೆ.

ಹೆಂಡತಿ: (ಅವನು ನೆನಸಿಕೊಳ್ಳುವ ವಿಧಾನಕ್ಕೆ ನಕ್ಕು) ಅದ್ಹ್ಯಾಗೆ ಪಾಠ ಹೇಳಿ ಕೊಡ್ತೀರ್ರೀ ನೀವು? (ಗಟ್ಟಿಯಾಗಿ ನಗುವಳು)

ಗಂಡ: (ತಾನೂ ನಗಲು ಯತ್ನಿಸಿ, ಆದರೆ ಪೆಚ್ಚಾಗಿ ಮುಖಸಿನಿಂದ) ನಿನಗೇನು ಹುಚ್ಚೇನೇ?

ಹೆಂಡತಿ: ಹುಚ್ಚಲ್ಲ, ತಮಾಷೆ! ನಿಮ್ಮ ವಯಸ್ಸು ಹ್ಯಾಗೆ ಹೇಳ್ತೀರಿ, ಹೇಳಿ.

ಗಂಡ: ನನ್ನ ಸರ್ಟಿಫಿಕೇಟಲ್ಲಿ ಇದೆ.

ಹೆಂಡತಿ: ಅಲ್ಲ (ಮತ್ತೆ ನಕ್ಕು). ಹಾಗಲ್ಲ. ನಾಲ್ಕು ವರ್ಷದ ಕೆಳಗೆ ಕೆಂಪು ಶರ್ಟು ಹಾಕ್ಕೊಂಡು ಬೀದೀಲಿ ಹೋಗ್ತಿದ್ರಿ.

ಸಾವ್ಕಾರ್ ಮುನಿಯಪ್ಪನ ನಾಯಿ ಅಟ್ಟಿಸಿಕೊಂಡು ಬಂತು,
ಅಲ್ಲಿಂದ ಕಾಲು ಕಿತ್ರಿ—
ಒಂದು ರಿಕ್ಷಾಕ್ಕೆ ಢಿಕ್ಕಿ ಹೊಡೆದ್ರಿ—
ಪೋಲೀಸ್‌ನೋನು ಬಂದು......

ಗಂಡ: ಹಳೀ ಕತೆ ಮತ್ತೆ ಮತ್ತೆ ಹೇಳಬೇಡವೇ—
(ಎಂದು ಅವಳು ನಗುತ್ತಿದ್ದಂತೆ ಅಟ್ಟಿಸಿಕೊಂಡು ಹೋಗುವನು.)

ಗಾಯತ್ರಿ: (ಕೆಮ್ಮಿ) ಇಲ್ಲಿ ತುಂಬ ಕತ್ತಲೆ ಕಣಪ್ಪ.

ಹೆಂಡತಿ: (ನಕ್ಕು ಸುಸ್ತಾಗಿ ಸಿಕ್ಕು) ನನ್ನ ಮುಟ್ಟಬೇಡ್ರಿ, ನಿಮ್ಮ ತಲೆ ನೋಡ್ಕೊಳ್ಳಿ—

ಗಂಡ: (ಅವಳು ಸಿಕ್ಕಿದಳೆಂಬಂತೆ) ಹೆಂಗಸರು ಮಾತ್ರ ಕನ್ನಡಿಯಿಲ್ಲದೆ ತಮ್ಮ ತಲೆ ತಾವೇ ನೋಡ್ಕೋತಾರೆ—

ಹೆಂಡತಿ: ತಲೆ ಹರಟೆ! ಕ್ಷೌರ ಮಾಡಿಸಿಕೊಂಡು ಬಂದು ವೈಲಿಗೇಲಿ—

ಗಂಡ: ಹೌದಲ್ಲ! ಮರೆತೇ ಬಿಟ್ಟಿದ್ದೆ—ನಿನ್ನನ್ನು ಅದಕ್ಕೇ ನಾನು ಕರೆದದ್ದು.

ಹೆಂಡತಿ: ಸರಿಯಾಗಿ ಮಾತನಾಡದಿದ್ರೆ ಒಂದಕ್ಕೆ ಎರಡರ್ಥ ಆಗುತ್ತೆ. ಅದೇನು ಹೇಳಿ.

ಗಂಡ: ಹೇಳ್ತೀನೆ, ಇರು. (ಎಂದು ಸಿಗರೇಟನ್ನು ಸಾವಧಾನವಾಗಿ ಹಚ್ಚಿಕೊಳ್ಳುವನು. ಈ ಕೆಲಸ ಹಂತ—ಹಂತವಾಗಿ ಸಾಗುತ್ತಿದ್ದಂತೆ ಮಾತಾಡುವಳು.)

ಹೆಂಡತಿ: ಇವತ್ತು ಒಂದನೇ ತಾರೀಖು.

(ಮೌನ)

ಪಾಪ ಹುಟ್ಟಿದ ಹಬ್ಬ.

(ಮೌನ)

ನೆನಪಿರಲಿ, ಜಯಾ ಸೀರೆಗೆ ಅಂತ ಕಳಿಸಿದ ದುಡ್ಡನ್ನೆಲ್ಲ ಖರ್ಚು ಮಾಡಿಕೊಂಡು ಕೂತಿದ್ದೀರಿ.

ಗಂಡ: ಮುಗೀತಾ ನಿನ್ನ ಒಂದನೇ ತಾರೀಖಿನ ಪುರಾಣ?

ಹೆಂಡತಿ: ನಿಮ್ಮ ಪುರಾಣ ಹೇಳಿ.

ಗಂಡ: ಇದು ನನ್ನ ಹಜಾಮನ ಕತೆ.

(ತಲೆ ತೋರಿಸುತ್ತಾ)

ನನ್ನ ಹಜಾಮನಕತೆ, ಅಂದೆ.

(ನಗುವಳು)

ನಗಬೇಡ. ಕೇಳು. ಹೆಂಗಸರಿಗೆ ಕ್ಷೌರದ ಕತೆ ಕೊಂಚ ಕಷ್ಟ.

(ನಗುವಳು)

ನಗು, ನಗು. ಹೆಂಗಸರಿಗೇನು, ತಲೆ ಮೇಲೆ ಕೂದಲು ಬೆಳೀತಿದ್ರೆ ಆರಾಮಾಗಿ ಹಾಡು ಹೇಳ್ತಾ ಇರ್ತೀರಿ; ಎಣ್ಣೆ ಹಾಕಿ ಹೂವಿನ ಘಮ ಘಮ ಕೊಟ್ಟು ಬೆಳೀ ಬೆಳೀ ಅಂತೀರಿ; ಮೋಟು ಜಡೆ ಆದ್ರೆ ಕೆದರಿಕೊಂಡು ಬಾಬ್ ಅಂತೀರಿ— ಉದ್ದ ಜಡೆ ಆದ್ರೆ ಅದನ್ನ ಗಂಡಸರ ಕುತ್ತಿಗೆಗೆ ಸುತ್ತಿ—

ಹೆಂಡತಿ: ಹುಂ, ಸುತ್ತಿ?

ಗಂಡ: ಹೋಗ್ಲಿ ಬಿಡು, ಗಂಡಸರಿಗೆ ಮಾತ್ರ ಒಂದು ಚೋಟುದ್ದ ಕೂದಲು ಸಾಕು. ಪಕ್ಕದಲ್ಲಿ ನೀಟಾಗಿ ಕತ್ತರಿಸಿರಬೇಕು; ಕತ್ತಿ ತಕೊಂಡು ಹೆರೆದು ಗಾರ್ಡನಿಂಗ್ ಮಾಡಿರಬೇಕು; ಎಲ್ಲೆಲ್ಲಿ ಎಷ್ಟೆಷ್ಟು ಕೂದಲಿರಬೇಕೋ ಅಷ್ಟಿದ್ದರೆ ಚೆಂದ.

ಹೆಂಡತಿ: (ತುಂಟತನದಿಂದ) ಕೂದಲೇ ಇಲ್ಲದಿದ್ರೆ?

ಗಂಡ: ಕೂದಲೇ ಇಲ್ಲದಿದ್ರೆ ಟೊಪ್ಪಿಗೆ—ಗಾಂಧಿ ಟೊಪ್ಪಿಗೆ, ರಟ್ಟಿನ ಟೊಪ್ಪಿಗೆ, ಗುಡಾಣದಂಥ ಟೊಪ್ಪಿಗೆ, ಕೆಳಗೆ ನಾಲ್ಕೇ ನಾಲ್ಕು ಕೂದಲಿದ್ರೂ ಅದನ್ನು ಕತ್ತರಿಸಿ ಅದನ್ನು ಹದ ಮಾಡೋಕೊಬ್ಬ ಹಜಾಮ ಬೇಕು. (ಅವಳನ್ನೇ ನೋಡುತ್ತ—ನಕ್ಕು) ನೀನು ಬೋಳಾಗಿದ್ರೆ ಹೇಗಿರ್ತಿದ್ದೆ ಅಂತ ನೆನೆದ್ರೆ ನಗು ಬರುತ್ತೆ.

ಹೆಂಡತಿ: ಹೋಗ್ರೀ—ಕೆಟ್ಟ ನಾಲಗೆ,

ಗಂಡ: ನಾನೆಷ್ಟೋ ನೋಡೀದೀನಿ, ಹೆಂಗಸರಿಗೆ ಬಕ್ಕತಲೆ ಆದದ್ದು ಕಮ್ಮಿ. ಈಚೀಚೆಗೆ ಗಂಡ ಸತ್ತಿದ್ದೋರೂ ಕೂಡ ಇಷ್ಟುದ್ದ ಜಡೆ ಹಾಕ್ಕೊಂಡು— .

ಹೆಂಡತಿ: ಅದೇನೋ ಕತೆ ಹೇಳ್ತೀನಿ ಅಂದಿರಲ್ರೀ, ಒಳ್ಳೆ ಪ್ರೊಫೇಸರ್ ನೀವು!

ಗಂಡ: ಕತೆ ಅಲ್ವೆ, ನಡೆದದ್ದು.

ಹೆಂಡತಿ: ನಡೆದದ್ದು, ಕೂತದ್ದು ಎರಡನ್ನೂ ಹೇಳಿ.

ಗಂಡ: ಸರಿ ಕೇಳು. ಪ್ರತೀ ತಿಂಗಳು ಒಂದನೇ ತಾರೀಖು ಹೋಗ್ತೇನಲ್ಲ, ಆ ಹಜಾಮನ ಅಂಗಡಿಗೆ ಹೋದೆ. ಅಂದ್ರೆ ಇವತ್ತು ಹೋದೆ. ನೀನು, ಕೂದಲು ಎಷ್ಟುದ್ದ ಆಗಿದೆ ಅಂದ್ರೆ ಎದೆಗೆಲ್ಲ ಚುಚ್ಚುತ್ತೆ ಅಂತ—

ಹೆಂಡತಿ: ಬರೀ ಹಲ್ಕಾನಪ್ಪ ನೀವು, ಕತೆ ಹೇಳಿ.

ಗಂಡ: ಆ ಅಂಗಡಿಗೆ ಹೋದೆ. ಹಜಾಮ ಸುಮ್ಮನೆ ನಿಂತಿದ್ದ—ಗಿರಾಕಿಗಳೇ ಕಮ್ಮಿ ಅವನಿಗೆ. ಇಡೀ ತಿಂಗಳು ನನಗಾಗಿ ಕಾಯುತ್ತಿದ್ದನೇನೋ ಅನ್ನೋ ಹಾಗೆ ನಿಂತಿದ್ದ. ಹೋದ ಕೂಡಲೇ ಕುರ್ಚಿಯ ಧೂಳು ಹೊಡೆದು ಸಜ್ಜಾದ. ಕನ್ನಡೀನ ನನ್ನ ಮುಖಕ್ಕೆ ಸರಿಯಾಗಿ ಇಟ್ಟ. ನಿತ್ಯದ ಹಾಗೇ ಇದ್ದ—ತುಟಿ ಪಿಟಕೆನ್ನದೆ. ನನ್ನ ತಲೇ ಮೇಲೆ ಕೈಯಾಡಿಸಿ, ಮಿಷನ್ ತಗೊಂಡು, ಚಕ್ ಚಕಾ, ಚಕ್ ಚಕಾ ಅಂತ ಶುರು ಮಾಡಿದ.

ಹೆಂಡತಿ: ಅಲ್ರೀ ಅವನು ಒಂದು ಮಾತೂ ಆಡೋಲ್ವಾ?

ಗಂಡ: ಅವನು ಬೇರೆ ಥರಾ ಹಜಾಮ ಕಣೇ—ಈ ನಾಲ್ಕು ವರ್ಷದಿಂದ ನಾಲ್ಕು ಮಾತು ಆಡಿರಬಹುದು ಅಷ್ಟೆ.

ಹೆಂಡತಿ: ನಾಲ್ಕು ಮಾತೇ? ಎಂಥಾ ನಾಲ್ಕು ಮಾತು?

ಗಂಡ: ಸಿಸರ್ ಕಟ್ ಬೇಕೇ ಸಾರ್ ಅಂದ, ನಾಲ್ಕು ವರ್ಷದ ಕೆಳಗೇ, ನಾನು 'ಹೂಂ' ಎಂದೆ—

ಹೆಂಡತಿ: ಆಮೇಲೆ?

ಗಂಡ: ಮೀಸೆ ಕತ್ತರಿಸಬೇಕೇ ಸಾರ್ ಅಂದ, ಒಂದು ಸಲ; ಪೂರ್ತಿ ಹೆರೆದು ಬಿಡು ಅಂದೆ—ನುಣ್ಣಗೆ ಹೆರೆದುಬಿಟ್ಟ.

ಹೆಂಡತಿ: ಆಮೇಲೆ?

ಗಂಡ: ಕೂದಲು ಕೊಂಚ ಬೆಳ್ಳಗಾಗ್ತಿದೆ ಸಾರ್, ಅಂದ. ಬಣ್ಣ ಹಚ್ಕೊಳ್ತೀನೆ ಅಂದೆ.

ಹೆಂಡತಿ: ನೀವು ಯಾರು ಅಂತ ಅವನಿಗೆ ಗೊತ್ತಿಲ್ವಾ?

ಗಂಡ: ಇಲ್ಲ, ಅವನು ಯಾರು ಅಂತ ನನಗೆ ಗೊತ್ತಿಲ್ಲ.

ಹೆಂಡತಿ: ಸುಳ್ಳು, ಅವನು ಹಜಾಮ ಅಂತ ನಿಮಗೆ ಗೊತ್ತು.

ಗಂಡ: ಹಜಾಮರ ವಿಷಯ ಹೆಂಗಸರಿಗೇನು ಗೊತ್ತು, ಹೇಳ್ತೀನೆ ಕೇಳು—ನೀನು ಷಾಪಿಗೆ ಹೋದೆ ಅಂತ ಇಟ್ಕೋ—

ಹೆಂಡತಿ: ಥೂ!

ಗಂಡ: ನಾನೇ ಹೋದೆ ಅಂತಿಟ್ಕೋ— ಮುಕ್ಕಾಲು ಮೂರು ಪಾಲು ಹಜಾಮರು ಒಳ್ಳೆ ಡಿಪ್ಲೊಮ್ಯಾಟ್ಸ್ ಥರ ಮುಗುಳ್ನಕ್ಕು ಬನ್ನಿ ಸಾರ್ ಅಂತಾರೆ. ನೀನು ರಾಜ ಆಗಿರು, ಕೊತ್ತಂಬರಿ ಬೀಜ ಆಗಿರು, ಬನ್ನಿ ಸಾರ್ ಅಂತಾರೆ, ಕೂತ್ಕೊಳ್ಳಿ ಸಾರ್, ಅಂತಾರೆ. ನಾನು ಕೂತ್ಕೊಂಡೆ ಅನ್ನು—ಏನು ಸಾರ್, ಈಚೆಗೆ ಕಾಣಿಸಲಿಲ್ಲ, ಅಂತಾರೆ—ನಾನು ಈಚೆಗೆ ವ್ಯಾನಿಷಿಂಗ್ ಕ್ರೀಮ್ ಹಚ್ತೀನೆ ಅಂದ್ರೆ ಪೆದ್ದು ಪೆದ್ದಾಗಿ ನಗ್ತಾರೆ. ನಿಮ್ಮ ಮಾತು ಒಳ್ಳೆ ಮಜಾ ಸಾರ್, ಏನು

ಸಮಾಚಾರ ಅಂತಾರೆ—'ನಂಗೆ ಸಮಾಚಾರ ಗೊತ್ತಿಲ್ಲ'—ಸುಮ್ನೆ ನಕ್ಕರೆ ಇವತ್ತು ಯಾವ ಕುದುರೆ ಗೆಲ್ಲುತ್ತೆ ಸಾರ್, ಟ್ರ್ಯಾಡರ್ ಜೆಟ್ಟೋ, ಗೋಲ್ಡ್ ಬಾಂಡೋ ಅಂತಾರೆ; ಕುದುರೆ ಯಾಕಪ್ಪ ಗೆಲ್ಲುತ್ತೆ ಅಂದ್ರೆ, ರೇಸಿನ ಮೇಲೆ ಭಾಷಣ ಕೊಟ್ಟು ನನ್ನ ಹೆಣ ಹಾಕ್ತಾರೆ.

ಹೆಂಡತಿ: ಅವರು ಹಜಾಮರು ಯಾಕಾದದ್ದು ಅಂತ ಹೇಳಬೇಕು ನೀವು—

ಗಂಡ: ರೇಸಿನಿಂದ ಹಜಾಮರಾದರೋ, ಹಜಾಮರಿಂದ ರೇಸಾಯಿತೋ—

ಹೆಂಡತಿ: ಸಾಕಪ್ಪಾ ಸಾಕು—

ಗಂಡ: ಆದರೆ ನನ್ನ ಹಜಾಮ ಸ್ಪೈಲೆಂಟ್—ಅದಕ್ಕೇ ಅವನು ನನಗೆ ಇಷ್ಟ. ಕಲ್ಪನೆಯ ವ್ಯಕ್ತಿ; ಅವನ ಕೆಲಸ ಆಯ್ತು, ಅವನಾಯ್ತು.

ಹೆಂಡತಿ: ಇಷ್ಟೇನಾ ಕತೆ?

ಗಂಡ: ಇಷ್ಟೇ ಆಗಿದ್ರೆ ನಾನ್ಯಾತಕ್ಕೆ ಹೇಳ್ತಿದ್ದೆ? ಇವತ್ತು ಸುಮ್ನೆ ಕ್ಷೌರ ಮಾಡ್ತಿದ್ದ—ಇದ್ದಕ್ಕಿದ್ದ ಹಾಗೆ ಮಾತಾಡಿದ.

ಹೆಂಡತಿ: ಹೌದ? ಏನಂದ?

ಗಂಡ: ತಮಗೆ ತಂದೆ ಇದಾರಾ ಸಾರ್ ಅಂದ—

(ಮೌನ)

ಹೌದು ಅಂದೆ. ಇದ್ದಾರೆ—ಊರಲ್ಲಿದ್ದಾರೆ ಅಂದೆ.

(ಮೌನ)

ನೀವೊಬ್ಬರೇ ಮಕ್ಕಳಾ ಸಾರ್ ಅಂದ—
ಹೌದು ನಾನೊಬ್ಬನೇ ಅಂದೆ.

(ಮೌನ)

ತಮಗೆ ಮಕ್ಕಳು ಇದ್ದಾರಾ ಅಂದ—
ಇಬ್ಬರು ಇದ್ದಾರೆ ಅಂದೆ.

ಹೆಂಡತಿ: ಆಮೇಲೆ.

ಗಂಡ: ಅಷ್ಟಕ್ಕೇ ಸುಮ್ಮನಾದ—ಮತ್ತೇನಾದರೂ ಕೇಳಬಹುದು ಅಂತ ನೋಡಿದೆ—ಆದರೆ ಮಾತನಾಡಲಿಲ್ಲ.

(ಮೌನ—ನಕ್ಕು)

ವಿಚಿತ್ರ ಅಲ್ಲವಾ, ಪ್ಯೈಲಿ ಮುಖದ ಆ ಮನುಷ್ಯ ಎಷ್ಟೋ ವರ್ಷದಿಂದ ನನ್ನನ್ನು ನೋಡ್ತಿದ್ದಾನೆ. ಮಾತೇ ಆಡ್ತಿರಲಿಲ್ಲ—ಈಗ ಇದ್ದಕ್ಕಿದ್ದ ಹಾಗೆ ಮಾತಾಡಿದ—ಅವನ ಮಾತಿಗೆ ವಿಚಿತ್ರ ಶಕ್ತಿ ಇತ್ತು.

(ಮೌನ.)

ನಾನೂ ಅವನನ್ನು ಪ್ರಶ್ನೆ ಕೇಳಬೇಕು ಅಂದುಕೊಂಡೆ—ಆದರೆ ಅವನ ಮೌನ ನೋಡಿ ಸುಮ್ಮನಾದೆ. ಮಾತಿಲ್ಲದೆ ನಮ್ಮ ಮಧ್ಯೆ ಸಂಬಂಧ ಬೆಳೆದ ಹಾಗಿತ್ತು.

ಹೆಂಡತಿ : ಅವನ್ನ ನೋಡೋಕೆ ಹೇಗಿದ್ದಾನೆ?

ಗಂಡ: ಕಪ್ಪಗಿದ್ದಾನೆ. ಯಾವಾಗಲೂ ಗಂಭೀರವಾಗಿರ್‍ತಾನೆ.

ಹೆಂಡತಿ : ಖುಷಿ ಖುಷಿಯಾಗಿರ್‍ತಾನಾ?

ಗಂಡ : ಇಲ್ಲ, ಖುಷಿಯೂ ಇಲ್ಲ, ದುಃಖವೂ ಇಲ್ಲ.

(ಹೊರಗಡೆ ಬಾಗಿಲು ತಟ್ಟಿದ ಶಬ್ದ. 'ಯಾರು ನೋಡು' ಅನ್ನುವನು. ಅವಳು ಪ್ರೇಕ್ಷಕರಿಗೆ ಕಾಣಿಸುವ ಬಾಗಿಲು ತೆಗೆದು ಹೊರಗೆ ನೋಡುತ್ತ 'ಯಾರು ಬೇಕಿತ್ತು' ಎನ್ನುವಳು. ವ್ಯಕ್ತಿ ಪ್ರೇಕ್ಷಕರಿಗೆ ಕಾಣುವುದಿಲ್ಲ. ಮತ್ತೆ 'ಯಾರು ಬೇಕಿತ್ತು' ಅನ್ನುವಳು. ಈ ವಿಚಿತ್ರ ರೀತಿಗೆ ಗಂಡ ಎದ್ದು ಬಂದು ತಾನೂ ನೋಡುವನು. ವ್ಯಕ್ತಿಯನ್ನು ಗುರುತಿಸಿ......)

ಗಂಡ: ಓ! ನೀನಾ,

(ಸಂತೋಷದಿಂದ)

ಅರೆ, ಅವನೇ ಕಣೆ, ನಾನು ಈಗ ಹೇಳುತ್ತಿರಲಿಲ್ಲವಾ; ಅವನೆ! ನೀನು ಒಳಗೆ ಹೋಗು.

(ಅವಳು ಒಳಗೆ ಹೋಗುವಳು)

ಬಾರಯ್ಯಾ, ಯಾಕೆ ಗೇಟ್ ಹತ್ತಿರಾನೇ ನಿಂತಿದ್ದೀ, ಮಾತಾಡಿಸಿದ್ರೆ—ಯಾರು ಅಂತ ಹೇಳಬಾರದ? ಒಳಗೆ ಬಾ.

(ಎಂದು ಪ್ರೇಕ್ಷಕರಿಗೆ ಕಾಣಿಸುವ ಬಾಗಿಲು ದಾಟಿ ಒಳಗೆ ಬರುವನು. ವ್ಯಕ್ತಿಯ ಪ್ರವೇಶ—ಅವನು ಬಾಗಿಲ ಹೊರಗೇ ನಿಂತಿರುವನು.)

ಏನು ಬಂದೆ, ಯಾಕೆ ಸಪ್ಪಗಿದ್ದೀ, ಏನಾಯ್ತು?

(ಮೌನ)

ನಿನ್ನನ್ನು ನಿನ್ನ ಷಾಪಿನಿಂದ ಹೊರಗೆ ನೋಡುತ್ತಿರುವುದು ಇದೇ ಮೊದಲು! ಏನು ವಿಶೇಷ?

ವ್ಯಕ್ತಿ : ನನ್ನ ತಂದೆ ತೀರ್‍ಕೊಂಡ್ರು ಸಾರ್—

ಗಂಡ : ಹೌದೆ? ನಿನ್ನ ತಂದೆ ತೀರ್‍ಕೊಂಡ್ರೆ? ಏನಾಗಿತ್ತು? ಯಾವಾಗ ತೀರ್‍ಕೊಂಡ್ರು? ಬೆಳಗ್ಗೆ ಅದಕ್ಕೆ ಸಪ್ಪಗಿದ್ದೆ ಅಲ್ವಾ?

ವ್ಯಕ್ತಿ : ಎರಡು ದಿನ ಜ್ವರ ಬಂದಿತ್ತು ಸಾರ್, ಮಧ್ಯಾಹ್ನ ತೀರಿಕೊಂಡ್ರು.

ಗಂಡ: ಬೆಳಗ್ಗೆ ನನಗೆ ಯಾಕೆ ಹೇಳ್ಲಿಲ್ಲ? ಅಯ್ಯೋ ಹಾಳಾದವನೇ, ಆಸ್ಪತ್ರೆ-ಗಾದ್ರೂ ಸೇರಿಸಬಹುದಾಗಿತ್ತು.

(ಮೌನ)

ವ್ಯಕ್ತಿ: ಹೆಣ ಹಾಗೇ ಬಿದ್ದಿದೆ ಸಾರ್, ಮೂವತ್ತು ರೂಪಾಯಿ ಬೇಕಾಗಿತ್ತು.

ಗಂಡ : ಮೂವತ್ತೆ? ಎರಡು ಗಂಟೆ ಬಿಟ್ಕೊಂಡು ಬಾ. ಇವತ್ತು ಮೊದಲನೇ ತಾರೀಖು, ಆಫೀಸಿಗೆ ಹೋಗಿ ಬರ್‍ತೀನೆ.

ವ್ಯಕ್ತಿ: ಆಗಲಿ ಸಾರ್—

(ಪಪೌನ-ಹೋಗುವವನು)

ಗಂಡ: ಲೇ ಗಂಗೂ, ಬಾ ಇಲ್ಲಿ.

(ಬರುವಳು, ಭುಜದ ಮೇಲೆ ಹಿಂಡಿದ ಬಟ್ಟೆ)

ಅವನು ಯಾರು ಗೊತ್ತಾ, ನನ್ನ ಮಾವೂಲು ಹಜಾಮ!

ಹೆಂಡತಿ: ಹೌದಾ, ಹ್ಯಾಗೆ ನಿಂತಿದ್ದ! ಕಳ್ಳನ ಥರ!

ಗಂಡ: ಸಂಕೋಚ ಕಣೇ—ತುಂಬ ಒಳ್ಳೆಯ ಮನುಷ್ಯ—ಅವನ ತಂದೆ ಇವತ್ತು ತೀರ್ಕೊಂಡ್ರಂತೆ.

(ಹೋಗಲಿರುವಳು)

ನಿಲ್ಲು—ನೋಡು, ಅವನಿಗೆ ಇಪ್ಪತ್ತು ರೂಪಾಯಿ ಬೇಕಂತೆ, ತಂದೆಯ ಶವ ಸಂಸ್ಕಾರಕ್ಕೆ.

ಗಾಯತ್ರಿ: (ಪ್ರವೇಶಿಸಿ) ಇಪ್ಪತ್ತಲ್ಲವ್ವ. ಅವನು ಕೇಳಿದ್ದು ಮೂವತ್ತು ಅಲ್ಲವೇ ನಪ್ಪಾ?

ಗಂಡ: (ಸಿಟ್ಟಿನಿಂದ) ಹೌದು ಮೂವತ್ತು—ನೀನು ಯಾಕೆ ಕದ್ದು ಕೇಳಿಸಿಕೊಂಡೆ?

ಗಾಯತ್ರಿ: ನಾನು ಸುಮ್ಮನೇ ನಿಂತಿದ್ದೆ ಕಣಪ್ಪಾ, ಕೇಳಿಸ್ತು.

ಗಂಡ: ಒಳಗೆ ಓದ್ಕೊ ಅಂದ್ರೆ ಯಾಕೆ ಕೇಳಿಸ್ಕೊಂಡೆ?

ಗಾಯತ್ರಿ: ಓದುವಾಗಲೆಲ್ಲಾ ಕಿವಿಗೆ ಪ್ಲಾಸ್ಟರ್ ಹಾಕ್ಕೋಳ್ಬೇಕೇನೋ?

ಹೆಂಡತಿ: ಹೋಗ್ಲಿ ಬಿಡಿ, ನೀವು ಯಾಕೆ ಸುಳ್ಳು ಹೇಳ್ಬೇಕು?

ಗಂಡ: ಹತ್ತು ರೂಪಾಯಿಗೆ ನಾನು ಸುಳ್ಳು ಹೇಳ ಬೇಕಾಗಿಲ್ಲ. ಅವನು ಕೇಳಿದ್ದು ಮೂವತ್ತು—ನಾನು ಕೊಡಲೇ ಬೇಕು.

ಹೆಂಡತಿ: ಮೂವತ್ತೇಕೆ, ಐವತ್ತು ಕೊಡಿ.

ಗಂಡ: ಕೊಡ್ತೇನೆ.

ಹೆಂಡತಿ: ಆದರೆ ಅದಕ್ಕೆ ಸುಳ್ಳು ಹೇಳಬೇಕಿಲ್ಲ.

ಗಂಡ: ನಿನ್ನ ಮನಸ್ಸಿನಲ್ಲಿ ಏನಿದೆ ಅಂತ ನನಗೆ ಗೊತ್ತು—ನೀನು 'ಕೊಡಿ' ಅಂತ ಸರಿಯಾಗಿ ಹೇಳಬೇಕು.

ಹೆಂಡತಿ: (ಕೃತಕವಾಗಿ ನಕ್ಕು) ಸರಿಯಾಗೇ ಹೇಳ್ತಿದ್ದೇನೆ, ಕೊಡಿ—

ಗಂಡ: ನೋಡು, ಈ ನಗರದಲ್ಲಿ ಲೆಕ್ಕವಿಲ್ಲದಷ್ಟು ಜನರಿದ್ದಾರೆ—ಲಕ್ಷ ಲಕ್ಷ ಜನ. ಅದರಲ್ಲಿ ನಮಗೆ ಗೊತ್ತಿರೋರು ಇಪ್ಪತ್ತೋ, ಮೂವತ್ತೋ ಜನ. ಮಾತಾಡಿ,

ಬರೆದು, ಗಿಲೀಟು ಮಾಡಿ, ಜೂಜಾಡಿ, ದುಡಿದು ತಿನ್ನೋ ಜನ—ಪೂಜೆಯ ಮಂದಿ, ಮಂತ್ರದ ಮಂದಿ, ಮಾತಿನ ಮಂದಿ, ಮೋಸದ ಮಂದಿ—ಬೀದೀಲಿ ಹೋಗ್ತಾ ಇದ್ದಾಗ, ಇರುವೆಯ ಗುಂಪಿನಂತಹ ಜನ, ಒಬ್ಬರಿಗೊಬ್ಬರು ಗೊತ್ತಿಲ್ಲದೆ, ಹುಷಾರಾಗಿ ಬದುಕೋ ಜನ. ತಮ್ಮ ನೋವನ್ನು ಇನ್ನೊಬ್ಬರಿಗೆ ಹೇಳಿಕೊಳ್ಳದ ಜನ. ತಮ್ಮ ನಿರಾಶೆಯನ್ನ, ಸೋಲನ್ನ, ಕಣ್ಣೀರನ್ನ—ಬಚ್ಚಿಟ್ಟ ಜನ; ಇದ್ದ ಒಂದೇ ಬಟ್ಟೆಯನ್ನ ರಾತ್ರಿ ಒಗೆದು ಬೆಳಗ್ಗೆ ಹಾಕ್ಕೊಳ್ಳೋ ಜನ. ಇದ್ದ ಒಂದೇ ಒಂದು ವ್ಯಕ್ತಿಯನ್ನು ಕಳೆದುಕೊಂಡು ಒಬ್ಬಂಟಿಯಾದ ಜನ— ನೋಡು ಗಂಗು, ನಾವು ಈ ಊರಿಗೆ ಬಂದಮೇಲೆ ಒಬ್ಬರಿಗೂ ಒಂದು ರೂಪಾಯಿ ದಾನ ಮಾಡಿಲ್ಲ. ಈ ವ್ಯಕ್ತಿಗೆ ನಾವು ಸಹಾಯ ಮಾಡಬೇಕು.

ಹೆಂಡತಿ: ಅವನ ಹೆಸರೇನು?

ಗಂಡ: ಗೊತ್ತಿಲ್ಲ.

ಹೆಂಡತಿ: ಅವನು ಎಲ್ಲಿದ್ದಾನೆ?

ಗಂಡ: ಗೊತ್ತಿಲ್ಲ.

ಹೆಂಡತಿ: ಅವನಿಗೆ ನಮ್ಮ ಮನೆ ಹೇಗೆ ಗೊತ್ತಾಯ್ತು?

ಗಂಡ: ಗೊತ್ತಿಲ್ಲ.

ಹೆಂಡತಿ: ಗೊತ್ತಿಲ್ಲ, ಗೊತ್ತಿಲ್ಲ. ಸರಿ, ಕೊಟ್ಕೊಳ್ಳಿ, ನನಗೂ ಅದಕ್ಕೂ ಸಂಬಂಧ ವಿಲ್ಲ—ನೀವು ದುಡಿಯೋರು, ನೀವು ಕೊಡೋರು. ನನಗ್ಯಾಕೆ?

(ಹೋಗುವಳು—ಗಾಯತ್ರಿ ಬಾಗಿಲು ಹಾಕಿಕೊಂಡು ಬರುವಳು. ಅಪ್ಪ ಕೂತಿರುವನು, ಕೊಂಚ ಮೌನ.)

ಗಾಯತ್ರಿ: ಅವನು ತುಂಬಾ ಒಳ್ಳೆಯವನ ಹಾಗಿದ್ದಾನೆ, ಅಲ್ವೇನಪ್ಪ?

(ಅವಳನ್ನೇ ನೋಡುವನು)

ಅಪ್ಪ: (ಕುತೂಹಲದಿಂದ) ಹೌದ? ಹ್ಯಾಗೆ ಒಳ್ಳೆಯವನು ಅಂತಿ?

ಗಾಯತ್ರಿ: ಕೆಲವರನ್ನು ನೋಡಿದ್ರೆ ಒಳ್ಳೆಯವರು ಅನ್ಸುತ್ತೆ—

ಅಪ್ಪ: ಅವನ ತಂದೆ ಸತ್ತಿದ್ದು ನಿಜವಿರಬಹುದೆ?

ಗಾಯತ್ರಿ: ಸುಳ್ಳು ಯಾಕಪ್ಪ ಹೇಳ್ತಾನೆ?

ಅಪ್ಪ: ಯಾಕೆ ಹೇಳಬಾರದು?

ಗಾಯತ್ರಿ: ಎಲ್ರೂ ಸುಳ್ಳು ಹೇಳಲ್ಲ.

ಅಪ್ಪ: ಇಂಥವರೇ ಸುಳ್ಳು ಹೇಳ್ತಾರೆ, ಇಂತಹವರು ಹೇಳಲ್ಲ ಅಂತ ಹ್ಯಾಗೆ ಹೇಳೋದು? ಲಕ್ಷಾಂತರ ಜನ ಇರೋ ಊರು ಇದು. ಏನನ್ನಾದ್ರೂ ಹೇಳ ಬಹುದು—ಏನನ್ನಾದ್ರೂ ನಂಬಿಸಬಹುದು.

ಗಾಯತ್ರಿ: ಹಾಗಾದ್ರೆ ಯಾರನ್ನೂ ನಂಬೋಕಾಗಲ್ಲ?

ಅಪ್ಪ: ಮುವತ್ತು ರೂಪಾಯಿ ಹೆಚ್ಚಲ್ಲ.

ಗಾಯತ್ರಿ: ಮತ್ತೆ?

ಅಪ್ಪ: ಮೋಸ—

ಗಾಯತ್ರಿ: ಅಂದ್ರೆ?

ಅಪ್ಪ: ಮೋಸ ಹೋದ್ರೆ ಅದೇ ಯೋಚನೆ ಮನಸ್ಸನ್ನು ತಿನ್ನುತ್ತೆ. ನನ್ನ ಆತ್ಮ ಗೌರವಕ್ಕೆ ಧಕ್ಕೆ ಬರುತ್ತೆ.

ಗಾಯತ್ರಿ: ಹಾಗಂದ್ರೇನಪ್ಪ?

ಅಪ್ಪ: ಇದೊಂದು ಯುದ್ಧ ಗಾಯತ್ರಿ. ಶತ್ರುಗಳು ದಂಡೆತ್ತಿ ಬರ್ತಾರೆ. ನಾವು ಅವರನ್ನು ಎದುರಿಸಬೇಕು. ಅದಕ್ಕೆ ತಕ್ಕ ರೀತಿಯಲ್ಲಿ ಸೈನ್ಯವನ್ನು ತರಬೇತಿ ಮಾಡಬೇಕು, ವ್ಯೂಹ ರಚಿಸಬೇಕು.

ಗಾಯತ್ರಿ: (ಇದ್ದಕ್ಕಿಂತೆ ನಕ್ಕು) ಹೌದ? ದೊಡ್ಡ ಸೈನ್ಯಾನಾ? ಕತ್ತಿ, ಬಂದೂಕು, ಫಿರಂಗಿ—

ಅಪ್ಪ: ನಿನಗೆ ತಿಳಿಯೋಲ್ಲ.

ಗಾಯತ್ರಿ: ಅಂತೂ ಅವನಿಗೆ ದುಡ್ಡು ಕೊಡಬಾರದು.

ಅಪ್ಪ: ಆದ್ರೆ ಈತ ಒಳ್ಳೇ ಮನುಷ್ಯ.

ಗಾಯತ್ರಿ: ಹ್ಯಾಗೆ ಗೊತ್ತು?

ಅಪ್ಪ: ನೀನೇ ಹೇಳಿದೆಯಲ್ಲ—

ಗಾಯತ್ರಿ: (ಗೆಲುವಿನಿಂದ) ಹ್ಹಾ! ನಾನೇ ಗೆದ್ದೆ. (ಒಳಕ್ಕೆ) ಅಮ್ಮಾ, ನಾನೇ ಗೆದ್ದೆ—

ಅಪ್ಪ: (ಅಷ್ಟೇ ಧ್ವನಿ ಎತ್ತರಿಸಿ) ಆದ್ರೆ ಒಳ್ಳೇತನ ಇಟ್ಟುಕೊಂಡು ಏನು ಮಾಡ ಬೇಕು? ತಂದೆ ಶವ ಸುಡೋದಕ್ಕೆ ಅಂತ ನಾಲ್ಕು ಕಾಸು ಕೊಡಿಟ್ಟಿಲ್ಲ ಮುಠ್ಠಾಳ—

(ಹೆಂಡತಿಯ ಪ್ರವೇಶ)

ಹೆಂಡತಿ: ಪರವಾಗಿಲ್ಲ ನಿಮಗೂ ಮುಠ್ಠಾಳರು ಗೊತ್ತು.

ಗಂಡ: ಗೊತ್ತು. ಆದರೆ ಮುತ್ತಾಳರಿಗೂ ತಂದೆ, ತಾಯಿ ಇರ್ತಾರೆ—ಸ್ನೇಹಿತರಿರ್ತಾರೆ—ಅವರ ಹೆಣವನ್ನು ಸುಡಬೇಕಾಗುತ್ತೆ, ಪರಿಚಯ ಇರೋರು ಸಹಾಯ ಮಾಡಬೇಕಾಗುತ್ತೆ.

ಹೆಂಡತಿ: ಇಷ್ಟಕ್ಕೆಲ್ಲ ನೀವು ಯಾಕೆ—

ಗಂಡ: ಹಣ ಹೋಗುತ್ತೆ, ಬರುತ್ತೆ. ಆದರೆ ನಮ್ಮ ಗೋಳು, ನಮ್ಮ Confusion ಉಳಿಯುತ್ತೆ. ಯಾರು ಕೆಟ್ಟವರು, ಯಾರು ಒಳ್ಳೆಯವರು; ಯಾರು ಬೇಕು, ಯಾರು ಬೇಡ; ಯಾವುದು ಜಿಂಕೆ, ಯಾವುದು ಹುಲಿ; ಯಾವುದನ್ನು ಕೊಲ್ಲಬೇಕು, ಯಾವುದನ್ನು ಬದುಕಿಸಬೇಕು—

ಹೆಂಡತಿ: ಹೀಗೆ ಮಾತಾಡಿದ್ರೆ ಹ್ಯಾಗೆ ಅರ್ಥವಾಗಬೇಕು?

ಗಂಡ: (ಗಮನಿಸದೆ).

ಹತ್ತು ವರ್ಷದಿಂದ ನಾನು ಬಲ್ಲ ಸ್ನೇಹಿತರು ನನಗಿನ್ನೂ ಸಮಸ್ಯೆ. ಹತ್ತು ಜನರ ಪರಿಚಯ ನನ್ನ ಆಳಕ್ಕೆ ಇಳಿದು ಮನಸ್ಸನ್ನು ಅಲ್ಲಾಡಿಸುತ್ತೆ. ಅವರ ಚರ್ಮ ಹೊಕ್ಕು ನೋಡುವ ದಾರಿ ನಮಗಿಲ್ಲ. ಅವರನ್ನು ಮುಟ್ಟಿ ನೋಡಿದರೆ ಗೊತ್ತಾಗೋಲ್ಲ. ಅವರೊಂದಿಗೆ ಹರಟಿದರೆ ಗೊತ್ತಾಗೋಲ್ಲ. ಅವರೊಂದಿಗೆ ಜಗಳ ಆಡಿದರೆ ಗೊತ್ತಾಗೋಲ್ಲ.

(ಅವಳ ದಿಗ್ಭ್ರಮೆ ಗಮನಿಸಿ, ನಕ್ಕು)

ಕೊಂಚ ಕಾಫಿ ಕೊಡು ಗಂಗೂ, ಯಾಕೆ ಹೀಗೆ ನೋಡ್ತಿದ್ದೀ? ನನಗೇನೂ ಆಗಿಲ್ಲ. ಕಾಲುಚೀಲ ತೊಳೆದಿದ್ದೀಯ? ಶರ್ಟಿನ ಇಸ್ತ್ರಿ ಆಗಿದೆಯಾ?

—— ಕತ್ತಲು ತೆರೆ ——

ದೃಶ್ಯ ೨

[ಬಾಗಿಲು ಬಡಿದ ಸದ್ದು. ಗಂಡ ಬಟ್ಟೆ ಬದಲಿಸಿ ಹೆಗಲಮೇಲೆ ಟವೆಲ್ ಹಾಕಿಕೊಂಡಿದ್ದಾನೆ. ಸದ್ದು ಕೇಳಿ ಬಾಗಿಲವರೆಗೆ ಬಂದು ನೋಡುತ್ತಾನೆ.]

ಗಂಡ: ಬಾ, ಹೊರಗೆ ಯಾಕೆ ನಿಂತಿದ್ದೀ — ಬಾ.

(ವ್ಯಕ್ತಿ ಬರುತ್ತಾನೆ)

ಇಷ್ಟು ದಿನ ನಿನ್ನನ್ನ ನೋಡಿದ್ದೇನೆ. ನಿನ್ನ ಹೆಸರೇ ನನಗೆ ಗೊತ್ತಿಲ್ಲವಲ್ಲ?

(ಮೌನ)

ಕಿವಿ ಕೇಳಿಸೋಲ್ವಾ? ನಿನ್ನ ಹೆಸರೇನು?

ವ್ಯಕ್ತಿ: ಮುನಿಸ್ವಾಮಿ, ಸಾರ್.

ಗಂಡ: ನಿನ್ನ ತಂದೆ ಹೆಸರೇನು?

ವ್ಯಕ್ತಿ: ವೆಂಕಟಸ್ವಾಮಿ, ಸಾರ್.

ಗಂಡ: ಆತ ಏನು ಕೆಲಸ ಮಾಡ್ತಿದ್ದ?

ವ್ಯಕ್ತಿ: ನನ್ನ ಹಾಗೇ ಸಾರ್.

ಗಂಡ: ತಿಂಗಳಿಗೆ ನಿನ್ನ ಆದಾಯ ಎಷ್ಟು?

(ಮೌನ)

ಕೇಳಿಸಲಿಲ್ಲವೇ? ತಿಂಗಳಿಗೆ ಎಷ್ಟು ದುಡೀತಿ?

ವ್ಯಕ್ತಿ: ಐವತ್ತೋ ಅರವತ್ತೋ ಸಾರ್.

ಗಂಡ: ನಿನ್ನ ಮನೆ ಎಲ್ಲಿ?

ವ್ಯಕ್ತಿ: ಎಡಿಯೂರ್ ಹತ್ರ, ಸಾರ್.

ಗಂಡ: ಬಾಡಿಗೆ ಎಷ್ಟು ಕೊಡ್ತಿ?

ವ್ಯಕ್ತಿ: ಐದು ರೂಪಾಯಿ, ಸಾರ್.

ಗಂಡ: ಅಂತೂ ಒಂದು ಪೈಸ ಕೂಡ ಉಳಿಸಿಲ್ಲ?

(ಮೌನ)

ತಂದೆಯ ಶವ ಸಂಸ್ಕಾರಕ್ಕೆ ದುಗ್ಗಾಣಿ ಇಲ್ಲ?

(ಮೌನ)

ನಿನಗೆ ಖಾಯಿಲೆ ಆದ್ರೆ ಗತಿ ಏನು?

(ಮೌನ)

ನಿನ್ನ ತಾಯಿಗೆ ಖಾಯಿಲೆ ಆದ್ರೆ ಏನು ಮಾಡ್ತೀ?

(ಮೌನ)

ನನ್ನ ಮಾತು ಕಿವಿಮೇಲೆ ಬೀಳ್ತಾ ಇದೆಯೋ? ನೀನು ಕೈಚಾಚಿದಾಗಲೆಲ್ಲ ಯಾರಯ್ಯಾ ನಿನಗೆ ದುಡ್ಡು ಕೊಡ್ತಾರೆ?

(ತನ್ನ ಕ್ರೌರ್ಯಕ್ಕೆ ತಾನೇ ನಾಚಿಕೊಂಡು)

ನೋಡು, ನಾನು ನಿನ್ನ ಒಳ್ಳೆಯದಕ್ಕೆ ಹೇಳ್ತಿರೋದು. ಇಂಥ ಪಟ್ಟಣದಲ್ಲಿ ನಮ್ಮ ಹುಷಾರಿ ನಮ್ಮ ಕೈಯಲ್ಲಿರಬೇಕು.

(ಈ ಹಿತವಚನವೂ ಅಸಂಗತವೆನಿಸಿ)

ಆಮೇಲೆ, ಒಂದರ್ಧ ಗಂಟೆ ಬಿಟ್ಕೊಂಡು ಬಾ, ಮೂವತ್ತು ರೂಪಾಯಿ ಆಗಲ್ಲ ಅಂತ ಕಾಣುತ್ತೆ. ಇಪ್ಪತ್ತು ಕೊಡಬಹುದು.

(ಆತ ನಿಧಾನಕ್ಕೆ ಹೋಗುವನು. ಗಾಯತ್ರಿಯ ಪ್ರವೇಶ)

ಗಾಯತ್ರಿ: ಯಾಕಪ್ಪ ಹಾಗೆ ಅವನ್ನ ಬೈತಿದ್ದೆ?

ಅಪ್ಪ: ನೀನು ಸುಮ್ಮನಿರಮ್ಮ.

ಗಾಯತ್ರಿ: ಅವನು ಮೋಸಗಾರ ಅಲ್ಲ ಅನ್ಸುತ್ತೆ.

ಅಪ್ಪ: ಸರಿ, ಅವನು ಮೋಸಗಾರ ಅಲ್ಲ.

ಗಾಯತ್ರಿ: ಹಾಗಾದರೆ ಬೈದದ್ದು ಯಾಕೆ?

ಅಪ್ಪ: ತಮಾಷೆಗೆ ಬೈದೆ.

ಗಾಯತ್ರಿ: ಹೌದೆ? ತಮಾಷೆಗೆ ಬೈತಾರೆಯೆ?

ಅಪ್ಪ: ಯಾಕೆ ಬೈಯೋಲ್ಲ? ನಾಟಕದಲ್ಲಿ ಬೈಯೋಲ್ಲವೆ?

ಗಾಯತ್ರಿ: ನೀನು ಬೈದದ್ದು ತಮಾಷೆಗಲ್ಲ—ನನಗ್ಗೊತ್ತು.

ಅಪ್ಪ: ಹೌದು, ಸೀರಿಯಸ್ಸಾಗಿಯೇ ಬೈದೆ.

ಗಾಯತ್ರಿ: ಯಾಕೆ?

ಅಪ್ಪ: ತಮಾಷೆಗೆ—ಸೀರಿಯಸ್ಸಾಗಿ ಬೈದೆ.........

(ಅವನ ಉತ್ತರದಿಂದ ಬೇಸರಗೊಂಡು ಬೇರೆ ವಿಷಯ ಎತ್ತುವಳು)

ಗಾಯತ್ರಿ: ಅಪ್ಪಾ ಇವತ್ತು ಏನಾಯ್ತು ಗೊತ್ತ?

ಅಪ್ಪ: ಏನಾಯ್ತು?

ಗಾಯತ್ರಿ: ನಮ್ಮ ಸ್ಕೂಲಲ್ಲಿವತ್ತು ಕಪ್ಪೆ ಕೊಟ್ಟಿದ್ರು—ಡಿಸೆಕ್ಷನ್‌ಗೆ.

ಅಪ್ಪ: ಗೊತ್ತು. ಅದನ್ನು ನೀನು ಕತ್ತರಿಸಿದೆ.

ಗಾಯತ್ರಿ: ಥತ್, ಸುಮ್ನಿರಪ್ಪ ಅಂತೀನಿ.........ಅದನ್ನು ಹಿಡಿದು ತರೋವಾಗ ಸಾಯಿಸೇ ಇರಲಿಲ್ಲ.

ಅಪ್ಪ: ಸರಿ, ನೀನು ಸಾಯಿಸಿದೆ.

ಗಾಯತ್ರಿ: ಮಧ್ಯೆ ಬಾಯಿ ಹಾಕಬೇಡಪ್ಪ ಅಂದ್ರೆ —

ಅಪ್ಪ: ಬೇಗ ಬೇಗ ಹೇಳಿಬಿಡು.

ಗಾಯತ್ರಿ: ಅದನ್ನ ನೋಡಿದೆ. ಹ್ಯಾಗೆ ಪಿಳಿ ಪಿಳಿ ಕಣ್ಣು ಬಿಡ್ತಿತ್ತು ಅಂತೀಯ. ಅದರ ಜೀವ ಎಲ್ಲಿರುತ್ತೆ, ಹ್ಯಾಗೆ ಹೋಗುತ್ತೆ ಅಂತ ನೋಡಬೇಕು ಅಂತ—

ಕತ್ತರಿಸಿದೆ. ನಿಧಾನಕ್ಕೆ ಕತ್ತರಿಸಿದೆ. ಹೊಟ್ಟೆ ಕತ್ತರಿಸಿದೆ. ನರಾನೆಲ್ಲ ಬಿಡಿಸಿದೆ ......... ಆದ್ರೆ ಜೀವ ಹೊರಟೇ ಹೋಗಿತ್ತು.

ಅಪ್ಪ: ಹಾಗೆ ಗೊತ್ತಾಗೋಲ್ಲ, ಜೀವ ಹ್ಯಾಗಿರುತ್ತೆ ಅಂತ ಗೊತ್ತಾಗೋದು ಅದು ಒಟ್ಟಿಗೆ ಇದ್ದಾಗ, ಕತ್ತರಿಸೋಕೆ ಮುಂಚೆ.

ಗಾಯತ್ರಿ: ಹಾಗಾದ್ರೆ ಕತ್ತರಿಸದೇ ಇದ್ದದ್ದಕ್ಕೆಲ್ಲ ಜೀವ ಇರುತ್ತಾ?

ಅಪ್ಪ: ಹಾಗಲ್ಲ, ಜೀವ ಇದ್ರೆ ಒಂದು ಕಳೆ ಇರುತ್ತೆ.

ಗಾಯತ್ರಿ: ಇಲ್ದೇ ಇದ್ರೆ?

ಅಪ್ಪ: ಇಲ್ದೇ ಇದ್ರೆ—ಹೆಣ, ತಣ್ಣಗಿರುತ್ತೆ.

ಗಾಯತ್ರಿ: ಇಲ್ಲದೇ ಇದ್ರೆ?

ಅಪ್ಪ: ಹೆಣವಲ್ಲದೇ ಇದ್ರೆ
ಉಸಿರಾಡುತ್ತೆ, ಬೆಚ್ಚಗಿರುತ್ತೆ.
ಮೊಟ್ಟೆ ಇಡುತ್ತೆ, ಮರಿ ಮಾಡುತ್ತೆ.

ಗಾಯತ್ರಿ: ಹಾ! ಸಿಕ್ಕಿಹಾಕ್ಕೊಂಡೆ. ಮನುಷ್ಯರು ಮೊಟ್ಟೆ ಇಡೋಲ್ಲ!

ಅಪ್ಪ: ಪೆದ್ದೀ, ಮನುಷ್ಯರಿಗೆ ಜೀವ ಇದ್ರೆ ಗೊತ್ತಾಗೋಲ್ವ?

ಗಾಯತ್ರಿ: ಗೊತ್ತು, ಉಸಿರಾಡ್ತಾರೆ. ಬೆಚ್ಚಗಿರ್ತಾರೆ.
ಮೊಟ್ಟೆ ಇಡ್ತಾರೆ, ಮರಿ ಮಾಡ್ತಾರೆ.

ಅಪ್ಪ: ಸರಿ, ಇವತ್ತಿಗೆ ನಿನ್ನ ಜ್ಞಾನಾರ್ಜನೆ ಇಷ್ಟು ಸಾಕು. ಹೋಗು.

ಗಾಯತ್ರಿ: ತಮಾಷೆ ಮಾಡೋಲ್ಲ. ಹೇಳಪ್ಪ. ಮನುಷ್ಯರ ಜೀವ ಹ್ಯಾಗೆ ಗೊತ್ತಾಗುತ್ತೆ?

ಅಪ್ಪ: ಸುಖ, ದುಃಖ, ಪ್ರೀತಿ, ವಿಶ್ವಾಸ—ಎಲ್ಲಾ ಇರುತ್ತೆ.

(ಹೆಂಡತಿ ಪ್ರವೇಶ)

ಹೆಂಡತಿ: ಪ್ರೀತಿ–ವಿಶ್ವಾಸದ ಮಾತು ಮುಗೀತ? ನೋಡಿ, ಖರ್ಚಿನ ಲಿಸ್ಟ್ ತಂದಿದೀನಿ.

ಗಂಡ: ತಂದೆಯಾ? ಬಾ, ಎಷ್ಟು? ಬೇಳೆ ಮೂರು ಕೇಜಿ, ತಾನೆ?

ಹೆಂಡತಿ: ಕೊತ್ತಂಬರಿ ಅರ್ಧ ಕೇಜಿ.

ಗಂಡ: ಕಡ್ಲೇಕಾಯಿ ಎಣ್ಣೆ ಎರಡು ಕೇಜಿ. ರವೆ ನಾಲ್ಕು ಕೇಜಿ.

ಹೆಂಡತಿ: ಬೆಣ್ಣೆ ಎರಡು ಕೇಜಿ, ಅಕ್ಕಿ ಇಪ್ಪತ್ತು ಕೇಜಿ.

ಗಂಡ: ಸರಿ, ಈರುಳ್ಳಿ ನಲವತ್ತು ಕೇಜಿ, ಸೀರೆ ಐವತ್ತು ಕೇಜಿ.

ಹೆಂಡತಿ: ಸಿಗರೇಟು ನೂರು ಕೇಜಿ .........

ಗಂಡ: (ಸಿಗರೇಟ್ ಹಚ್ಚಿ)

ಹಹ್ಹಾ! ಸಿಗರೇಟಿನ ಹೊಗೆ ವರ್ತುಳ ವರ್ತುಳ
ಧೂಪ ಧೂಮ ಲೀಲೆ .........
ವಿವಿಧ ರೂಪ ವಿಹ್ವಲ ವಿಲಾಪಗಳು
ವಿಕೃತ ಚಿತ್ರಗಳು ಗಾಳಿಯಲೆಯ ಮೇಲೆ ತೇಲಿ.........

ಹೆಂಡತಿ: ಅದೇನು ಆನಂದವೋ .........

ಗಂಡ: ತೇಲಿ, ತೇಲಿ, ತೇಲಿ .........

ಹೊಗೆಯದು ಗಾಳಿಯಲೆಯ ಮೇಲೆ .........

ಹೆಂಡತಿ: ನಾನಿನ್ನು ಬರ್ತೀನಿ. ಈ ಹುಚ್ಚು ನೋಡೋಕಾಗೋಲ್ಲ.

ಗಂಡ: ಹುಚ್ಚಲ್ಲ, ಸಂತೋಷ. ಉಪ್ಪಿಟ್ಟು ರೆಡೀನ? ತಗೊಂಡು ಬಾ, ಹಲ್ಲು ಉಜ್ಜುತ್ತೀನಿ. ಬಾಯಿ ತೊಳೀತೀನಿ. ಅಚ್ಚುಕಟ್ಟಾಗಿ ತಿಂತೀನಿ. ಮಗು ಎಲ್ಲಿ, ಪಕ್ಕದ ಮನೆಗೆ ಕಳಿಸಿದೆಯಾ? ಸರಿ. ನಮ್ಮ ಮನೆ ಎಷ್ಟು ಚೆನ್ನಾಗಿದೆ. ನಮಗೆ ಇಬ್ಬರೇ ಮಕ್ಕಳು.

ಒಂದು ಹೆಣ್ಣು, ಒಂದು ಗಂಡು .........

ಒಬ್ಬಳೇ ಹೆಂಡತಿ .........

ಇವತ್ತು ಹವೆ ಎಷ್ಟು ಚೆನ್ನಾಗಿದೆ. ಲಾಲ್‌ಬಾಗ್‌ನಲ್ಲಿ ಹೂ ಈಚೆಗೆ ಎಷ್ಟು ಚೆನ್ನಾಗಿ ಅರಳಿವೆ ಅಂತೀಯಾ? ಅಲ್ವೆ ಆ ದರಿದ್ರ ಸೀರೇಲೂ ಎಷ್ಟು ಚೆನ್ನಾಗಿ ಕಾಣ್ತೀಯಾ!—ಯಾಕೆ, ಹಾಗೆ ನೋಡ್ತಿದೀಯ?

ಹೆಂಡತಿ: ನಿಮ್ಮ ಪ್ಲಾನ್ ನನಗೆ ಗೊತ್ತು. ನಿಮ್ಮ ಹಜಾಮ ಈಗ ಬರ್ತಾನೆತಾನೆ?

ಗಂಡ: ಹುಚ್ಚಿ, ಅವನಿಗೆ ಚೆನ್ನಾಗಿ ಬೈದು ಕಳಿಸಿದೀನಿ. ಮುಖ ಎತ್ತದ ಹಾಗೆ ಮಾತಾಡಿ ಕಳಿಸಿದೇನೆ.

ಹೆಂಡತಿ: ಏನಂತ ಬೈದಿರಿ?

ಗಂಡ: ನಿನ್ನ ಹೆಸರೇನು, ಅಂದೆ;

ನಿಮ್ಮಪ್ಪನ ಹೆಸರೇನು, ಅಂದೆ;
ನಿನ್ನ ವಾಸ ಎಲ್ಲಿ ಅಂತ ಕೇಳಿದೆ;
ನೀನು ಎಷ್ಟಯ್ಯ ದುಡೀತಿ ತಿಂಗಳಿಗೆ, ಅಂತ ಕೇಳಿದೆ;
ಕಂಡಕಂಡವರನ್ನು ದುಡ್ಡು ಕೇಳೋಕೆ ನಾಚಿಕೆ ಆಗೋಲ್ಲವಾ ಅಂತ ಕೇಳಿದೆ—

ಹೆಂಡತಿ : ಅಷ್ಟಕ್ಕೆಲ್ಲಾ ನಾಚ್ಕೊಳ್ತಾನಾ ? ನೋಡಿ, ಬಂದೇ ಬರ್ತಾನೆ.

ಗಂಡ : ಅವನು ಮಿಕ್ಕೋರ ಹಾಗಲ್ಲ. ತುಂಬಾ ಸಂಕೋಚದ ಮನುಷ್ಯ.

ಹೆಂಡತಿ : ನಿಮಗಿನ್ನೂ ಅವನ ಮೇಲಿನ ನಂಬಿಕೆ ಹೋಗಿಲ್ಲ ?

ಗಂಡ : ಮೂವತ್ತು ರೂಪಾಯಿಗೆ ನಂಬಿಕೇನ ಕೊಡಾಕಾಗೋಲ್ಲ, ಕೊಳ್ಳಾಕಾಗೋಲ್ಲ.

ಹೆಂಡತಿ : ಸರಿ. ನಾನು ವಾದ ಮಾಡೋಲ್ಲ. ಆದ್ರೆ ಹೇಳಿ, ಆತ ಯಾಕೆ ದುಡ್ಡು ಕೇಳಬೇಕಿತ್ತು ?

ಗಂಡ : ಚಿಕ್ಕ ವಯಸ್ಸು, ಸಿನಿಮಾಕ್ಕೆ ಹೋಗಬಹುದು, ರೇಸ್ ಆಡಬಹುದು—

ಹೆಂಡತಿ : ಅದಕ್ಕೆಲ್ಲ ನಾವು ದುಡ್ಡು ಕೊಟ್ಟು—

ಗಂಡ : ಸರಿ, ಆ ವಿಷಯ ಬಿಡು, ಪಾಪನ್ನ ಕರಕೊಂಡು ಬಾ. ಕಬ್ಬನ್ ಪಾರ್ಕಲ್ಲಿ ಪುಟ್ಟ ರೈಲಿದೆ. ಇವತ್ತು ಸವಾರಿ ಮಾಡ್ಸೋಣ.

ಹೆಂಡತಿ : ಹಿಟ್ಟು ರುಬ್ಬಿದ್ದೇನೆ, ದೋಸೆ ಮಾಡ್ತೇನೆ ಹಾಗಾದ್ರೆ—

ಗಾಯತ್ರಿ : ರೇಸ್ ಹ್ಯಾಗಿರುತ್ತಪ್ಪ ?

ಹೆಂಡತಿ : ತೆಪ್ಪಗಿರೆ, ರೇಸ್ ಹ್ಯಾಗಿರುತ್ತಂತೆ.

ಗಂಡ : ಅಥವಾ ನಂದಿಗೆ ಹೋಗಬಹುದು. ಹ್ಯಾಗೂ ನಾಳೆ ರಜಾ. ಏನಂತೀ ? ನಾವು ಈಚೆಗೆ ಎಲ್ಲೂ ಹೋಗಿಲ್ಲ. ಅಲ್ಲೇ ಇದ್ದುಬಿಟ್ಟು ನಾಳೆ ಬರಬಹುದು.

ಹೆಂಡತಿ : ಹೌದಲ್ಲವಾ ? ಎಷ್ಟು ಚೆನ್ನಾಗಿರುತ್ತೆ. ಚಳಿಯಾಗುತ್ತೆ—ಮಗೂಗೊಂದು ಸ್ವೆಟರ್ ತಗೊಳ್ಳಿ.

ಗಾಯತ್ರಿ : ಅಪ್ಪ, ಒಂದೊಂದು ರೇಸ್‌ನಲ್ಲಿ ಎಷ್ಟು ಕುದುರೆ ಇರುತ್ತಪ್ಪ ?

ಗಂಡ : ನನಗ್ಗೊತ್ತಿಲ್ಲ, ಮರಿ.

ಗಾಯತ್ರಿ : ಅಷ್ಟೂ ಗೊತ್ತಿಲ್ವ ? ಏನು ಪೆದ್ದಪ್ಪ, ಅಪ್ಪ ನೀನು ! ಮುನಿಸ್ವಾಮಿಗೆ ಎಲ್ಲಾ ಗೊತ್ತು.

ಗಂಡ : ಸರಿ, ಅವನನ್ನೇ ಕೇಳು .........

ಹೆಂಡತಿ : ಅಲ್ಲ, ನಮ್ಮ ಪಾಪಂಗೆ ಚಾರುಬಂಡೆ ಅಂದ್ರೆ ಎಷ್ಟು ಇಷ್ಟಾಂತ !

ಗಂಡ : ಹೂವೂ ಅಂದ್ರೂ ಅಷ್ಟೆ.

ಹೆಂಡತಿ : ಮಕ್ಕಳು ! ಪುಟಾಣಿ ಮಕ್ಕಳು ಕಂಡ್ರೆ ಅಪ್ಪಿಕೊಂಡು ಆಡುತ್ತೆ !

ಗಂಡ : ಅವನಿಗೊಂದು ಗೊಂಬೆ ಕೊಡಿಸ್ತೇನೆ .........

(ಅಷ್ಟರಲ್ಲಿ ಬಾಗಿಲಲ್ಲಿ ಕಟ್ ಕಟ್ ಸದ್ದು. ಎಲ್ಲರೂ ಥಟ್ಟನೆ ನಿಶ್ಶಬ್ದದಿಂದ ನಿಲ್ಲುವರು. ಗಂಡ ಹೆಂಡತಿಯ ಕಡೆಗೆ ತಿರುಗಿದೊಡನೆ ಆಕೆ ಬಾಗಿಲವರೆಗೆ ಹೋಗಿ ನೋಡಿ ಬರುವಳು)

ಹೆಂಡತಿ: (ಪಿಸುಗುಟ್ಟುತ್ತಾ)

ಅವನೇ—

ಗಂಡ: ಹೌದ?

ಹೆಂಡತಿ: ಈಗೇನು ಮಾಡೋದು?

ಗಂಡ: ನಾನು ಮನೇಲಿಲ್ಲ ಅಂತ ಹೇಳು.

ಗಾಯತ್ರಿ: (ಗಟ್ಟಿಯಾಗಿ)

ಯಾಕಪ್ಪ, ಪಿಸುಗುಟ್ತೀರಿ.

ಹೆಂಡತಿ: ಶ್ ·········

(ಬಾಗಿಲಲ್ಲಿ ನಿಲ್ಲುವಳು. ವ್ಯಕ್ತಿ ಸುಮ್ಮನೆ ನಿಂತಿರುವನು)

ಯಾರು?

ವ್ಯಕ್ತಿ: ನಾನಮ್ಮ.

ಹೆಂಡತಿ: ನೀನು ಅಂದ್ರೆ ಯಾರಪ್ಪ?

ವ್ಯಕ್ತಿ: ಕೊಂಚ ಯಜಮಾನ್ರನ್ನು ನೋಡಬೇಕಿತ್ತು.

ಹೆಂಡತಿ: ನೀನು ಅಂದ್ರೆ ಯಾರಪ್ಪ?

ವ್ಯಕ್ತಿ: ಮುನಿಸ್ವಾಮಿನೆಮ್ಮ.

ಹೆಂಡತಿ: ಯಾವ ಮುನಿಸ್ವಾಮಿ? ಏನು ಬೇಕಿತ್ತು?

ವ್ಯಕ್ತಿ: ನಾನು ... ಕ್ಷೌರದವನು ತಾಯಿ. ಯಜಮಾನ್ರನ್ನ ನೋಡಬೇಕಿತ್ತು.

ಹೆಂಡತಿ: ಯಾಕೆ?

(ಮೌನ)

ವ್ಯಕ್ತಿ: ಕೊಂಚ ಕೆಲಸ ಇತ್ತು.

ಹೆಂಡತಿ: (ಕೊಂಚ ರೇಗಿ)

ಎಂತ ಕೆಲಸ?

ಅವರು ಊರಲ್ಲಿಲ್ಲ.

(ಮೌನ)

ವ್ಯಕ್ತಿ: ಬಾ ಅಂತ ಹೇಳಿದ್ರು.

ಹೆಂಡತಿ: ಅವರು ಊರಲಿಲ್ಲವಲ್ಲ ?

(ಮೌನ)

ವ್ಯಕ್ತಿ: ಏನಾದ್ರೂ ಹೇಳಿದ್ರಾ ?

ಹೆಂಡತಿ: ಇಲ್ಲ.

(ಮೌನ)

ವ್ಯಕ್ತಿ: ಕೊಂಚ ದುಡ್ಡು ಕೊಡ್ತೀನೆ ಅಂದಿದ್ರು—

ಹೆಂಡತಿ: ಅವರು ಊರಲ್ಲಿಲ್ಲವಲ್ಲ ?

ವ್ಯಕ್ತಿ: ಕೊಡಲಿಲ್ಲವಾ ?

ಹೆಂಡತಿ: ಒಂದು ಸಲ ಹೇಳಿದರೆ ಆಗೋಲ್ಲವೇನಯ್ಯ ? ಅವರು ಊರಲ್ಲಿಲ್ಲ ತಿಳೀತೆ ? ಏನೂ ಹೇಳಿಲ್ಲ, ಏನೂ ಕೊಟ್ಟಿಲ್ಲ; ನಾನು ಹೇಳೋದು ಕೇಳಿಸ್ತಿದೆಯಾ ?

ಗಾಯತ್ರಿ: ಅಪ್ಪಾ !

(ಅವಳ ಮಾತು ಎಲ್ಲರಿಗೂ ಕೇಳಿಸಿದೆ. ಮೌನ)

ವ್ಯಕ್ತಿ: ಸರಿ, ನಾನು ಬಂದಿದ್ದೆ ಅಂತ ಹೇಳಿ.

ಹೆಂಡತಿ: ಆಗಲಿ.

ವ್ಯಕ್ತಿ: (ಸ್ವಲ್ಪವೇ ವ್ಯಂಗ್ಯದಿಂದ)
ತಾವು ಆಗ ಊರಲ್ಲಿರಲಿಲ್ಲಂತ ಹೇಳಿ.

ಹೆಂಡತಿ: ಆಗಲಿ;

(ನಿಧಾನಕ್ಕೆ ಹೋಗುವನು. ಅವನು ಹೋದನೆಂಬಷ್ಟರಲ್ಲೆ)

ಗಾಯತ್ರಿ: ಅಪ್ಪಾ, ಯಾಕಪ್ಪ ಸುಳ್ಳು ಹೇಳಿದೆ ?
ಅಮ್ಮ, ಯಾಕಮ್ಮ ಬೈದೆ ?
ನಾನು ಹೇಳ್ತೀನೆ ?

(ಕೊಂಚ ಕೊಂಚವೇ ಗಡುಸಾಗಿ ಮಾತಾಡುತ್ತಾ ಜಗತ್ತಿಗೇ ಸಾರುವವಳಂತೆ ಕೂಗುವಳು)

ಅಪ್ಪ, ಅವನಪ್ಪ ಸತ್ತೀದಾನೆ. ನನಗ್ಗೊತ್ತು. ಅವನಪ್ಪ ಸತ್ತೀದಾನೆ.
ಅವನು ಸುಳ್ಳು ಹೇಳ್ತಿಲ್ಲ .........
ಅಪ್ಪ ಇದಾರೆ. ನನ್ನಪ್ಪ ಮನೇಲಿ ಇದಾರೆ, ಎಲ್ಲೂ ಹೋಗಿಲ್ಲ.........

(ನಿಧಾನಕ್ಕೆ ತಂದೆಯ ಹತ್ತಿರ ಬಂದು, ಅವನ ಮುಖ ನೋಡುತ್ತಾ)

ಅಪ್ಪ ಸತ್ತವರ ಮುಖ ಹೇಗಿರುತ್ತಪ್ಪ ?

—— ತೆರೆ ——

## ಪಾತ್ರವರ್ಗ:

ಅಗಸ

ಋಷಿ

ಅಗಸನ ಹೆಂಡತಿ

ಭರತ

ಸೈನಿಕ

ದಾರಿಹೋಕ

ವಸುಧಮ್ಮ

ದ್ವಾರಪಾಲಕ

# ಮಾನಿಷಾದ

(ಸ್ಥಳ: ದಟ್ಟಡವಿಯ ನಡುವಿನ ಬಯಲೊಂದು. ಒಬ್ಬ ಋಷಿ ಬಳಿ ಯಲ್ಲಿರುವ ಕಲ್ಲೊಂದರ ಮೇಲೆ ಕಣ್ಮುಚ್ಚಿ ಕುಳಿತಿದ್ದಾನೆ. ಅಡವಿ ಯೊಳಗಿಂದ ಒಬ್ಬ ಮನುಷ್ಯ ಬರುತ್ತಾನೆ.)

ಮನುಷ್ಯ: ಮುನಿಗಳೇ ......

ಋಷಿ: ಯಾರದು ?

ಮನುಷ್ಯ: ನಿಮ್ಮ ಧ್ಯಾನಕ್ಕೆ ಅಡ್ಡಿ ತಂದುದಕ್ಕೆ ಕ್ಷಮಿಸಬೇಕು, ಮುನಿಗಳೇ.

ಋಷಿ: ಧ್ಯಾನವೇನಿಲ್ಲ. ಏನೋ ವಿಚಾರ ಮಾಡುತ್ತಿದ್ದೆ. ಅಷ್ಟೆ. ಏನು ಬೇಕು ನಿನಗೆ ? ಈ ಕಾರಡವಿಯಲ್ಲೇನು ಮಾಡುತ್ತಿರುವೆ ?

ಮನುಷ್ಯ: ಇಲ್ಲಿಂದ ವಾಲ್ಮೀಕಿ ಋಷಿಗಳ ಆಶ್ರಮ ಬಹಳ ದೂರವಿದೆಯೇ, ಸ್ವಾಮಿ?

ಋಷಿ: ಇಲ್ಲ. ಇಲ್ಲಿಂದ ಪೂರ್ವಕ್ಕೆ ನೆಟ್ಟಗೆ ಹೋದರೆ ಹತ್ತು ನಿಮಿಷಗಳ ದಾರಿ ಅಷ್ಟೆ. ಆದರೆ....ನಿನಗೆ ಏನು ಬೇಕಾಗಿದೆ ಅಲ್ಲಿ ?

ಮನುಷ್ಯ: ಏನಿಲ್ಲ, ಗುರುಗಳೇ. ಅಲ್ಲಿ ತಾಯಿ ಸೀತಾದೇವಿ ಇದ್ದಾಳೆಂದು ಯಾರೋ ಎಂದರು. ಅವಳ ದರ್ಶನಕ್ಕಾಗಿ ಹಾತೊರೆದು ಓಡಿ ಬಂದಿದ್ದೇನೆ. ಆ ಸುದ್ದಿ ನಿಜವೇ ಸ್ವಾಮಿ ?

ಋಷಿ: (ಮೆಲ್ಲನೆ) ನಿಜವಿತ್ತು. ಆದರೆ—ಈಗ ಅವಳು ಅಲ್ಲಿಲ್ಲ.

ಮನುಷ್ಯ: (ಬೆದರಿ) ಅಲ್ಲಿಲ್ಲ ? ಎಲ್ಲಿ ಹೋಗಿದ್ದಾರವರು ?

ಋಷಿ: ನೀನಿನ್ನೂ ಕೇಳಿಲ್ಲವೇ ? ಮೂರು ದಿನಗಳ ಹಿಂದೆ ಇಲ್ಲಿ ಇದೇ ಬಯಲಲ್ಲಿ ಅವಳು ಶ್ರೀರಾಮನಿಗೆ ಭೆಟ್ಟಿಯಾದಳು.

ಮನುಷ್ಯ: (ಆನಂದದಿಂದ) ಭೆಟ್ಟಿಯಾದಳೇ ? ಹಾಗಾದರೆ ಶ್ರೀರಾಮ ಮತ್ತು ಸೀತಾ ತಾಯಿ ಒಂದಾದರೇ ? ನಿಜವೇ ಇದು ?......ದೇವರೇ, ದೇವರೇ ನಿನ್ನನ್ನೆಷ್ಟು ಸ್ತುತಿಸಲಿ ? ನನ್ನನ್ನು ಪಾತಕದ ವೇದನೆಯಿಂದ ಮುಕ್ತಗೊಳಿಸಿದೆ. ದೇವರೇ, ನಿನ್ನ ಋಣ ಹೇಗೆ ತೀರಿಸಲಿ ?...... ಗುರುಗಳೇ, ನಿಮ್ಮ ಕಾಲಿಗೆ ಬೀಳುತ್ತೇನೆ. ನೀವು ಬದುಕಿಸಿದಿರಿ ನನ್ನನ್ನು.

ಋಷಿ: ನಿನ್ನ ಪಾತಕ ? ಏನೆನ್ನುತ್ತಿರುವೆ ನೀನು ? ಯಾರು ನೀನು ?

ಮನುಷ್ಯ: ಅದೊಂದು ದೊಡ್ಡ ಕತೆ ಸ್ವಾಮಿ. ಅದನ್ನು ಕೇಳದಿರುವುದೇ ಒಳ್ಳೆಯದು. ಮೊದಲೇ ನಿಮ್ಮ ಧ್ಯಾನ ಕೆಡಿಸಿದ್ದೇನೆ. ಇನ್ನು ನನ್ನ ಗೋಳು ಹೇಳಿ ನಿಮ್ಮನ್ನು ಹುಚ್ಚುಗೊಳಿಸಲಾರೆ. ನಮಸ್ಕಾರ ಮುನಿಗಳೇ. ನಾನು ಹೋಗಬೇಕು—ಬೇಗ ಹೋಗಬೇಕು. ಅಯೋಧ್ಯೆಗೆ.

ಋಷಿ: (ಒಮ್ಮೆಲೆ) ತಡೆ....(ಸ್ವಲ್ಪ ತಡೆದು) ನೀನು ಯಾರು ಎಂಬುದನ್ನು ಹೇಳಬಾರದೇ? ಸೀತೆಯಸಂಕಟಕ್ಕೂ ನಿನ್ನ ವ್ಯಥೆಗೂ ಇಂಥ ಸಂಬಂಧ ವಿದೆಯೇ? ಈ ತರಹದ ವ್ಯಥೆಯುಳ್ಳ ಇಬ್ಬರು ಈ ಜಗತ್ತಿನಲ್ಲಿ ಇರಬಹುದು ಎಂದು ಎಣಿಸಿರಲಿಲ್ಲ ನಾನು. ಯಾರು ನೀನು?

ಮನುಷ್ಯ: ನಾನು ಹಿಂದೆ ಅಯೋಧ್ಯೆಯಲ್ಲಿ ಅಗಸನಾಗಿದ್ದೆ, ಗುರುಗಳೇ.

ಋಷಿ: (ಒಮ್ಮೆಲೆ) ಓಹ್, ಅವನೇಯೇನು ನೀನು?

ಅಗಸ: (ಕಹಿಧ್ವನಿಯಲ್ಲಿ) ಹೌದು, ಸ್ವಾಮಿ, ಅವನೇ. ಅಯೋಧ್ಯೆಯಲ್ಲಿ ನೂರಾರು ಅಗಸರಿದ್ದರೂ, 'ಅಯೋಧ್ಯೆಯ ಅಗಸ' ಎಂದೊಡನೆ ಎಲ್ಲರ ಕಣ್ಮುಂದೆ ಮೂಡುವ ಆ ದುರುಳ—ಅವನೇ ನಾನು.

ಋಷಿ: ನನ್ನನ್ನು ಕ್ಷಮಿಸು ತಮ್ಮ. ನಿನ್ನನ್ನು ನೋಯಿಸಲಿಕ್ಕೆ ಎನ್ನಲಿಲ್ಲ ನಾನು. ಬಾಯಿ ತಪ್ಪಿ ಆ ಮಾತು ಬಂತು....ಕ್ಷಮಿಸು.

ಅಗಸ: ನೀವೇಕೆ ಕ್ಷಮೆ ಕೋರಬೇಕು, ಗುರುಗಳೇ? ತಪ್ಪು ಮಾಡಿದವ ನಾನು. ಅದಕ್ಕೇ ಅಯೋಧ್ಯೆಗೆ ಹೋಗಿ ಸೀತಾದೇವಿಯ ಕ್ಷಮೆ ಕೇಳಲು ಹೊರಟಿದ್ದೇನೆ.

ಋಷಿ: (ಮೆಲ್ಲನೆ) ಇಷ್ಟೇಕೆ ಗಡಬಿಡಿಯದಕ್ಕೆ? ಸ್ವಲ್ಪ ವಿಶ್ರಮಿಸು. ಇಲ್ಲಿ ಕುಳಿತಿಕೊ ಸ್ವಲ್ಪ ಹೊತ್ತು....(ತಡೆದು) ತಮ್ಮ, ನಿನ್ನ ನೋವಿನ ಮೇಲೆ ಉಪ್ಪನ್ನು ಅರೆಯುವ ಇಚ್ಛೆಯಿಲ್ಲ ನನಗೆ. ಆದರೆ ನಿನ್ನ ಕತೆ ಏನಾಯಿತು ಎಂಬುದನ್ನು ಸ್ವಲ್ಪ ಹೇಳುತ್ತೀಯಾ ನನಗೆ?

ಅಗಸ: ಅದನ್ನೆಲ್ಲ ಕೇಳಿ ಏನು ಪ್ರಯೋಜನ ನಿಮಗೆ? ಪೃಥ್ವಿಯ ಜನರೆಲ್ಲ ಆಡಿದ್ದನ್ನು ನೀವು ಕೇಳಿರಲೇಬೇಕು.

ಋಷಿ: ಜನ ಬೇಕಾದುದೆನ್ನುತ್ತಾರೆ. ನಾನು ವ್ಯರ್ಥ ಕುತೂಹಲದಿಂದ ಕೇಳುತ್ತಿಲ್ಲ. ನಾನು ಕೇಳುವುದಕ್ಕೊಂದು ಕಾರಣವಿದೆ. ನನ್ನ ಮನಸ್ಸಿನ ಶಾಂತಿಗಾಗಿ ಕೇಳುತ್ತಿದ್ದೇನೆ. ದಯಮಾಡಿ ಹೇಳು......

ಅಗಸ: ನಿಮ್ಮ ಮನಸ್ಸಿನ ಶಾಂತಿ? ಸ್ವಾಮಿ, ನೀವು ಜ್ಞಾನಿಗಳು, ತಪೋಧನರು—

ಋಷಿ: (ಕಳವಳದಿಂದ) ಓಹ್....

ಅಗಸ: ನಿಮಗೆ ನನ್ನ ಕತೆ ಕೇಳಿ ಏನು ಶಾಂತಿ ಸಿಗಬೇಕು? ಆದರೆ ನನಗೆ ಈ ಪುಣ್ಯದ ಸುದ್ದಿ ಹೇಳಿದಿರಿ. ನಿಮಗೆ ಇಲ್ಲ ಎನ್ನಲಾರೆ....ನನ್ನ ಹೆಸರು ಪದ್ಮನಾಭ, ಅಯೋಧ್ಯೆಯಲ್ಲಿ ಅಗಸನಾಗಿದ್ದೆ. ಯಾರ ಗೊಡವೆಯಿಲ್ಲದೆ ನನ್ನಷ್ಟಕ್ಕೆ ಕೆಲಸಮಾಡಿ ನನ್ನ ಹೆಂಡತಿಯೊಡನೆ ಸುಖದಿಂದಿದ್ದೆ. ನಾನು—ನನ್ನ ಹೆಂಡತಿ—ನನ್ನ ಕತ್ತೆ..ಇನ್ನೇನು ಬೇಕಿತ್ತು ನನಗೆ? ಸುಖದಿಂದಿರಬಹುದಾಗಿತ್ತು. ಆದರೆ ಸುಖದಲ್ಲೂ ವಿನಾಶದ ಆಸೆ ಬಿಡುವುದಿಲ್ಲ ಸ್ವಾಮಿ. ನನಗೆ ಶ್ರೀರಾಮನ ಹೆಸರು ತೆಗೆದರೆ ಆಗುತ್ತಿರಲಿಲ್ಲ. ಹೆಸರು ಕೇಳಿದರೆ ಮೈ ಉರಿಯುತ್ತಿತ್ತು. ವಾಲಿಯನ್ನು ಹಿಂದೆಡಗಿ ಕೊಂದವ, ಶೂರ್ಪನಖಿಯಂಥ ಹೆಣ್ಣಿನ ಮೂಗು ಕೊಯ್ಸಿದವ, ವಾನರ ಸೇನೆಯ ಸಹಾಯದಿಂದ ಮಾತ್ರ ಲಂಕೆ ಗೆದ್ದವ—ಒಂದೇ, ಎರಡೇ? ಅಂಥ ರಾಮನ ಪ್ರಜೆ ನಾನಾಗಿದ್ದೇಕೆ ಎಂಬುದನ್ನು ನೆನೆದರೆ ಮೈ ಬೆಂಕಿಯಾಗುತ್ತಿತ್ತು ನನಗೆ. ಆದರೆ ನನ್ನ ಹೆಂಡತಿಗೆ ಮಾತ್ರ ರಾಮನಲ್ಲಿ ಭಕ್ತಿ. ದಿನವೂ ರಾತ್ರಿ ಅವನ ಪೂಜೆ. ಅವನ ಹೆಸರು ನಾಲಿಗೆಯ ಮೇಲೆ. ಅವಳ ಭಕ್ತಿ ಕಂಡಾಗ ನನಗೆ ಪಿಶಾಚಿ ಹಿಡಿದಂತಾಗುತ್ತಿತ್ತು. ಒಮ್ಮೊಮ್ಮೆ ಅಸೂಯೆ ಎನ್ನಿಸುತ್ತಿತ್ತು....ನನ್ನ ಒರಟುತನ ಕ್ಷಮಿಸಬೇಕು ಗುರುಗಳೇ, ಆದರೆ ನಾನು ಅಜ್ಞಾನಿಯಾಗಿದ್ದೆ ಆಗ.

ಋಷಿ: ಆ ವಾಕ್ಯವನ್ನು ಭೂತಕಾಲದಲ್ಲಿ ತಳ್ಳುವ ಧೈರ್ಯ ನನಗಿದ್ದರೆಷ್ಟು ಒಳ್ಳೆಯದಾಗುತ್ತಿತ್ತು!

ಅಗಸ: ಒಂದು ದಿನ ನಮ್ಮಿಬ್ಬರ ಜಗಳವಾಯಿತು. ರಾಮನ ಹೆಸರಿನ ಮೇಲೆ ಪ್ರತಿ ದಿನ ನಮ್ಮಿಬ್ಬರ ವಾದ ನಡೆದೇ ಇರುತ್ತಿತ್ತು. ಆದರೆ ಆ ದಿನ ತಾಳಲಾರದೆ ನಾನವಳಿಗೆ ಒಂದು ಏಟು ಕೊಟ್ಟೆ. ಆದರೆ ಕೊಟ್ಟೆ ಮಾತ್ರ. ಎದೆ ಧಸ್ಸೆಂದಿತು. ಅಲ್ಲಿಯವರೆಗೆ ನಾನೆಂದೂ ಅವಳನ್ನು ಹಿಂಸಿಸಿರಲಿಲ್ಲ. ನನ್ನ ಪ್ರೀತಿಯ ಹೆಂಡತಿಯವಳು. ಏಟು ಕೊಟ್ಟಮೇಲೆ ಅವಳೆದುರು ನಿಲ್ಲಲಾಗಲಿಲ್ಲ ನನಗೆ. ನನ್ನ ಕತ್ತೆಯನ್ನು ತೆಗೆದು ಕೊಂಡು ಘಟ್ಟಕ್ಕೆ ಹೋದೆ. ಇಡಿಯ ದಿನ ಅಲ್ಲಿದ್ದು ದುಡಿದೆ. ಮರಳಿ ಬಂದಾಗ....ಮನೆ ಬರಿದಾಗಿತ್ತು. ನನಗೆ ಏನೋ ವಿಚಿತ್ರವೆನ್ನಿಸಿತು. ಆ ರಾತ್ರಿಯೂ ಅವಳು ತಿರುಗಿ ಬರದಾಗ ಮಾತ್ರ ನಿಶ್ಚಯವಾಯಿತು—ಅವಳು ತನ್ನ ತಂದೆಯ ಮನೆಗೆ ಹೋಗಿರಬೇಕೆಂದು. ನನ್ನ ಪಿತ್ತ ನೆತ್ತಿಗೇರಿತು. ನೆಟ್ಟಗೆ ಹೋಗಿ ಶ್ರೀರಾಮನನ್ನೆದುರಿಸಬೇಕು, ನಮ್ಮ ಸಂಸಾರದಲ್ಲೇಕೆ ಮುಳ್ಳು ಹರಡುತ್ತಿರುವೆ ಎಂದು ಕೇಳಬೇಕು ಎನ್ನಿಸಿತು. ಆದರೆ....ಮನೆಯಲ್ಲೇ ಮಂಕಾಗಿ ಕುಳಿತೆ. ನಾಲ್ಕುದಿನ ಘಟ್ಟದತ್ತ ಹೋಗಲಿಲ್ಲ. ಕೂಡಲೇ ಹೋಗಿ ಹೆಂಡತಿಯನ್ನು ಕರೆದು ತರಬೇಕು—ಎಳೆದಾದರೆ ಎಳೆದು, ಒಲಿಸಿಯಾದರೆ ಒಲಿಸಿ ತರಬೇಕು

ಎನ್ನಿಸುತ್ತಿತ್ತು. ಆದರೆ ಅಭಿಮಾನವೆಲ್ಲಿ ಹೋದೀತು ಸ್ವಾಮಿ? ನಾಲ್ಕು ದಿನ..ಐದನೇ ದಿನ ನಾನು ಮನೆಯಲ್ಲಿದ್ದೆ. ಆಗ ಯಾರೋ ಕದ ಬಡಿದರು.

...................

........ಸಂಗೀತ........

(ಕದಬಡಿದ ಸಪ್ಪಳ)

ಅಗಸ: ಯಾರದು?

ಹೆಣ್ಣು ಧ್ವನಿ: ನಾನು........

ಅಗಸ: (ಆನಂದದಿಂದೆಂಬಂತೆ) ಯಾರು ಗ......(ಆಮೇಲೆ ತನ್ನನ್ನೇ ತಡೆಹಿಡಿದು ವ್ಯಂಗ್ಯದಿಂದ) ನಾನು? ನಾನು ಎಂದರೆ ಯಾರು?

ಹೆಣ್ಣು ಧ್ವನಿ: ನಾನು ಸ್ವಾಮಿ, ತಿರುಗಿ ಬಂದಿದ್ದೇನೆ.

ಅಗಸ: ಓ ಹೋ ಹೋ, ನನ್ನ ಧರ್ಮಪತ್ನಿಯೇನು? ಎಷ್ಟು ಬೇಗನೆ ಬಂದು ಬಿಟ್ಟೆ..ಏಕೆ ತಾಯ್ತಂದೆಯರು ಮಗಳನ್ನು ಮನೆಯಲ್ಲಿ ಬೆಚ್ಚಗಿಡುವ ವ್ಯವಸ್ಥೆ ಮಾಡಿರಲಿಲ್ಲವೇನು?

ಹೆಂಡತಿ: ನಾನು ಅವರಿಗೆ ಹೇಳದೆ ಬಂದಿದ್ದೇನೆ. ಎಲ್ಲ ಹೇಳುತ್ತೇನೆ. ಮೊದಲು ಕದ ತೆಗೆಯಿರಿ.

ಅಗಸ: ಕದ ತೆರೆದೇನು ಮಾಡಲಿ? ಇಲ್ಲಿ ಇರುವವ ನಾನೊಬ್ಬನೇ. ನನಗೂ ನಿನಗೂ ಏನು ಸಂಬಂಧ?

ಹೆಂಡತಿ: (ವಿಹ್ವಲಳಾದಂತೆ) ನಾನು ತಪ್ಪು ಮಾಡಿದೆ, ಸ್ವಾಮಿ. ಒಪ್ಪಿ ಕೊಳ್ಳುತ್ತೇನೆ. ನೀವು ಹೇಳಿದ್ದನ್ನು ಮಾಡುತ್ತೇನೆ ಆದರೆ ಹೀಗೆ ಬೀದಿಯಲ್ಲಿ ಕೂಡ್ರಿಸಬೇಡಿ ನನ್ನನ್ನು. ಕದವಾದರೂ ತೆರೆಯಿರಿ.

ಅಗಸ: ಕದ ತೆಗೆಯಬೇಕಂತೆ—ಕದ! (ತೆರೆಯುತ್ತಾನೆ.) ಹಾಂ. ಹಾಂ. ತಡೆ ತಡೆ. ಹೊರಟೇಬಿಟ್ಟೆಯಲ್ಲ ನೆಟ್ಟಗೆ ಒಳಗೆ...ಹೇಳು. ಏನು ಬೇಕು ನಿನಗಿಲ್ಲಿ?

ಹೆಂಡತಿ: (ದೀನಳಾಗಿ) ದಾರಿ ಬಿಡಿ..ನನ್ನ ತಪ್ಪಾಯ್ತು. ನೆರೆ ಹೊರೆಯವರೆಲ್ಲ ನೋಡುತ್ತಿದ್ದಾರೆ. ಅವರೆದುರಿಗೆ ಏನು ಇದೆಲ್ಲ ಚೇಷ್ಟೆ?

ಅಗಸ: ನೆರೆ ಹೊರೆಯವರು ನೋಡುತ್ತಿದ್ದಾರೇನು? ನೋಡಲಿ, ನೋಡಲಿ. (ಕೂಗಿ) ಬನ್ನಿರಿ, ಬನ್ನಿರಿ (ಇನ್ನೂ ಸಮೀಪ ಬಂದು) ನೋಡಿರಿ ನಮ್ಮ ಮನೆಯ ಆಟ! ಬನ್ನಿರಿ ಕಾಣಿರಿ ಈ ಪತಿವ್ರತೆಯನ್ನು....

ಹೆಂಡತಿ: ಸಾಕು, ಸಾಕು ಮಾಡಿರಿ..ಎಲ್ಲರೆದುರಿಗೆ ನನ್ನ ನಾಚಿಕೆ ತೆಗೆಯಬೇಡಿ. ಸ್ವಾಮಿ, ನಿಮ್ಮ ಕಾಲಿಗೆ ಬೀಳುತ್ತೇನೆ...ನನಗೊಮ್ಮೆ ಒಳಗೆ ಬಿಡಿ..

ಅಗಸ: ನಾಚಿಕೆ ಇದ್ದರಲ್ಲವೆ ತೆಗೆಯುವುದು? ನನಗೆ ಹೇಳದೆ ಮನೆಯಿಂದ ಓಡಿಹೋಗುವಾಗ ಬರಲಿಲ್ಲವೇನು ನಾಚಿಕೆ? ನನಗಿಂತ ನಿನ್ನ ದೇವರು ದೊಡ್ಡವನಾದ ಅಲ್ಲವೇನು ನಿನಗೆ? ಸರಿ ನಿನ್ನಿಚ್ಛೆ. ನಿನ್ನ ತಂದೆ ನಿನ್ನ ಕೈಯಲ್ಲಿ ನೀಲಾಂಜನ ಕೊಟ್ಟು 'ದೀಪ ಹಚ್ಚು' ಎಂದು ಹೇಳಿರ ಬೇಕಲ್ಲ—ಮುದ್ದಿನ ಮಗಳಿಗೆ; ಆದರೆ ಇಲ್ಲೇನೂ ರಾಮ ಸಿಗುವುದಿಲ್ಲ ನಿನಗೆ. ಇಲ್ಲಿ ಇರುವವನು ನಾನು ಮಾತ್ರ. ಕ್ಷುದ್ರ ಅಗಸ! ಅವನೆಲ್ಲಿ ಇದ್ದಾನೆ ಗೊತ್ತೇ? ಅಲ್ಲಿ—ಆ ಅರಮನೆಯಲ್ಲಿ—ಬೇಕಾದರೆ ಹೋಗಲ್ಲಿ, ಅಲ್ಲೇ—

ನೆರೆಮನೆಯ ಹೆಂಗಸು: ಪದ್ಮನಾಭ......

ಅಗಸ: ಏಕೆ, ವಸುಧಮ್ಮ, ದೂರದಿಂದ ನೋಡಿ ಸಾಕಾಗಲಿಲ್ಲವೇನು ಆಟದ ಮೋಜು? ಮತ್ತೆ ಇಲ್ಲಿಯೇಕೆ ನಡುವೆ ಮೂಗು ಹಾಕುತ್ತಿದ್ದೀರಾ?

ವಸುಧಮ್ಮ: ಸಿಟ್ಟಾಗ ಬೇಡಪ್ಪ. ಆದರೆ ಈ ರೀತಿ ಎಲ್ಲರೆದುರಿಗೆ ಹೆಂಡತಿಯ ನಾಚಿಕೆ ತೆಗೆಯೋದು ಒಳ್ಳೆಯದಲ್ಲಪ್ಪ. ಅಲ್ಲದೆ ಅಲ್ಲಿ ನೋಡು. ರಾಜನ ಸೈನಿಕನೊಬ್ಬ ಬರುತ್ತಿದ್ದಾನೆ. ಈಕಡೆಯೇ ಬರುತ್ತಿದ್ದಾನೆ. ಈ ಗದ್ದಲ ಕೇಳಿ ಬರುತ್ತಿರಬೇಕು. ಎಲ್ಲಿಯಾದರೂ ರಾಜನೆಡೆಗೆ ಎಳೆದೊಯ್ದರೆ ನಾಚಿಕೆ ಗೇಡಲ್ಲವೆ ನಿನಗೆ?

ಅಗಸ: (ಉರಿದು) ನನಗೆ ನಾಚಿಕೆಗೇಡು—ಶ್ರೀರಾಮನಿಂದ? ವಸುಧಮ್ಮ, ನಾನು ಎಂದರೆ ಯಾರೆಂದು ತಿಳಿದಿದ್ದಾನೆ ಅವನು? ನನಗೆ ಆಜ್ಞೆಮಾಡಿ ಇವಳನ್ನು ಒಳಗೆ ಬಿಡುವಂತೆ ಮಾಡುತ್ತಾನೇನು? ಇಲ್ಲ. ಇಲ್ಲ. ಇಲ್ಲ...ಮನೆ ಬಿಟ್ಟು ದೂರ ಹೋದ ಹೆಂಡತಿಯನ್ನು ಮತ್ತೆ ಸ್ವಾಗತ ಮಾಡಿ ಕರೆದುಕೊಳ್ಳಲಿಕ್ಕೆ ನಾನು ರಾಮನಲ್ಲ ಎಂದೆ.

ಹೆಂಡತಿ: ಅಯ್ಯೋ, ನನ್ನನ್ನು ಬೀದಿಯಲ್ಲಿ ಒಗೆಯಿರಿ. ಕೊಲ್ಲಿರಿ. ಆದರೆ. ಶ್ರೀರಾಮನನ್ನು ಹೀಗೆ ಬಯ್ಯಬೇಡಿರಿ......

ಅಗಸ: ನೋಡು, ನೋಡು, ಮೂಗಿಗೆ ಹೇಗೆ ಉರಿಬಿತ್ತು...

ವಸುಧಮ್ಮ: ಪದ್ಮನಾಭ, ಏನಿದು? ಆ ಸೈನಿಕ ಇದನ್ನು ಕೇಳಿದರೆ—

ಅಗಸ: ಕೇಳಲಿ, ನನಗೇನು ಹೆದರಿಕೆಯೇನು? ಎಲ್ಲಿದ್ದಾನವನು? ನಾನೇ ಹೇಳುತ್ತೇನೆ ಅವನಿಗೆ...ಎಲಾ ಇವನ. ಓಡಿಹೋಗಿ ಬಿಟ್ಟನೇನು ಪುಣ್ಯಾತ್ಮ?......ಹೋಗದೆ ಏನು ಮಾಡುತ್ತಾನೆ ಅನ್ನಿ. ಅಂಥವನ ಆಳಾಗಿರೋದೆ ನಾಚಿಕೆ ಎನ್ನಿಸಿರಬೇಕು—

ಹೆಂಡತಿ: ದೇವರೇ, ಇಂಥ ಹೇಸಿ ಮಾತನ್ನು ಕೇಳುವುದಕ್ಕಿಂತ ನಾನು ಸತ್ತು ಏಕೆ ಹೋಗುವುದಿಲ್ಲ?

.........ಸಂಗೀತ.........

ಅಗಸ: ನಾನು ಕೊನೆಗೂ ನನ್ನ ಹೆಂಡತಿಯನ್ನು ಮನೆಯಲ್ಲಿ ಬರಗೊಡಲಿಲ್ಲ. ಅವಳು ತಂದೆಯ ಮನೆಗೂ ಹೋಗಲಿಲ್ಲ. ನೆರೆಮನೆಯ ವಸುಧಮ್ಮನ ಮನೆಯಲ್ಲಿದ್ದಳಂತೆ. ಇತ್ತ ನನಗೂ ಹುಚ್ಚು ಹಿಡಿಯುತ್ತದೋ ಎನ್ನಿಸುತ್ತಿತ್ತು. ಎಲ್ಲರೆದುರು ತಳೆದ ಅವತಾರ ನೆನಪಾದಾಗ ನಾಚಿಕೆ ಎದೆಯೊಡೆಯುತ್ತಿತ್ತು. ಹೆಂಡತಿಯನ್ನು ಕಾಣಬೇಕು ಅವಳ ಕ್ಷಮೆ ಕೇಳಬೇಕು......ಅವಳು ಸುಶೀಲೆ, ಕುವಿಚಾರಕ್ಕೆ ಎದೆಗೆಡುವವಳಲ್ಲ ಎಂಬುದೂ ನನಗೆ ಖಚಿತವಾಗಿ ಗೊತ್ತಿತ್ತು. ಆದರೆ ಅಭಿಮಾನ— ಮತ್ತೆ ಅದೇ ದುರಾಗ್ರಹ ಅವಳೆಲ್ಲಿಯಾದರೂ ಕದ್ದು ಬರಬಹುದೆಂದು ಮನೆಯ ಬಾಗಿಲುಗಳನ್ನು ಗಟ್ಟಿಯಾಗಿ ಮುಚ್ಚಿಟ್ಟಿದ್ದೆ...ನಾಲ್ಕೈದು ದಿನಗಳನಂತರದ ಸುದ್ದಿಯಿದು. ನಾನು ತಲೆ ಹಿಡಿದು ಕುಳಿತುಕೊಂಡಿದ್ದೆ. ಯಾರೋ ಒಮ್ಮೆಲೆ ಕದ ಬಡಿಯಲಾರಂಭಿಸಿದರು.........

* * * *

(ಒಂದೇ ಸಮನೆ ಕದದ ಬಡಿತ)

ಅಗಸ: (ಕೂಗಿ) ಯಾರದು?

ಹೆಂಡತಿ: ನಾನು, ಸ್ವಾಮಿ. ಬೇಗ ಕದ ತೆಗೆಯಿರಿ. ಬೇಗ......

ಅಗಸ: ಏಕೆ ಬಂದೆ ಮತ್ತೆ? ಕದವನ್ನು ತೆರೆಯುವುದಿಲ್ಲ, ತೆರೆಯುವುದಿಲ್ಲ!

ಹೆಂಡತಿ: ನನಗಾಗಿಯಲ್ಲ, ಸ್ವಾಮಿ ನಿಮಗಾಗಿ! ನಿಮ್ಮ ಜೀವಕ್ಕಾಗಿ. ನಿಮ್ಮನ್ನು ಕೊಲ್ಲಲಿಕ್ಕೆ ಬರುತ್ತಿದ್ದಾರೆ ಸ್ವಾಮಿ......

ಅಗಸ: (ಔಪರೋಧಿಕವಾಗಿ) ನನ್ನನ್ನು ಕೊಲ್ಲಲಿಕ್ಕೆ ಬರುವವರು ಯಾರು? ಮಾವನವರೆ?

ಹೆಂಡತಿ: ವಿನೋದಕ್ಕೆ ಇಂದಿಷ್ಟು ಹೊತ್ತಿಲ್ಲ. ಅದೋ......ಬಂದರವರು. (ದೂರದಲ್ಲಿ ಜನರ ಕೋಲಾಹಲ, ಗಲಭೆ ನಿಮಿಷ ನಿಮಿಷಕ್ಕೆ ಸಮೀಪ ಬರುತ್ತಿದೆ.)

ಅಗಸ: ಏನು ಆ ಗಲಭೆ? ತಡೆ. ಸ್ವಲ್ಪ ತಡೆ, ಕದ ತೆರೆಯುತ್ತೇನೆ. ಇಷ್ಟೆಲ್ಲ ಜನರು ಯಾರವರು? ಏಕೆ ಬರುತ್ತಿದ್ದಾರೆ?

ಹೆಂಡತಿ: ಒಳಗೆ ಬನ್ನಿ ಬೇಗ. ಕದ ಮುಚ್ಚಿಕೊಳ್ಳಿ. ಹೊರಗೆ ನಿಲ್ಲಬೇಡಿ. ನಿಮ್ಮ ಜೀವಕ್ಕೆ ಅಪಾಯ....ಮುಚ್ಚಿರಿ ಬೇಗ. (ಕದ ಮುಚ್ಚುತ್ತಾಳೆ.

ಹೊರಗೆ ಗದ್ದಲ ಹೆಚ್ಚಾಗಿದೆ. 'ಪದ್ಮನಾಭ ಒಳಗೆ ಓಡಬೇಡ' ಎಂದು ಯಾರೋ ಕೂಗುತ್ತಾರೆ.)

ಅಗಸ: (ಬೆದರಿದ ಧ್ವನಿಯಲ್ಲಿ) ಯಾರವರು? ನಮ್ಮ ಮನೆಯನ್ನೇಕೆ ಸುತ್ತುತ್ತಿದ್ದಾರೆ? ಏನು ಬೇಕಂತೆ ಅವರಿಗೆ?

ಹೆಂಡತಿ: (ಅಳುತ್ತ) ನೀವಿನ್ನೂ ಕೇಳಿಲ್ಲವೆ ಸ್ವಾಮಿ ಅನರ್ಥದ ಸುದ್ದಿ?

ಅಗಸ: ಅನರ್ಥ? ನನಗೆ ಹೇಗೆ ತಿಳಿಯಬೇಕು? ನಾನು ಮನೆಯಿಂದ ಹೊರಗೇ ಹೋಗಿಲ್ಲ. ಯಾವ ಅನರ್ಥ?

ಹೆಂಡತಿ: ವಸುಧಮ್ಮನ ಗಂಡ ಹೇಳಿದರು ಸ್ವಾಮಿ. ಈ ಜನ ಬರುತ್ತಿದ್ದಾರೆಂದು ....ನಿಮ್ಮಿಂದ ಸೀತೆಗೆ ಮತ್ತೆ ವನವಾಸವಾಯಿತೆಂದು ರೊಚ್ಚಿಗೆದ್ದ ಈ ಜನ ಬಂದಿದ್ದಾರೆ—

ಅಗಸ: ಏನು ಬಡ ಬಡಿಸುತ್ತಿರುವೆ ಹುಚ್ಚಿಯಂತೆ?

ಹೆಂಡತಿ: ಆ ದಿನ....ನೀವು ಆಡಿದ ಮಾತುಗಳನ್ನು ಕೇಳಿ, ಆ ಸೈನಿಕ ಕೂಡಲೇ ಅರಮನೆಗೆ ಹೋದನಂತೆ. ಎಲ್ಲವನ್ನೂ ಅರಸರಿಗೆ ಹೇಳಿದನಂತೆ.

ಅಗಸ: (ದ್ವೇಷದಿಂದ) ಮೂರ್ಖ! ಕೆಲವರ ಬಾಯಲ್ಲೊಂದೂ ಶಬ್ದ ನಿಲ್ಲುವುದಿಲ್ಲ.

ಹೆಂಡತಿ: ಅದರಿಂದ ಮನನೊಂದ ರಾಮಚಂದ್ರ ಪ್ರಭು ಸೀತೆಯನ್ನು ಲಕ್ಷ್ಮಣನೊಡನೆ ವನಕ್ಕೆ ಕಳುಹಿಸಿದ್ದಾನಂತೆ....ಸೀತೆಗೆ ಮರಳಿ ವನವಾಸ, ಸ್ವಾಮಿ. ಈಸಲ ಮಾತ್ರ ಆ ಜನ್ಮ ವನವಾಸ....ನಿಮ್ಮ ಒಂದು ಮಾತಿಗಾಗಿ......

(ಅಳುತ್ತಾಳೆ. ಹೊರಗೆ ಗಲಭೆ ಹೆಚ್ಚುತ್ತದೆ. 'ಮುರಿಯಿರಿ ಕದ' 'ಹೊರಗೆ ಎಳೆದು ತೆಗೆಯಿರಿ ಆ ಮೂರ್ಖನನ್ನು', 'ಬೆಂಕಿ ಹಚ್ಚಿರಿ ಅವನ ಮನೆಗೆ' ಇತ್ಯಾದಿ ಕೂಗುಗಳು. ಕೆಲ ಕಲ್ಲೂ ಹೆಂಚಿನ ಮೇಲೆ ಬಿದ್ದ ಸಪ್ಪಳ.)

ಹೆಂಡತಿ: ಸ್ವಾಮಿ, ಕಿಟಕಿಯ ಹತ್ತಿರ ಹೋಗಬೇಡಿ. ಅವರು ಕಲ್ಲೊಗೆಯುತ್ತಿದ್ದಾರೆ. (ಅಗಸ ಮಾತ್ರ ನಗಲಾರಂಭಿಸುತ್ತಾನೆ.) ಇಂಥ ಪ್ರಸಂಗದಲ್ಲಿಯೂ ನಗೆಯೇನು ಸ್ವಾಮಿ? ಎಂಥ ಕಲ್ಲೆದೆ ನಿಮ್ಮದು?

ಅಗಸ: ಅಯೋಧ್ಯೆಯ ಸುಸಂಸ್ಕೃತ ಪೌರರು! ರಾಮರಾಜ್ಯದ ಪ್ರಜೆಗಳೆಂದು ತಮ್ಮ ಶಾಂತಿ, ವಿನಯ, ವಿದ್ಯೆಗಾಗಿ ಹೆಸರಾದ ಜನ! ಆದರೆ ನನ್ನ ಒಂದು ಮಾತಿಗೆ ಇವರ ಛದ್ಮ ವೇಷವೆಲ್ಲ ಕಳಚಿಬಿದ್ದಿದೆ, ನೋಡು....

ಹೆಂಡತಿ: (ಕೋಪದಿಂದ) ಅವರಿಗೇಕೆ ಬಯ್ಯುತ್ತೀರಿ? ನೀವಿಂಥವರು ಎಂಬುದು ನನಗೂ ಇಷ್ಟು ದಿನ ತಿಳಿದಿರಲಿಲ್ಲ. ತಿಳಿದಿದ್ದರೆ ತಿರುಗಿ ಬರುತ್ತಿರಲಿಲ್ಲ. ಈ ಕಟುಕರ ಮನೆಗೆ—

ಅಗಸ: (ನಗುತ್ತ) ನಾನೂ ಈ ಅಯೋಧ್ಯೆಯವನೇ ಅಲ್ಲವೇ? (ಹೊರಗಿನ್ನೂ ಗದ್ದಲ ನಡೆದಿದೆ. ಕುದುರೆಗಳ ಖುರ ಪುಟ.) ಕುದುರೆಗಳು.... ಪರ ಊರಿನವರೂ ಬಂದರೇ ನನ್ನನ್ನು ಸ್ವಾಗತಿಸಲಿಕ್ಕೆ?

ಹೆಂಡತಿ: ನಾನು ನೋಡುತ್ತೇನೆ. ನೀವು ಏನಾದರೂ ಕಿಟಕಿಯ ಹತ್ತಿರ ಹೋಗ ಬೇಡಿ. ಸ್ವಾಮಿ...ಸ್ವಲ್ಪ ತಾಳಿ...ಇವರು ಬೇರೂರಿನ ಜನರಲ್ಲ. ಸೈನಿಕರು! ರಾಜನ ರಾಹುತರು....

ಅಗಸ: (ಬೆದರಿದವನಂತೆ ಒಮ್ಮೆಲೆ) ರಾಹುತರು? ಅವರು ಇಲ್ಲಿ ಏಕೆ? ನನ್ನನ್ನು ಹಿಡಿದೊಯ್ಯಲು ಬಂದಿದ್ದಾರೇನು?

ಹೆಂಡತಿ: ಇಲ್ಲ. ಅವರ ಮುಂದಾಳು ಏನೋ ಪತ್ರ ತೆಗೆಯುತ್ತಿದ್ದಾನೆ. ಬಿಚ್ಚಿ ಓದುತ್ತಿದ್ದಾನೆ. ಏನೋ ರಾಜಾಜ್ಞೆಯಿರಬೇಕು.

(ಹೊರಗೆ ಒಂದು ಗಂಟೆಯ ಸದ್ದು. ಗದ್ದಲ ಕಡಿಮೆಯಾಗುತ್ತಾ ಹೋಗಿ ಕೊನೆಗೆ ಸ್ತಬ್ಧತೆ.)

ಸೈನಿಕ: ಅಯೋಧ್ಯೆಯ ನಾಗರೀಕರೇ, ಕೇಳಿರಿ! ಸಕಲ ಭೂಮಂಡಲೇಶ್ವರ ಮುಂದಾಳು. ಕೌಸಲ್ಯಾ ತನಯ ಶ್ರೀರಾಮಚಂದ್ರ ಪ್ರಭುಗಳು ಈ ಮುಂದಿನಂತೆ ಆಜ್ಞಾಪಿಸಿದ್ದಾರೆ. ರಾಣಿ ಸೀತಾದೇವಿಯ ನಿರ್ಗಮನದಿಂದ ಪೌರರಿಗೆಷ್ಟು ದುಃಖವಾಗಿದೆಯೆಂಬುದರ ಕಲ್ಪನೆ ರಾಜೇಂದ್ರರಿಗಿದೆ ಆದರೆ ಆ ಸಂತಾಪಕ್ಕೆ ಒಳಗಾಗಿ ಪೌರರು ಹಿಂಸೆಗೆ ಕೈಹಾಕಬಾರದು, ಅನರ್ಥಕ್ಕೆ ಎಡೆಗೊಡಬಾರದು. ರಾಜರ ಸಕಲ ಕಾರ್ಯಗಳ ಹೊಣೆ ಅವರ ಮೇಲೆಯೇ ಇದೆಯೆಂಬುದನ್ನು ನೆನಪಿಟ್ಟು ಶಾಂತಿಯಿಂದ ವರ್ತಿಸಬೇಕು.

(ಗಂಟೆ. ಆ ಮೇಲೆ ಸೈನಿಕ ದರ್ಪದಿಂದ)

ಕೇಳಿದಿರೇನು ರಾಜಾಜ್ಞೆ? ಸರಿ, ಹೊರಡಿರೀಗ ಮನೆಗೆ.

ಒಬ್ಬ ನಾಗರಿಕ: ಆ ದುರುಳನನ್ನು ಅರಸರು ಹೀಗೆಯೇ ಬಿಡಬಾರದು. ಅವನಿಗೆ ಶಿಕ್ಷೆಯಾಗಲೇಬೇಕು.

ಸೈನಿಕ: ಸಾಕು ಈ ಜೊಳ್ಳು ಮಾತು! ಶ್ರೀರಾಮ ಪ್ರಭುಗಳಿಗೆ ನ್ಯಾಯದ ಪಾಠ ಹೇಳಿಕೊಡುತ್ತೀರೇನು? ಹೇಳಿದಷ್ಟು ಕೇಳಲಿಕ್ಕಾಗುವುದಿಲ್ಲವೇನು? ಹುಂ! ಕೂಡಲೆ ಹೊರಡಿರಿ ಮನೆಗೆ. (ಗದ್ದಲ ಕಡಿಮೆಯಾಗುತ್ತದೆ. ಕೊನೆಗೆ ನಿಶ್ಶಬ್ದ. ಕುದುರೆಗಳ ಖುರ ಪುಟ.)

ಅಗಸ: ಹೋದರೇನು ಜನ?

ಹೆಂಡತಿ: (ಉದಾಸೀನಳಾಗಿ) ಹೌದು. ಹೋದರು. ಎಲ್ಲರೂ ಹೋದರು.

ಅಗಸ: ನಾನೂ ಹೊರಡಬೇಕು.

ಹೆಂಡತಿ: (ಬೆದರಿ) ನೀವು? ನೀವೆಲ್ಲಿ ಹೊರಟಿರಿ?

ಅಗಸ: ಅರಮನೆಗೆ. ನಾನು ರಾಮಚಂದ್ರನನ್ನು ಕಾಣಲೇಬೇಕು. ಸೀತೆ ಮರಳಿ ಬರಲೇಬೇಕು.

ಹೆಂಡತಿ: ಈಗ ಬೇಡ ಸ್ವಾಮಿ. ರಾಜರ ಕ್ಷಮೆ ಕೇಳುವುದಿದ್ದರೂ ಸ್ವಲ್ಪ ತಡೆದು ಹೋಗಿ.

ಅಗಸ: ಕ್ಷಮೆ? ನಾನು ಯಾರ ಕ್ಷಮೆ, ಏಕೆ ಕೇಳಬೇಕು? ನಾನೇನು ತಪ್ಪು ಮಾಡಿದೆ? ನನ್ನ ಮಾತು ಕೇಳಿ ರಾಮ ಸೀತೆಯನ್ನು ವನಕ್ಕಟ್ಟಿದ ನಂತಲ್ಲ. ಈಗ ನನ್ನ ಮಾನವನ್ನು ಉಳಿಸಲಿಕ್ಕೆ ಬರಬೇಕು ಅವಳು ತಿರುಗಿ. ನೀನು ಆ ಸೈನಿಕರ ಮುಂದಾಳು ಎಂದಿದ್ದನ್ನು ಕೇಳಲಿಲ್ಲ ವೇನು? 'ರಾಜರ ಕೃತ್ಯದ ಹೊಣೆ ರಾಜರ ಮೇಲೆಯೇ ಅಂತೆ....' ಎಷ್ಟು ಚತುರತೆಯಿಂದ ಹೊಣೆ ತನ್ನದಲ್ಲ ಎಂದು ಸೂಚಿಸುತ್ತಾನೆ ನಿನ್ನ ರಾಮ. ಜನರೂ ಇದನ್ನು ನನ್ನ ತಲೆಯ ಮೇಲೆಯೇ ಹಾಕಿ ದ್ದಾರೆ....ಈ ಅಪವಾದ ಹೊತ್ತು ನಾನಿಲ್ಲಿ ಇರುವುದಾದರೂ ಹೇಗೆ? ಈ ಅಪವಾದ ನನಗಂಟಿಕೊಂಡರೆ ನಾನು ಜೀವನ ಸಾಗಿಸುವುದಾದರೂ ಹೇಗೆ? ನನಗೆ ಬಟ್ಟೆ ಕೊಡುವವರಾದರೂ ಯಾರು? ಇಲ್ಲ. ಇಲ್ಲ ನಾನು ಅರಸನನ್ನು ಕಾಣಲೇಬೇಕು.

ಹೆಂಡತಿ: ಸ್ವಾಮಿ, ದಾರಿಯಲ್ಲಿ ನಿಮಗೇನಾದರೂ ಅಪಾಯವಾದೀತು. ದಯ ಮಾಡಿ ಈಗ ಹೋಗಬೇಡಿ....

ಅಗಸ: ಜನರಿಗೇಕೆ ಸುಮ್ಮನೇ ಹೆದರುತ್ತೀ ನೀನು? ಅವರು ರಾಮನ ಭಕ್ತರು. ಅವರಿಗೆ ರಾಮನ ಮಾತಿನ ಅರ್ಥ ತಿಳಿಯಲಿಲ್ಲವೆಂದು ಎಣಿಸಿದೆಯಾ? ಅವರು ನನಗೆ ಜೀವಂತ ಇರಗೊಟ್ಟರೆ ನಾನಿರುವವರೆಗೆ ನನ್ನ ಮೇಲೆ ಈ ಅಪವಾದ ಹೊರಲಾಗುತ್ತದೆ. ಅವರಿಗೆ, ಅದಕ್ಕೇ ನನ್ನನ್ನು ಮುಟ್ಟಲಾರರವರು.

ಹೆಂಡತಿ: ಅವರ ಭಯ ಇಲ್ಲ ನನಗೆ....ನನಗಿದ್ದ ಭಯ ರಾಮನದು....

* * * *

ಅಗಸ: ನಾನು ನೇರವಾಗಿ ಅರಮನೆಗೆ ಹೋದೆ. ನಾನು ನೆನೆದಂತೆ ನನ್ನನ್ನು ಯಾರೂ ಮುಟ್ಟಲಿಲ್ಲ. ನನ್ನತ್ತ ನೋಡಿ, ಮುಖ ತಿರುವಿದರು. ಅಯೋಧ್ಯೆಯ ಮೇಲೆ ಮೃತ್ಯು ಕಳೆ ಹರಡಿತ್ತು. ಅರಮನೆಯ ದ್ವಾರ

ಪಾಲಕ ನನಗೆ ಒಳಗೆ ಹೋಗಗೊಡಲಿಲ್ಲ. ಶ್ರೀರಾಮನಿಗೆ ಸ್ವಾಸ್ಥ್ಯವಿಲ್ಲ. ಭರತನನ್ನು ಬೇಕಾದರೆ ಕಾಣಬಹುದು ಎಂದ. ಆದರೆ ನಾನು ಕಾಣ ಬೇಕಾಗಿತ್ತು ಶ್ರೀರಾಮಚಂದ್ರನನ್ನು. ಅವನು ತನ್ನ ಒಂದು ಕೃತ್ಯ ದಿಂದ ನನ್ನ ಜೀವನ ಹೇಗೆ ಹಾಳುಮಾಡುತ್ತಿದ್ದಾನೆಂದು ತೋರಿಸುವು ದಿತ್ತು. ನಾನು ಕಾವಲುಗಾರರೊಡನೆ ಜಗಳಾಡಿದೆ. ಅವರ ಕಾಲ್ಗೆರ ಗಿದೆ. ಆದರೇನೂ ಉಪಯೋಗವಾಗಲಿಲ್ಲ. ಕೊನೆಗೆ, ಆ ಗದ್ದಲ ಕೇಳಿ ಭರತನೇ ಹೊರಗೆ ಬಂದ.

ಭರತ: ದ್ವಾರಪಾಲಕರೇ ಏನು ಗದ್ದಲ ನಡೆದಿದೆ ಇಲ್ಲಿ?

ದ್ವಾ. ಪಾ: ಪುಣ್ಯಶ್ರೀ ಕೈಕೇಯರಿಗೆ ಜಯವಾಗಲಿ! ಈ ಮನುಷ್ಯ ಪ್ರಭುಗಳನ್ನು ಕಾಣಬೇಕೆನ್ನುತ್ತಾನೆ. ತಮ್ಮನ್ನು ಭೆಟ್ಟಿಯಾಗು ಎಂದರೆ ಕೇಳುವು ದಿಲ್ಲ. ಎಷ್ಟು ಹೇಳಿದರೂ ಹಟ ಹಿಡಿದಿದ್ದಾನೆ.

ಭರತ: ಏನು ಬೇಕು ನಿನಗೆ?

ಅಗಸ: ನಾನೇನು ಹೇಳಲಿ, ಒಡೆಯ? ನಾನೊಂದು ಕೋಪದಿಂದ ಆಡಿದ ಮಾತಿಗೆ ಪ್ರಭುಗಳು ಸೀತಾದೇವಿಯನ್ನು ವನಕ್ಕೆ ಕಳಿಸಿದ್ದಾರಂತೆ. ನಾನು ಕೆಟ್ಟ ಉದ್ದೇಶದಿಂದ ಆಡಿರಲಿಲ್ಲ. ಒಡೆಯ ಬಾಯ್ತಪ್ಪಿ ಆಡಿದ ಮಾತುಗಳವು......

ಭರತ: ಈಗ ದುಃಖಪಟ್ಟು ಏನು ಉಪಯೋಗ? ಶ್ರೀರಾಮಚಂದ್ರರು ಈಗ ನಿಶ್ಚಯ ಮಾಡಿದ್ದಾರೆ. ಈಗ ಅವರು ಮನಸ್ಸನ್ನು ಬದಲಿಸಲಾರರು.

ಅಗಸ: ಆದರೆ ನನ್ನ ಗತಿಯೇನು? (ಕಳವಳದಿಂದ) ಶ್ರೀರಾಮಚಂದ್ರ ಪ್ರಭುಗಳ ಕೃತ್ಯದ ಹೊಣೆಯನ್ನು ನಾನು ಹೊರಲಾರೆ ಸ್ವಾಮಿ......

ಭರತ; ನಾನೇನು ಮಾಡಲಿ ರಜಕ. ತಪ್ಪು ನಿನ್ನದಲ್ಲ. ನೀನಿಲ್ಲದಿದ್ದರೆ ಬೇರೆ ಯಾವುದಾದರೂ ಕಾರಣ ಸಿಗುತ್ತಿತ್ತು ಶ್ರೀರಾಮರಿಗೆ......

ಅಗಸ: ಎಂದರೆ? ಎಂದರೇನು ಸ್ವಾಮಿ?

ಅಗಸ; ಭರತರು ನನ್ನ ಪ್ರಶ್ನೆಗೆ ಉತ್ತರ ಕೊಡಲಿಲ್ಲ. ನಾನು ಹಿಂದಕ್ಕೆ ಹೊರಳಿದೆ. ಆದರೆ ಮನೆಗೆ ಹೋಗುವದು ಅಶಕ್ಯವಾಗಿತ್ತು. ಹೆಂಡತಿ ಯನ್ನು ಕಾಣುವದು ಅಸಹ್ಯವೆನ್ನಿಸುತ್ತಿತ್ತು. ಅವಳು ಆ ಅಪವಾದದ ಸಾಕ್ಷಾತ್ಕಾರದಂತಿದ್ದಳು! ನಾನು ಅಯೋಧ್ಯೆ ಬಿಟ್ಟು ಹೊರಬಿದ್ದೆ. ಅಯೊಧ್ಯೆಗೆ ಮರಳಿ ಬರಲಾರನೆಂದು ಆಣೆ ಮಾಡಿದೆ. ವಿಷ್ಣುಪುರಕ್ಕೆ ಹೋದೆ. ಅಲ್ಲಿ ಅಗಸನೆಂದು ಕೆಲಸ ಹಿಡಿದೆ. ಆದರೆ ಕೆಲಸಮಯದಲ್ಲಿ ಅಲ್ಲಿಯೂ ಯಾರೋ ನನ್ನ ಗುರುತು ಹಿಡಿದರು. 'ಅಯೋಧ್ಯೆಯ ದುಷ್ಟ ಅಗಸ ವಿಷ್ಣುಪುರದಲ್ಲಿದ್ದಾನೆ' ಎಂಬ ಕೂಗು ಎದ್ದಿತು. ಕಂಡವ

ರೆಲ್ಲ ನನ್ನನ್ನು ಬೆರಳುಮಾಡಿ ತೋರಿಸಿದರು. ಕೊನೆಗೆ ಊರಿನ ಅಗಸರು ನನ್ನನ್ನು ವಿಷ್ಣುಪುರದಿಂದ ಓಡಿಸಿದರು. ನಾನು ಮಿಥಿಲೆಗೆ ಹೋದೆ. ಅಲ್ಲಿಯೂ ಅದೇ ಗತಿ! ಹೋದಲ್ಲೆಲ್ಲ ಅಪವಾದ ನನ್ನ ನೆರಳಾಗಿತ್ತು......

ಋಷಿ: ನೀನು ದೂರ ದಕ್ಷಿಣದಲ್ಲಿ ಎಲ್ಲಾದರೂ—ಏಕೆ ಹೋಗಲಿಲ್ಲ!

ಅಗಸ: ನನಗೆ ಮನುಷ್ಯ ಸಮಾಜದ ಬಗ್ಗೆ ಘೃಣೆಯೆನ್ನಿಸ ಹತ್ತಿತ್ತು ಸ್ವಾಮಿ. ಅದಕ್ಕೇ ಊರುಗಳನ್ನು ಬಿಟ್ಟು ಅಡವಿ ಸೇರಿದೆ. ನಾನು ಅಡವಿಯಲ್ಲಿ ಆರು ವರುಷ ಇದ್ದು ಪಶುವಾಗಲೆತ್ನಿಸಿದೆ.

ಒಂದು ದಿನ ಒಬ್ಬ ಋಷಿಗಳು ನನ್ನನ್ನು ತಮ್ಮ ಆಶ್ರಮಕ್ಕೆ ಕರೆದೊಯ್ದರು. ಅಲ್ಲಿ ವೇದೋಪನಿಷತ್ತುಗಳ ಗಂಗೆ ನನ್ನ ಕಿವಿಗಳ ಮೇಲೆ ಹರಿಯಿತು. ಮನಸ್ಸು ತಣಿಯಿತು. ಸಮಾಧಾನದ ಬೀಜ ಚಿಗುರಿತು ಅಲ್ಲಿ. ಮೂರು ವರುಷ ಅಲ್ಲಿದ್ದೆ. ಆ ಮೇಲೆ ಮಹರ್ಷಿಗಳ ಆಶೀರ್ವಾದ ಪಡೆದು ಹೊರಬಿದ್ದೆ. ಹೆಂಡತಿಯನ್ನು ಕಾಣುವ ಆಸೆ ಪ್ರಬಲವಾಗಿತ್ತು. ಅಯೋಧ್ಯೆಗೆ ಹೋಗಿ ಮನೆಯೆದುರಿಗೆ ನಿಂತೆ. ಮನೆ? ಮನೆಯೆಂಥದದು? ಕೊಟ್ಟಿಗೆಯಾಗಿತ್ತು. ವಿಧ್ವಸ್ತವಾಗಿತ್ತು.

ಮಂಕಾಗಿ ಮುರಿದುಬಿದ್ದ ಮನೆಯನ್ನೇ ದಿಟ್ಟಿಸುತ್ತಾ ಎಷ್ಟು ಹೊತ್ತು ನಿಂತಿದ್ದೆನೋ ಏನೋ. ಆಗಲೇ ಯಾರೋ ಗೃಹಸ್ಥ ನನ್ನನ್ನು ಮಾತನಾಡಿಸಿದ.

ಗೃಹಸ್ಥ: ಏನು ಸ್ವಾಮಿ? ಊರಿಗೆ ಹೊಸಬರೇನು ನೀವು?

ಅಗಸ: ಹುಂ....ಈ ಮನೆಯನ್ನು ನೋಡುತ್ತಿದ್ದೆ. ಹೇಗೆ ವಿಧ್ವಸ್ತವಾಗಿದೆ ಈ ವೈಭವದ ನಗರಿಯಲ್ಲಿ ಈ ಅವಕಳೆ ಹೇಗೆ?

ಗೃಹಸ್ಥ: ಓ ಇದೇ? ನಿಮಗೆ ಗೊತ್ತಿಲ್ಲವೇ? ಇಲ್ಲಿ ಆ ಅಗಸ ಇರುತ್ತಿದ್ದ—ಸೀತಾದೇವಿಯನ್ನು ವನಕ್ಕೆ ಕಳಿಸಿದ ಧೂರ್ತ. ಅವನಂತೂ ಓಡಿಹೋದ. ಅನಂತರ ಯಾರೂ ಆ ಮನೆಯಲ್ಲಿರಲಿಕ್ಕೆ ಸಿದ್ಧರಿಲ್ಲ.

ಅಗಸ: ಅವನ ಹೆಂಡತಿ?

ಗೃಹಸ್ಥ: ಅವನು ಹೋದ ಮೇಲೆ ಅವಳೇನಿರುತ್ತಾಳೆಯೇ? ಬಲ್ಲವರು ಹೇಳಿ ನೋಡಿದರು. ಆದರೆ ಒಂದು ಕಾಳೂ ಉಣ್ಣಲಿಲ್ಲ. ಒಂದು ಹನಿ ನೀರು ಕುಡಿಯಲಿಲ್ಲ. ಕದ ಮುಚ್ಚಿ ಒಳಗೇ ಹುಚ್ಚಿಯಂತೆ ಕುಳಿತಿರುತ್ತಿದ್ದಳು. ಅವಳು ಸತ್ತ ನಂತರ ಕೂಡ ಎರಡು ದಿನಗಳವರೆಗೆ ಯಾರಿಗೂ ಗೊತ್ತಾಗಲಿಲ್ಲವಂತೆ? ಕೊಳೆತ ಹೆಣ ಮಾತ್ರ ಸಿಕ್ಕಿತು.

ಅಗಸ: (ಅಸ್ಫುಟ) ಅಯ್ಯೋ......

ಗೃಹಸ್ಥ: ಅವನ ಕತ್ತು ಮಾತ್ರ ಇನ್ನೂ ಗಟ್ಟಿಮುಟ್ಟಾಗಿದೆ. ಇನ್ನೊಬ್ಬ ಅಗಸ ನಡೆಗೆ......

(ನಗುತ್ತಾನೆ—ಗಹ ಗಹಸಿ ನಗುತ್ತಾನೆ.)

* * * *

ಅಗಸ: ಆ ನಗುವಿನೊಡನೆ ನಾನು ಋಷಿಗಳ ಆಶ್ರಮದಲ್ಲಿ ಕಲಿತ, ತಿಳುವಳಿಕೆ, ದೊರಕಿಸಿಕೊಂಡ ಶಾಂತಿ—ಎಲ್ಲ ಹಳೆಯ ಬಟ್ಟೆಗಳಂತೆ ಕಳಚಿಬಿದ್ದವು. ಅವುಗಳ ಸ್ಥಳದಲ್ಲಿ ಉಳಿದಿತ್ತು—ವೇದನೆ ಮಾತ್ರ. ಆ ನಗೆಯ ಗಹಗಹಿಕೆ ಯಲ್ಲಿ ನನಗೆ ಶ್ರೀರಾಮನ ವೇದನೆಯ ಅರ್ಥವಾಯಿತು. ಆದರೆ ಅದರೊಡನೆ ಬಿರುಗಾಳಿಯಲ್ಲಿ ಸಿಲುಕಿದಂತಾಗಿದೆ. ಅಯೋಧ್ಯೆ ಬಿಟ್ಟಾಗ ನನಗೆ ನನ್ನ ಜನತೆಯ ಮೇಲಿನ ದ್ವೇಷದ ಆಧಾರವಿತ್ತು. ಈಗ ನನ್ನಲ್ಲಿ ಉಳಿದಿತ್ತು ಆತ್ಮ ತಿರಸ್ಕಾರ. ಅದೇನು ಆಧಾರ ಕೊಡುತ್ತದೆ?.... ಈಗ ನನಗೂ ಹದಿನಾಲ್ಕು ವರುಷ ವನವಾಸವಾಗಿದೆ......

ಋಷಿ: ಇಲ್ಲಿ ಹೇಗೆ ಬಂದೆ, ತಮ್ಮ?

ಅಗಸ: ಮೊನ್ನೆ ಎಲ್ಲೋ ಒಬ್ಬ ಭಿಕ್ಷುಕ ಹೇಳಿದ. 'ಸೀತಾದೇವಿಯ ಶೋಧ ವಾಗಿದೆ. ಅವರು ತಮ್ಮ ಇಬ್ಬರು ಮಕ್ಕಳೊಡನೆ ವಾಲ್ಮೀಕಿ ಋಷಿಗಳ ಆಶ್ರಮದಲ್ಲಿದ್ದಾರೆ' ಎಂದು. ಆಗ ಒಮ್ಮೆಲೆ ಆಸೆ ಮೂಡಿತು. ಸೀತಾ ದೇವಿಯನ್ನು ಕಂಡು ಕ್ಷಮೆ ಕೋರಬೇಕು ಎಂದು ಓಡಿ ಬಂದೆ ಇಲ್ಲಿಗೆ. (ನಕ್ಕು) ಇಲ್ಲಿ ಬಂದರೆ ಅವರು ಅಯೋಧ್ಯೆ ಸೇರಿದ್ದಾರೆ ಎಂದಿರಿ ನೀವು. ಹೋಗಲಿ, ಚಿಂತೆಯಿಲ್ಲ. ರಾಮ ಸೀತೆ ಕೂಡಿದ್ದಾರೆ ಅದೇ ಆನಂದ... ನಮಸ್ಕಾರ, ಸ್ವಾಮಿ, ನಿಮಗೆ ಬೇಸರ ತರಿಸಿರಬೇಕು. ಬರುತ್ತೇನೆ ನಾನು. ಅಯೋಧ್ಯೆಗೆ ಹೋಗಬೇಕು. ಅಲ್ಲಿ ಸ್ವರ್ಣ ಸೀತೆ ಕರಗುವು ದನ್ನು ನೋಡಬೇಕು.

ಋಷಿ: ಬೇಡ ಪದ್ಮನಾಭ, ಅಯೋಧ್ಯೆಗೆ ಹೋಗಬೇಡ.

ಅಗಸ: (ಆಶ್ಚರ್ಯ) ಏಕೆ ಸ್ವಾಮಿ?

ಋಷಿ: (ಮೆಲ್ಲನೆ) ಸೀತೆ ಅಲ್ಲಿ ಇಲ್ಲ.

ಅಗಸ: (ಧ್ವನಿಯಲ್ಲಿ ನಡುಕ) ಎಲ್ಲಿದ್ದಾರವರು ಹಾಗಾದರೆ?

ಋಷಿ: ಅವಳು....ಅವಳು ಮಣ್ಣುಗೂಡಿದ್ದಾಳೆ.

ಅಗಸ: ಗುರುಗಳೇ ಇದೇನು ಅಬದ್ಧ?

ಋಷಿ: ಶ್ರೀರಾಮ ಸೀತೆಯನ್ನು ಕಂಡಾಗ, ಅವಳ ಕ್ಷಮೆ ಬೇಡಿದ. 'ತನ್ನ ತಪ್ಪಾಯಿತು. ಅಯೋಧ್ಯೆಗೆ ಬಾ' ಎಂದು ಕರೆದ. ಆದರೆ ಸೀತೆ ಹೋಗಲಿಲ್ಲ.

ಅಗಸ: ಏಕೆ?

ಋಷಿ: ಅವಳು ಕೇವಲ ಚೀರಿದಳು! 'ಭೂಮಿತಾಯಿ, ನೀನೇ ನನ್ನನ್ನು ಒಡಲಲ್ಲಿ ತೆಗೆದುಕೊಳ್ಳಬೇಕು' ಎಂದು ಪ್ರಾರ್ಥಿಸಿದಳು. ಅವಳ ಆಕ್ರಂದನಕ್ಕೆ ಕಿವಿಗೊಟ್ಟಂತೆ ಅವಳು ನಿಂತಲ್ಲೇ ಭೂಮಿ ಒಡೆಯಿತು. ಆ ಬಿರುಕಿನಲ್ಲಿ ಕಾಣೆಯಾದಳು ಸೀತೆ......

ಅಗಸ: (ಹುಚ್ಚು ಹಿಡಿದವನಂತೆ) ಏಕೆ? ಏಕೆ ಗುರುಗಳೇ?

(ಉತ್ತರವಿಲ್ಲ)

ಸೀತಾದೇವಿ ಹೀಗೇಕೆ ವಿನಾಶವನ್ನು ಕೋರಬೇಕು?

(ಉತ್ತರವಿಲ್ಲ)

ಅವರೇನಾದರೂ ಎಂದಿರಬೇಕಲ್ಲವೇ? ಅಯೋಧ್ಯೆಗೆ ಬರದಿರುವುದಕ್ಕೆ ಕಾರಣ ಕೊಟ್ಟಿರಬೇಕಲ್ಲವೇ?

(ಉತ್ತರವಿಲ್ಲ)

ಏಕೆ ಸುಮ್ಮನಿರುವಿರಿ? ಸ್ವಾಮಿ, ನೀವು ಸುಳ್ಳಾಡಬಾರದು ಸುಳ್ಳಾಡಲಾರಿರಿ. ನನಗೆ ನೀವು ಹೇಳಲೇ ಬೇಕು ಸೀತಾದೇವಿ ಏನೆಂದರೆಂದು.

ಋಷಿ: ಒಮ್ಮೆ ಒಬ್ಬ ನಿಷ್ಪಾಪಿಯನ್ನು ನಿಷ್ಕರುಣವಾಗಿ ಶಪಿಸಿದೆ. ನಾನು ಈಗಲಾದರೂ ಕರುಣೆ ತೋರಿಸಲು ಅಸ್ಪದಕೊಡು ಪದ್ಮನಾಭ.

ಅಗಸ: ನೀವು ನನಗೆ ಹೇಳಲೇ ಬೇಕು.

ಋಷಿ: ಶ್ರೀರಾಮನ ಮಾತು ಕೇಳಿ ಸೀತೆಯೆಂದಳು: 'ಇಲ್ಲ, ಆರ್ಯಪುತ್ರ, ನಾನು ಅಯೋಧ್ಯೆಗೆ ಬರುವುದಾದರೂ ಹೇಗೆ? ಯಾವ ಅಗಸನಿಂದಲೂ ತೊಳೆಯಲಾಗದ ಕಲಂಕಿಯಲ್ಲವೆ ನಾನು?'

ಅಗಸ: ದೇವರೇ! ದೇವರೇ!

ಋಷಿ: ನೊಂದುಕೊಳ್ಳಬೇಡ, ತಮ್ಮ. ಸೀತೆ ಅದನ್ನು ಕೋಪದಿಂದೆನ್ನಲಿಲ್ಲ.

ಅಗಸ: ಈಗ ನನಗೇನು ಗತಿ, ಗುರುಗಳೇ? ನನಗೆ ಬಿಡುಗಡೆಯೇ ಇಲ್ಲವೆ?

ಋಷಿ: ನಾನೇನು ಹೇಳುವುದು ನಿನಗೆ? ಬೇಕಾದರೆ ನನ್ನೊಡನೆ ಬಾ. ನನ್ನ ಆಶ್ರಮಕ್ಕೆ ಸಮೀಪದಲ್ಲಿದೆ.

ಅಗಸ: ನಿಮ್ಮ ಆಶ್ರಮ? ಅಂದರೆ ನೀವು—ನೀವು—

ಋಷಿ: ಹೌದು. ನಾನು ವಾಲ್ಮೀಕಿ.

ಅಗಸ: ವಾಲ್ಮೀಕಿ? ವಾಲ್ಮೀಕಿ ಮಹರ್ಷಿಗಳೇ?

ವಾಲ್ಮೀಕಿ: ಬರುತ್ತೀಯೇನು ನನ್ನ ಆಶ್ರಮಕ್ಕೆ! ದೊಡ್ಡ ಆಶ್ರಮವಲ್ಲ ಅದು. ನಾನು, ನನ್ನ ಒರಟು ಶಿಷ್ಯರು. ದಟ್ಟಡವಿಯ ನಡುವೆ ಮುರುಕು ಗುಡಿಸಲು. ಅಲ್ಲಿ ನಿನಗೆ ಶಾಂತತೆ ಸಿಗುತ್ತದೆ, ತಮ್ಮ. ಆದರೆ ಶಾಂತಿ ಸಿಕ್ಕೀತೆಂದು ಹೇಗೆ ಹೇಳಲಿ?

ಅಗಸ: ನೀವೇ ಹೀಗೆ ಎಂದರೇನು, ಗುರುಗಳೇ? ನನ್ನಂಥ ಪಾಪಿ ಏನು ಮಾಡಬೇಕು? ನೀವು ಮಹಾಕವಿಗಳು, ಸಿದ್ಧ ಪುರುಷರು—

ವಾಲ್ಮೀಕಿ: ಇಲ್ಲ. ಇಲ್ಲ. ನಾನು ಸಿದ್ಧ ಪುರುಷನಲ್ಲ, ನನ್ನ ಶೋಧವಿನ್ನೂ ಮುಗಿದಿಲ್ಲ. ಮರಣದ ಮುಂಗತ್ತಲೆಯಲ್ಲೂ ನಾನು ಹುಡುಕುತಿದ್ದೇನೆ.

ಅಗಸ: ನೀವು ನೀವೇನನ್ನು ಹುಡುಕುತಿದ್ದೀರಿ?

ವಾಲ್ಮೀಕಿ: ನೀನು ಹುಡುಕುತ್ತಿರುವುದನ್ನೇ ಪದ್ಮನಾಭ. ಹೋಳಾಗಿ ಬಿದ್ದ ಜೀವನವನ್ನು ಒಂದುಗೂಡಿಸುವ ಬಗೆಯನ್ನು.... ನಾನು ಕವಿ. ನಿಜ. ಆದರೆ ಆ ಕಾವ್ಯದ ಉಗಮವಾಯಿತು ಕಳವಳದಲ್ಲಿ. ಶಾಪದ ರೂಪದಲ್ಲಿ! ಬೇಡನೊಬ್ಬನ ಬಾಣಕ್ಕೆ ಕ್ರೌಂಚ ಪಕ್ಷಿಯೊಂದು ಸಾಯುತ್ತಿರುವಾಗ, ಅದರ ಜೋಡಿ ಹಕ್ಕಿಯ ವಿರಹದ ಆಕ್ರಂದನೆಗೆ ವಾಣಿ ಒಡೆಯಿತು ನನಗೆ. ಅದಕ್ಕೆಂದೇ ಆ ವಿಯೋಗವನ್ನು ಮರೆಯಲಿಕ್ಕೆ ನನ್ನ ಕಾವ್ಯ ಏಕ ಭಾವವನ್ನಿರಿಸಿಕೊಂಡು ಹೋಯಿತು. ಐಕ್ಯದ ಅರಿವಿಗಾಗಿ ದೇವರ ಅವತಾರವನ್ನೆಲ್ಲ ಬಿಟ್ಟು ಬೇರೆ ಊರಿಗೆ ಮೊರೆ ಹೋಗುವುದು? ಅದಕ್ಕೇ ರಾಮಾಯಣ ಬರೆದೆ. ಆದರೆ ಬರೆಯುತ್ತ ಹೋದಂತೆ ನನ್ನ ಶಬ್ದಗಳಲ್ಲಿ ಮೂಡಿದ್ದು ವಿರಹ ಮಾತ್ರ! ತಂದೆ ತಾಯಂದಿರಿಂದ ದೂರವಾಗಿ ಸತ್ತ ಶ್ರವಣ, ರಾಮನಿಂದ ದೂರವಿರಲಾಗದೆ ತೀರಿಕೊಂಡ ದಶರಥ, ಲಕ್ಷ್ಮಣನಿಂದ ದೂರವಾದ ಊರ್ಮಿಳೆ, ಭರತನನ್ನು ಕಳೆದುಕೊಂಡ ಕೈಕೇಯಿ, ಇವೆಲ್ಲರ ನಡುವೆ ರಾಮ—ಸೀತೆ—ಏಕಭಾವದ ಶೋಧವಾಗಿ ಜನಿಸಿದ ನನ್ನ ರಾಮಾಯಣ ವಿಯೋಗದ ಬಣ್ಣನೆಯಾಯಿತು. ವಿರಹ ಶಾಪದ ಬಣ್ಣನೆಯಾಯಿತು. ಆದರೂ ನಾನು ಆಸೆ ಬಿಡಲಿಲ್ಲ. ಒಂದಿಲ್ಲೊಂದು ದಿನ ರಾಮ ಮತ್ತು ಸೀತೆ ಒಂದಾಗಲೇ ಬೇಕು. ನನ್ನ ಕಾವ್ಯದಲ್ಲಿ ಸಂಯೋಗ ಮಾಡಲೇಬೇಕು ಎಂಬ ಆಸೆ ಇತ್ತು ನನಗೆ. ಕೊನೆಗೆ ರಾಮ ಸೀತೆ ಒಂದಾದರು. ಒಂದಾದರು—ಆದರೆ—

ಅಗಸ: ಆದರೆ ನಾನು ಬಂದೆ—ಹರಿತವಾದ ಮಾತುಗಳನ್ನೆಸೆದೆ—ಅವರ ಜೋಡಿಯನ್ನು ಒಡೆದೆ—

ವಾಲ್ಮೀಕಿ: ಆ ತಪ್ಪು ನಿನ್ನದಲ್ಲ. ಭರತನೆಂದದ್ದು ನಿಜ, ಈಗ ಹಿಂದಿರುಗಿ ನೋಡಿದಾಗ ರಾಮ-ಸೀತೆಯರ ಅಗಲಿಕೆ ಅನಿವಾರ್ಯವಿದ್ದಿತೆನ್ನಿಸುತ್ತದೆ.

ಇಂದಿನವರೆಗೂ ನನ್ನೆನ್ನು ಪೀಡಿಸುತ್ತ ಬಂದ ಕ್ರೌಂಚ ಪಕ್ಷಿಯ ಕೂಗು ಇಷ್ಟು ಸುಲಭವಾಗಿ ಮೂಕವಾಗುವದು ಅಶಕ್ಯವಾಗಿತ್ತು ಎನ್ನಿಸುತ್ತದೆ. . ಈಗ ಸೀತೆ ಮಣ್ಣಾಗಿದ್ದಾಳೆ. ರಾಮ ದಿಗ್ಭ್ರಾಂತನಾಗಿ ಕಲ್ಲಾಗಿದ್ದಾನೆ. ನನ್ನ ಬಳಿ ಉಳಿದಿದೆ—ನಾನು ಆ ನಿಷಾದನಿಗಿತ್ತ ಶಾಪ ಮಾತ್ರ. . ಶಾಪ ಮಾತ್ರ!

ಅಗಸ: (ಉತ್ತರದ ಅಪೇಕ್ಷೆಯಿಲ್ಲದವನಂತೆ) ಇನ್ನು ಮುಂದೇನು ಸ್ವಾಮಿ? ರಾಮಾಯಣ ಹೀಗೆಯೇ ಕೊನೆಗೊಳ್ಳಬೇಕೆ?

**ಪಾತ್ರಗಳು :**

ಯುವಕ

ಮುದುಕ

ಯುವತಿ

ಹುಡುಗ

ಗುಮಾಸ್ತ

ಸೇವಕ

# ತಪ್ಪಿಸಿಕೊಂಡಿದ್ದಾರೆ!

(ಒಂದು ವಸತಿ ಗೃಹದ ಮುಂಭಾಗ. ಕೌಂಟರಿನ ಹಿಂದೆ, ಮಧ್ಯ ವಯಸ್ಸಿನ ಗುಮಾಸ್ತ ಒಂದು ದೊಡ್ಡ ರಿಜಿಸ್ಟರಿನಲ್ಲಿ ಬರೆಯುತ್ತಾ ಕುಳಿತಿದ್ದಾನೆ. ಸಮಯ ರಾತ್ರಿ 9-10 ಗಂಟೆ. ಗುಮಾಸ್ತ ಪುಸ್ತಕ ಮುಚ್ಚಿ ಎರಡು ಕೈಗಳನ್ನೂ ಝಾಡಿಸಿ, ಮೈಮುರಿದು, ಆಕಳಿಸಿ, ಕೈ ಗಡಿಯಾರ ನೋಡಿಕೊಳ್ಳುತ್ತಾನೆ. ಟೇಬಲ್ ಡ್ರಾಯರ್‌ನಿಂದ ಒಂದು ಪತ್ತೇದಾರಿ ಕಾದಂಬರಿ ತೆಗೆದು, ಮಧ್ಯ ಗುರುತಿಟ್ಟ ಜಾಗದಿಂದ ಓದಲು ಪ್ರಾರಂಭಿಸುತ್ತಾನೆ. ಒಂದೆರಡು ಸಾಲು ಓದಿರಬಹುದಾದ ಸಮಯದಲ್ಲಿ ಹೋಟೆಲಿನ ಸಮವಸ್ತ್ರ ಧರಿಸಿದ ಸೇವಕ, ತಲೆಯ ಮೇಲೆ ಹೋಲ್ಡ್ ಆಲ್ ಮತ್ತು ಸೂಟ್ ಕೇಸ್ ಹೊತ್ತುಬಂದು ಗುಮಾಸ್ತನ ಮುಂದೆ ಇಳಿಸುತ್ತಾನೆ. ಗುಮಾಸ್ತ ಪುಸ್ತಕವನ್ನು ಒಂದು ಬದಿಗಿಟ್ಟು ಸೇವಕನನ್ನು ನೋಡುತ್ತಿದ್ದಂತೆ, ಯುವಕನೊಬ್ಬ ಬಂದು ಕೌಂಟರಿನ ಮುಂದೆ ನಿಂತು ಸಿಗರೇಟು ಹಚ್ಚುತ್ತಾನೆ.)

**ಸೇವಕ:** ರೂಮ್....

(ಗುಮಾಸ್ತ ರಿಜಿಸ್ಟರ್ ತೆಗೆದು ನೋಡುತ್ತಾನೆ).

**ಯುವಕ:** ಸಿಂಗಲ್ ರೂಮ್, ಬಾತ್ ಅಟಾಚ್ಡ್..

(ಗುಮಾಸ್ತ 'ಖಾಲಿ ಇಲ್ಲ' ಎನ್ನುವಂತೆ ತಲೆ ಅಲ್ಲಾಡಿಸುತ್ತಾನೆ).

**ಗುಮಾಸ್ತ:** ಸಿಂಗಲ್ ರೂಮು ಯಾವುದೂ ಖಾಲಿ ಇಲ್ಲ. ಒಂದೇ ಒಂದು ಡಬಲ್ ರೂಮು ಖಾಲಿ ಇದೆ. ಬೇಕಾದ್ರೆ, ಹನ್ನೆರಡು ರೂಪಾಯಿ ಒಂದಿವ್ಸಕ್ಕೆ.

**ಯುವಕ:** ಸರಿ, ಅದೇ ಇರಲಿ. ನಂಗೂ ಹೋಟ್ಲಿಂದ ಹೋಟ್ಲಿಗೆ ಅಲೆದೂ ಅಲೆದೂ ಸಾಕಾಗಿದೆ. ಎಲ್ಲೂ ರೂಮೇ ಖಾಲಿ ಇಲ್ಲ.

(ಗುಮಾಸ್ತ ರಿಜಿಸ್ಟರಿನಲ್ಲಿ ಬರೆಯಲು ಅಣಿ ಮಾಡಿಕೊಳ್ಳುತ್ತಾನೆ.)

**ಗುಮಾಸ್ತ:** ಹೆಸರು? ಅಡ್ರೆಸ್?

**ಯುವಕ:** ಜಿ. ಪಿ. ರಾವ್, ನಂಬರ್ 413, 13th Street, New Extension, ಗೊಂದಲ ಹಳ್ಳಿ.

**ಗುಮಾಸ್ತ:** (ಬರೆದುಕೊಳ್ಳುತ್ತಾ, ಸೇವಕನಿಗೆ ಒಂದು ಬೀಗದ ಕೈ ಕೊಡುತ್ತಿದ್ದಂತೆ) ರೂಮ್ ನಂ 33. ಊಟ ಕಳಿಸಬೇಕೇನ್ಸಾರ್ ರೂಮಿಗೆ?

**ಯುವಕ:** ಈಗ ಊಟ ಗೀಟ ಏನೂ ಬೇಡ. ಬೆಳಗ್ಗೆ ಕಾಫಿ ಕಳಿಸಿಕೊಡಿ.

**ಗುಮಾಸ್ತ:** ರೈಟ್

(ಗುಮಾಸ್ತ ರಿಜಿಸ್ಟರ್ ಮುಚ್ಚಿ ಪತ್ತೇದಾರಿ ಕಾದಂಬರಿ ತೆಗೆದುಕೊಂಡು ಓದಲು ಶುರು ಮಾಡುತ್ತಾನೆ. ತುಂಬಾ ಕುತೂಹಲಕಾರಿಯಾದ ಸನ್ನಿವೇಶವನ್ನು ಓದುತ್ತಿರುವವನಂತೆ ಬೆನ್ನು ನೆಟ್ಟಗೆ ಮಾಡಿಕೊಂಡು ಪುಸ್ತಕದಲ್ಲೇ ತಲ್ಲೀನನಾಗಿರುವಾಗ, ಸುಮಾರು ಐವತ್ತೈದು ವಯಸ್ಸಿನ ಒಬ್ಬ ಮುದುಕ ಒಂದು ತುಂಬಿದ ಕಿಟ್ ಹಿಡಿದು ಬಂದು ಕೌಂಟರಿನ ಮುಂದೆ ನಿಲ್ಲುತ್ತಾನೆ. ಗುಮಾಸ್ತ ತನ್ನ ಕಡೆಗೆ ನೋಡದಿರುವುದನ್ನು ಗಮನಿಸಿ ಒಂದು ಸಾರಿ ಕೆಮ್ಮುತ್ತಾನೆ. ಗುಮಾಸ್ತ 'ಸ್ವಲ್ಪ ತಡೆಯಿರಿ' ಎನ್ನುವಂತೆ ಬಂದವನತ್ತ ತನ್ನ ಹಸ್ತ ತೋರಿಸಿ ಪುಟ ಮಗುಚುತ್ತಾನೆ. ಮುದುಕ ಕಿಟ್ಟನ್ನು ಕೌಂಟರಿನ ಮೇಲಿಡುತ್ತಾನೆ.)

ಮುದುಕ: ರೂಮು ಇದೆಯಾ ?

(ಗುಮಾಸ್ತ ಪುಸ್ತಕದಲ್ಲೇ ಕಣ್ಣಿಟ್ಟು, ಮುದುಕನತ್ತ ಮತ್ತೊಮ್ಮೆ ಹಸ್ತ ತೋರಿಸುತ್ತಾನೆ.)

ಈ ಊರಲ್ಲಿ ಎಲ್ಲಾ ಹೋಟೆಲೂ ಅಲೆದಾಯ್ತು. ಎಲ್ಲೂ ಖಾಲಿ ಇಲ್ಲ. ನಿಮ್ಮಲ್ಲೂ ಇಲ್ಲದೇ ಇದ್ರೆ ಹೇಳ್ಬಿಡಿ, ನಿಮ್ಮ ಹೋಟಲ್ ಹೊರಗೆ ಫುಟ್‌ಪಾತ್‌ನಲ್ಲೇ ರಾತ್ರಿ ಕಳೀತೀನಿ.

(ಗುಮಾಸ್ತ ಪುಸ್ತಕದ ಹಾಳೆಯ ಮೂಲೆಯನ್ನು ಮಡಿಸಿ, ಮುಚ್ಚಿಟ್ಟು ಮುದುಕನನ್ನು ನೋಡುತ್ತಾನೆ.)

ಗುಮಾಸ್ತ: ರೂಮೇ ? ಇಲ್ಲಾ ಸಾರ್, ಇದ್ದೊಂದು ರೂಮ್ನ ಈಗ್ತಾನೇ ಒಬ್ರಿಗೆ ಕೊಟ್ಟಾಯ್ತು.

ಮುದುಕ: ಇನ್ನೇನು ಫುಟ್‌ಪಾತೇ ಗತಿ ನಂಗೆ.

ಗುಮಾಸ್ತ: ಸಾರಿ ಸಾರ್. ಒಂದು ಡಬ್ಬಲ್ ರೂಮ್ ಇತ್ತು. ಈಗ್ತಾನೇ ಒಬ್ರಿಗೆ ಕೊಟ್ಬಿಟ್ಟೆ. ಒಂದ್ಹತ್ನಿಮಿಷ ಮೊದಲೇ ಬಂದಿದ್ರೆ ನಿಮಗೆ ಸಿಗ್ತಿತ್ತು.

ಮುದುಕ: ಏನು, ಡಬ್ಬಲ್ ರೂಮ್ನ ಒಬ್ರಿಗೆ ಕೊಟ್ರಾ? ಹಾಗಾದ್ರೆ ಅದರಲ್ಲಿ ಇನ್ನೊಬ್ರಿಗೆ ಜಾಗ ಖಾಲಿ ಇರುತ್ತಲ್ಲಾ ಅದನ್ನ....

ಗುಮಾಸ್ತ: ನಂದೇನೂ ಅಭ್ಯಂತರವಿಲ್ಲ, ನೀವು ಅವರು ಒಪ್ಪಿಕೊಂಡು ಒಟ್ಟಿಗೆ ಇರೋದಾದ್ರೆ. ಒಟ್ನಲ್ಲಿ ನಾಲ್ಕು ರೂಪಾಯಿ ಜಾಸ್ತಿ ಕೊಡಬೇಕಾಗುತ್ತೆ.

ಮುದುಕ: ಅಷ್ಟೇ ತಾನೇ ? ಕೊಡೋಣ. ಸ್ವಲ್ಪ ಅವ್‌ರನ್ನ ಕೇಳ್ತೀರಾ ? ಹೇಗೂ ಒಬ್‌ರೇ ಇರ್ತಾರೆ. ನಾನೇನೂ ತೊಂದರೆ ಕೊಡೋಲ್ಲ.

ಗುಮಾಸ್ತ: ಹಾಗೇ ಆಗ್ಲಿ. ಅವರನ್ನ ಕೇಳಿಕೊಂಡು ಬರ್ತೀನೆ. ಒಂದ್ನಿಮಿಷ ಕೂತ್ಕೊಳ್ಳಿ.

(ಗುಮಾಸ್ತ ಒಳಗೆ ಹೋಗ್ತಾನೆ. ಮುದುಕ ಅಲ್ಲೇ ಇದ್ದ

ಕುರ್ಚಿಯ ಮೇಲೆ ಕೂತುಕೊಂಡು, ಗುಮಾಸ್ತ ಬಿಟ್ಟುಹೋಗಿದ್ದ ಪುಸ್ತಕದ ರಟ್ಟಿನ ಮೇಲಿದ್ದ ಚಿತ್ರವನ್ನು ನೋಡಿ, ಹಿಂಭಾಗದ blurb ನೋಡುತ್ತಿರುತ್ತಾನೆ. ಕ್ಷಣಕಾಲ ಮೌನ. ಗುಮಾಸ್ತ ಹಿಂದಿರುಗಿ ಬಂದು ಪುಸ್ತಕವನ್ನು ಮುದುಕನಿಂದ ವಾಪಸ್ ಪಡೆದು ಕೌಂಟರಿನ ಹಿಂದೆ ಹೋಗಿ ತನ್ನ ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತಾನೆ.)

ಗುಮಾಸ್ತ: ಅವರನ್ನ ಒಪ್ಪಿಸಿದ್ದೀನಿ ಸಾರ್, ಬಹಳ ಕಷ್ಟಪಟ್ಟು. ಅವರೂ ನಿಮ್ಮ ಹಾಗೇ ಊರೆಲ್ಲಾ ಸುತ್ತಾಡಿ ಸುಸ್ತಾಗಿ ಎಲ್ಲೂ ರೂಮು ಸಿಗದೆ ಕಡೇಗೆ ಇಲ್ಲಿಗೆ ಬಂದ್ರು. ಆದ್ರೂ ನಿಮ್ಮ ಕಷ್ಟಾನ ಅವರಿಗೆ ಅರ್ಥವಾಗೋ ಹಾಗೆ ಹೇಳೋದೆ ಸಾಕು ಸಾಕಾಯ್ತು. ಅಂತೂ ಒಪ್ಪಿದಾರೆ.

ಮುದುಕ: Thanks. ರಿಜಿಸ್ಟರ್‌ನಲ್ಲಿ ಬರ್‍ಯೋದನ್ನೆಲ್ಲಾ ಬೆಳಗ್ಗೆ ಮಾಡೋಣ. ನಂಗೀಗ ತುಂಬಾ ಸುಸ್ತಾಗಿದೆ. ಕಾಲು ಚಾಚಿ ಅಡ್ಡಾದ್ರೆ ಸಾಕು ಅನ್ನಿಸ್ತಿದೆ.

ಗುಮಾಸ್ತ: ಒಂದ್ ನಿಮಿಷ, ಸಾರ್..ಜಾಸ್ತಿ ತೊಂದ್ರೆ ಕೊಡೋಲ್ಲ. ಸ್ವಲ್ಪ ಅಡ್ರೆಸ್ ಹೇಳ್ಬಿಡಿ, ಬರ್‍ಕೊಂಡ್‌ಬಿಡ್ತೀನಿ.

ಮುದುಕ: ಸರಿ, ಬರ್‍ಕೊಳಿ. ಎಸ್. ಕೆ. ಗೋವಿಂದಪ್ಪ, President, Fancy Foot ball Association, ಕಾಡೂರು ಪೋಸ್ಟ್, ಕಾಡೂರು.

ಗುಮಾಸ್ತ: (ಉದ್ವೇಗ) ಓಹ್! ನೀವೇನಾ ಸಾರ್, ಗೋವಿಂದಪ್ನೋರು! State Player. ನಿಮ್ಮಾಟ ನೋಡಿದೀನಿ ಸಾರ್ 42-43 ರಲ್ಲಿ! ಸೆಂಟರ್ ಫಾರ್‌ವರ್ಡ್! Foot ball ಅಂದ್ರೆ ನಂಗೆ ಪ್ರಾಣ. ಈ ಊರಲ್ಲಿ ನಡೆದ ನಿಮ್ಮ ಯಾವ ಮ್ಯಾಚ್‌ನೂ ತಪ್ಪಿಸಿಕೊಂಡಿಲ್ಲ.

ಮುದುಕ: ಹುಂ! ಸರಿ, ನಂಗೀಗ ತುಂಬಾ ಸುಸ್ತಾಗಿದೆ. ರೂಮು ತೋರಿಸಿದ್ರೆ ......

ಗುಮಾಸ್ತ: (ಉತ್ಸಾಹದಿಂದ) ಲೋ ಇವನೇ, ಬಾ ಇಲ್ಲಿ, ರೂಮ್ ನಂಬರ್ 33. ಊಟ ಬೇಕಿದ್ರೆ ಹೇಳಿ ಸಾರ್, ರೂಮ್ ಬಾಯ್ ತಂದ್ಕೊಡ್ತಾನೆ.

ಮುದುಕ: ಈಗೇನೂ ಬೇಕಿಲ್ಲ. ಸದ್ಯ ರೂಮು ಸಿಕ್ತಲ್ಲಾ, ಅಷ್ಟೆ ಸಾಕು! (ಸೇವಕ ಬಂದು ಮುದುಕನ ಕಿಟ್ ಬ್ಯಾಗ್ ತೆಗೆದುಕೊಂಡು ಹೋಗುತ್ತಾನೆ. ಮುದುಕ ಅವನನ್ನು ಹಿಂಬಾಲಿಸುತ್ತಾನೆ. ಗುಮಾಸ್ತ ರಿಜಿಸ್ಟರ್‌ನಲ್ಲಿ ಬರೆದುಕೊಳ್ಳುತ್ತಾನೆ.)

ಗುಮಾಸ್ತ: ಈಗೆಲ್ಲಿ ಬರಬೇಕು, ಅಂಥಾ Foot ball player! ಹುಂ! (ಗುಮಾಸ್ತ ಯಥಾಪ್ರಕಾರ ಪತ್ತೇದಾರಿ ಪುಸ್ತಕ ತೆಗೆದುಕೊಂಡು ಓದಲು ಶುರು ಮಾಡುತ್ತಾನೆ.)

(ರೂಮ್ ನಂಬರ್ 33. ಎದುರು ಬದುರಾಗಿ ಎರಡು ಮಂಚಗಳು, ಎಡ ಬಲಗಳಲ್ಲಿ ಪ್ರೇಕ್ಷಕರ ಎದುರಾಗಿರುವ ಗೋಡೆಯ ಬದಿಯಲ್ಲಿ ಒಂದು dressing table, ಎರಡು ಕುರ್ಚಿಗಳು. ಟೇಬಲ್ ಮೇಲೆ, ಕುಡಿಯುವ ನೀರಿನ ಪಾತ್ರೆ, ಗ್ಲಾಸುಗಳು.

ಯುವಕ ಪೈಜಾಮ ಜುಬ್ಬ ಧರಿಸಿ, ಪೇಪರ್ ಓದುತ್ತಾ ಬಲ ಬದಿಯ ಮಂಚದ ಮೇಲೆ ಕುಳಿತಿದ್ದಾನೆ. ಮುದುಕ ಸೇವಕನ ಹಿಂದೆ ರೂಮೊಳಗೆ ಬರುತ್ತಾನೆ. ಸೇವಕ ಎಡಬದಿಯ ಮಂಚದ ಮೇಲೆ ಕಿಟ್ ಇಟ್ಟು ಹೋಗುತ್ತಾನೆ.)

ಮುದುಕ: ಕ್ಷಮಿಸಿ, ತಮಗೆ ತೊಂದರೆ ಕೊಡಬೇಕಾಯ್ತು...ಬೇರೆಲ್ಲೂ ರೂಮ್ ಸಿಕ್ಕಲಿಲ್ಲ. ಅಂದ್ಹಾಗೇ, ತಮಗೂ ರೂಮು ಸಿಕ್ಕೋದು ಬಹಳ ಕಷ್ಟ ಆಗಿರಬೇಕು...ಬಹಳ ಉಪಕಾರ ಆಯ್ತು ತಾವು accomodate ಮಾಡಿದ್ದು...

(ಯುವಕ ಪೇಪರ್ ಮಡಿಸಿ ಪಕ್ಕದಲ್ಲಿಟ್ಟು ಮುದುಕನನ್ನು ನೋಡುತ್ತಾ.)

ಯುವಕ: ಹುಂ...ಪರವಾಗಿಲ್ಲ. ಒಂದು ರಾತ್ರಿ ಮಟ್ಟಿಗೆ ತಾನೆ...ಹೇಗೋ manage ಮಾಡಬಹುದು.

(ಮುದುಕ ಕಿಟ್‌ನಿಂದ ಬಟ್ಟೆಗಳನ್ನು ತೆಗೆಯುತ್ತಿರುವಾಗ, ಬಟ್ಟೆಗಳ ಜತೆ ಒಂದು ಫುಟ್‌ಬಾಲ್ ಕವರ್ ಹೊರಗೆ ಬೀಳುತ್ತದೆ. ಅದನ್ನು ಕಿಟ್ಟಿನೊಳಕ್ಕೆ ತುರುಕಿ, ಒಂದು ಟವಲನ್ನು ಹೆಗಲಮೇಲೆ ಹಾಕಿಕೊಂಡು ಬಚ್ಚಲು ಮನೆಯ ಕಡೆ ಹೋಗುತ್ತಾನೆ.)

ಮುದುಕ: ಅಂತೂ ತಮಗೆ ತೊಂದರೆ ಕೊಡಬೇಕಾಯ್ತು. ನೀವು ಆಗುಲ್ಲ ಅಂದಿದ್ರೆ ನಾನು ಹೊರಗೆ ಫುಟ್‌ಪಾತ್ ಮೇಲೆ ರಾತ್ರಿ ಕಳೀಬೇಕಿತ್ತು.

(ಯುವಕ ಪೇಪರ್ ಓದುತ್ತಾ ಕುಳಿತಾಗ ಬಚ್ಚಲು ಮನೆಯಲ್ಲಿ ನೀರು ಹರಿಯುವ ಶಬ್ದ. ಕ್ಷಣಕಾಲ ಮೌನದ ನಂತರ ಮುದುಕ ಬಚ್ಚಲು ಮನೆಯಿಂದ ಹಿಂದಿರುಗುತ್ತಾನೆ.)

ಯುವಕ: ನಾನೂ ಈ ಊರಲ್ಲಿರೋ ಹೋಟ್ಲಲ್ಲೆಲ್ಲಾ ವಿಚಾರಿಸಿದೆ. ಎಲ್ಲೂ ರೂಂ ಖಾಲಿ ಇಲ್ಲ. ಸದ್ಯಕ್ಕೆ ಈ ಹೋಟ್ಲಲ್ಲಿ ಸಿಕ್ತು. ಇಲ್ದೇ ಇದ್ರೆ ನನಗೂ ಫುಟ್ ಪಾತೇ ಗತಿಯಾಗ್ತಿತ್ತೇನೊ!

(ಮುದುಕ ತನ್ನ ಮಂಚದ ಮೇಲೆ ಕುಳಿತುಕೊಳ್ಳುತ್ತಾನೆ. ಯುವಕ ಪೇಪರ್ ಓದನ್ನು ಮುಂದುವರಿಸುತ್ತಾನೆ.)

ಮುದುಕ: ಆಯ್ತೇ, ಪೇಪರ್ ಓದಿ? ನಿದ್ದೆ ಬರ್‍ತಾ ಇದೆ. ಲೈಟ್ ಆರಿಸಬಹುದಾಗಿತ್ತು. (ಯುವಕ ಅಸಹನೆಯಿಂದ ಮುದುಕನತ್ತ ನೋಡುತ್ತಾನೆ.)

ಯುವಕ : ಅದಕ್ಕೇ ನಂಗಿದೆಲ್ಲಾ ಇಷ್ಟವಿಲ್ಲ. ನನ್ನ ಪಾಡಿಗೆ ನಾನು ನನಗೆ ಬೇಕಾದಾಗ ಲೈಟ್ ಆರಿಸಿಕೊಂಡು ನಿದ್ದೆ ಮಾಡ್ತಿದ್ದೆ.

ಮುದುಕ: ಸಿಟ್ಟು ಮಾಡ್ಕೋಬೇಡಿ. ನಾನು ಮುದುಕ. ಏನೋ ಆಯಾಸವಾಗಿದೆ. ಬೆಳಕಿದ್ರೆ ನಿದ್ರೆ ಬರೋಲ್ಲ. ನಿದ್ರೆ ಬರದೆ ಆಯಾಸ ಕಳೆಯೋಲ್ಲ. ಅದಕ್ಕೇ ಕೇಳ್ದೆ, ಪೇಪರ್ ಓದಾಗಿದ್ರೆ....

ಯುವಕ : ಇಲ್ಲ. ಓದಾಗಿಲ್ಲ ಇನ್ನೂ ತುಂಬಾ ಇದೆ. ತಮಗೆ ಇಷ್ಟ ಇಲ್ದೇ ಇದ್ರೆ ತಾವು ಬೇರೆ ಎಲ್ಲಾದ್ರೂ....

ಮುದುಕ: ಛೇ, ಪರವಾಗಿಲ್ಲ. ಇನ್ನೊಂದ್ಹತ್ತು ನಿಮಿಷ, ಕಾಲು ಗಂಟೆ ನಾನೂ ಎಚ್ಚರವಾಗಿದ್ರೆ ನಷ್ಟವೇನಿಲ್ಲ. ಓದಿ, ಓದಿ...ಹಾಂ...ಹಾಗೇ ಓದ್ತಾ ಓದ್ತಾ ಮಲಗಿ ನಿದ್ರೆ ಮಾತ್ರ ಮಾಡಬೇಡಿ...ಲೈಟ್ ಆಫ್ ಮಾಡಿ....
(ಮುದುಕ ಮಂಚದ ಮೇಲೆ ಮಲಗುತ್ತಾನೆ.)

ಯುವಕ : ಹೌದು, ನಂಗೊತ್ತು. ದಯವಿಟ್ಟು ತಾವು....

ಮುದುಕ: ಸುಮ್ನೆ ಇರ್ತೀನಿ. ತಮಗೆ ಜಾಸ್ತಿ ತೊಂದ್ರೆ ಕೊಡೋಲ್ಲ...ಈಗಾಗ್ಲೇ...

ಯುವಕ : ಸಾಕಷ್ಟು ಕೊಟ್ಟಾಗಿದೆ.

ಮುದುಕ: (ಎದ್ದು ಕುಳಿತುಕೊಳ್ಳುತ್ತಾ) ಕ್ಷಮಿಸಿ, ತಮಗೆ ಇಷ್ಟವಿಲ್ಲದಿದ್ರೆ ನಾನು ಹೊರಟುಹೋಗ್ತೀನಿ. ಫುಟ್‌ಪಾತ್ ಖಾಲಿ ಇದೆ.

ಯುವಕ : ಏನು ಗೋಳಪ್ಪಾ ಇದು. ಸುಮ್ನಿರಿ ಅಂದ್ರೆ ಅದೂ ಕೇಳೋಲ್ಲ.

ಮುದುಕ: ತಮಗೆ ತೊಂದ್ರೆ ಕೊಟ್ಟು ನನಗೇನೋ ಸಂತೋಷ ಸಿಗೋಲ್ಲ..ಬೆಳಗ್ಗೆ ಎದ್ದು ಬೀದಿ ಬೀದಿ ಅಲೀಬೇಕು. ಅದಕ್ಕೇ ಈಗ ಸ್ವಲ್ಪ ರೆಸ್ಟ್ ಸಿಕ್ಕಿದ್ರೆ ಒಳ್ಳೇದು ಅನ್ನಿಸ್ತು..ಯಾಕೋ ತಮಗೆ ನಾನು ಇಲ್ಲಿರೋದು ಬೇಡ ಅನ್ನಿಸ್ತಿರೋದ್ರಿಂದ ನಾನು ಹೊರಟೆ.
(ಮುದುಕ ತನ್ನ ಕಿಟ್‌ಗೆ ಬಟ್ಟೆಗಳನ್ನು ತುರುಕಿಕೊಂಡು ಏಳುತ್ತಾನೆ.)

ಯುವಕ : ರೀ, ಸ್ವಾಮಿ..ನಾನೇನೂ ನಿಮ್ಮನ್ನ ಹೋಗಿ ಅಂತ ಹೇಳಲಿಲ್ಲ. ತಮಗೆ ಇಷ್ಟ ಇಲ್ದೇ ಇದ್ರೆ ಹೋಗಬಹುದು, ಅಷ್ಟೇ....
(ಮುದುಕ ಕಿಟ್ಟನ್ನು ಕೆಳಗಿಡುತ್ತಾನೆ.)

ಮುದುಕ: ಏನೂ ತಪ್ಪು ತಿಳಿದುಕೊಳ್ಬೇಡಿ. ರಾತ್ರಿ ಇರೋಕೆ ಜಾಗ ಕೊಟ್ಟು ತುಂಬಾ ಉಪಕಾರ ಮಾಡಿದೀರಿ. ನಾನಿನ್ನು ತಮಗೆ ತೊಂದ್ರೆ ಕೊಡೋಲ್ಲ. ಯಾವಾಗ ಬೇಕಾದ್ರೂ ದೀಪ ಆರಿಸಿ..ಬೆಳಗ್ಗೆ ಎದ್ದು ಬೀದಿ ಬೀದಿ ಅಲೆಯೋದಿದೆ, ನನಗೆ.

(ಮುದುಕ ಮಲಗುವನು. ಯುವಕನಿಗೆ ಮುದುಕನ ಕಡೆಯ ಮಾತು ಕುತೂಹಲಕರವೆನಿಸಿ, ಪೇಪರನ್ನು ಮಡಿಸಿ ಟೇಬಲ್ಲಿನ ಮೇಲಿಟ್ಟು ಅವನೆಡೆಗೆ ನೋಡುತ್ತಾನೆ.)

ಯುವಕ : ಹೌದೇ? ಉದ್ದೇಶ ಏನೂಂತ ಕೇಳಬಹುದೆ? ಯಾಕೇಂದ್ರೆ ನನಗೂ ನಾಳೆ ಅದೇ ಕೆಲ್ಸ....

ಮುದುಕ : ಯಾರನ್ನೋ ಹುಡುಕಬೇಕಾಗಿದೆ. ತಾವು ಏನಾದ್ರೂ ಬಿಸಿನೆಸ್...

ಯುವಕ : ಬಿಸಿನೆಸ್ ಇಲ್ಲ. ನಿಜ ಹೇಳಬೇಕೂಂದ್ರೆ, ನಾನು ಯಾರನ್ನೋ ಹುಡುಕೋ ಕೆಲ್ಸಕ್ಕೇ ಈ ಊರಿಗೆ ಬಂದಿರೋದು....

ಮುದುಕ : ಆಶ್ಚರ್ಯ!

(ಮುದುಕ ಎದ್ದು ಕುಳಿತುಕೊಳ್ಳುತ್ತಾನೆ.)

ಯುವಕ : ಅಡ್ರೆಸ್ ಇದ್ರೆ ಹುಡುಕೋದೇನೂ ಕಷ್ಟವಾಗೊಲ್ಲ.

ಮುದುಕ : ಅದೇ ಕಷ್ಟವಾಗಿರೋದು ನೋಡಿ, ಅಡ್ರೆಸ್ ಇಲ್ಲ.

ಯುವಕ : ಆಶ್ಚರ್ಯ! ನನ್ನ ಹತ್ರಾನೂ ಅಡ್ರೆಸ್ ಇಲ್ಲ.

ಮುದುಕ : ತಾವೇನೂ ತಪ್ಪು ತಿಳಿದುಕೊಳ್ಳದಿದ್ರೆ, ಯಾರನ್ನ ಹುಡುಕ್ತಿದೀರಾ ಅಂತ ಕೇಳಬಹುದೇ?

ಯುವಕ : ಓಹೋ..ನಾನೂ ತಮ್ಮನ್ನ ಅದನ್ನೇ ಕೇಳೋಣಾಂತಿದ್ದೆ.

ಮುದುಕ : ಬಹುಶಃ ನಾವು ಒಬ್ಬರಿಗೊಬ್ಬರು ಸಹಾಯ ಆಗಬಹುದು.

ಯುವಕ : ತಾವು ಹುಡುಕ್ತಿರೋ ವ್ಯಕ್ತಿ ನನಗೆ ಕಾಣಿಸಬಹುದು....

ಮುದುಕ : ತಾವು ಹುಡುಕ್ತಿರೋ ವ್ಯಕ್ತಿ ನನಗೆ ಕಾಣಿಸಬಹುದು....

ಯುವಕ : ಆಶ್ಚರ್ಯ! ನಾವಿಬ್ಬರೂ ಒಂದೇ ಪರಿಸ್ಥಿತೀಲಿ ಹೇಗೆ ಸಿಕ್ಕಿ ಬಿದ್ದಿದೀವಿ!

ಮುದುಕ : ನಂಗೂ ಹಾಗೇ ಅನ್ನಿಸ್ತು....

(ತಮ್ಮಷ್ಟಕ್ಕೆ ತಾವೇ ಮಾತಾಡಿಕೊಳ್ಳುವಂತೆ ಇಬ್ಬರೂ ಮಾತನಾಡಲು ಆರಂಭ ಮಾಡುತ್ತಾರೆ.)

ಯುವಕ : ಹುಂ! ನೋಡಿ ನನ್ನ ಕತೆ ಇಷ್ಟು. ನಾನು ಒಬ್ಬಳು ಹುಡುಗೀನ ಹುಡುಕ್ತಾ ಇದೀನಿ.

ಮುದುಕ : ನಾನು ಒಂದು ಮಗೂನ ಹುಡುಕ್ತಾ ಇದೀನಿ.

ಯುವಕ : ವಯಸ್ಸು 20. ನೋಡೋಕೆ ತುಂಬಾ ಚೆನ್ನಾಗಿದಾಳೆ.

ಮುದುಗ : ನಮ್ಮ ಮುರಳೀ ವಯಸ್ಸು 8. ತುಂಬಾ ಮುದ್ದಾಗಿದಾನೆ.

ಯುವಕ : ಆರು ತಿಂಗಳ ಹಿಂದೆ ನಾವಿಬ್ರೂ ರೈಲಿನಲ್ಲಿ ಪ್ರಯಾಣ ಮಾಡ್ತಿದ್ದಾಗ ಮಧ್ಯೆ ಒಂದು ಸ್ಟೇಷನ್‌ನಲ್ಲಿ ಕಾಫಿ ತಿಂಡಿ ತರೋಕೆ ಅಂತ ನಾನು ಇಳಿದು ಹೋಗಿದ್ದೆ. ಕ್ಯಾಂಟೀನ್‌ನಲ್ಲಿ ತುಂಬಾ ರಷ್ ಇತ್ತು. ಕಾಫಿ ತಿಂಡಿ ಸಿಗೋದು ತಡ ಆಯ್ತು. ಅಷ್ಟರಲ್ಲೇ ರೈಲು ಹೊರಟೋಯ್ತು.

ಮುದುಕ: ಮುಡುಕುತೊರೆ ಜಾತ್ರೇಲಿ ಕಳೆದುಹೋದ ಹುಡುಗ. ಪೇಪರ್‌ನಲ್ಲಿ ಫೋಟೋ ಕೂಡ ಹಾಕ್ಸಿದ್ದೆ. ಪಾಪ! ಏನೂ ಅರೀದ ಕೂಸು.. ಎಲ್ಲಿದ್ಯೋ, ಏನು ಕಷ್ಟ ಪಡ್ತಿದ್ಯೋ, ಎಲ್ಲಾ ಪೋಲೀಸ್ ಸ್ಟೇಷನ್‌ಗೂ ತಿಳಿಸಿ ಆಯ್ತು.

ಯುವಕ : ನಾನೂ ಓಡೋಡಿ ಬಂದೆ..ಆದ್ರೆ ರೈಲು ಹೊರಟೇ ಹೋಯ್ತು... ಮುಂದಿನ ರೈಲಿನಲ್ಲಿ ಹೋಗಿ ಪ್ರತಿ ಸ್ಟೇಷನ್‌ನಲ್ಲೂ ವಿಚಾರಿಸಿದೆ.. ಯಾರ ಕೈಗೆ ಸಿಕ್ಕಿ ಹಾಕಿಕೊಂಡ್ಳೊ..ನಾನೂ ಪೇಪರ್‌ನಲ್ಲಿ ಹಾಕ್ಸಿದ್ದೆ.

ಮುದುಕ: ಸಿಕ್ಕಿದೋರ ಕೈಲೆಲ್ಲಾ ಹೇಳ್ತಿದೀನಿ, ಯಾರಿಗೂ ಸಿಕ್ಕಿಲ್ಲ ಮಗು..

ಯುವಕ : ಅವಳಿಲ್ಲದ ನನಗೆ ಬದುಕೇ ವ್ಯರ್ಥ ಅನ್ನಿಸಿ, ಕಡೇಗೆ ನಾನೇ ಹುಡುಕೋಕೆ ಶುರು ಮಾಡಿದೆ. ಒಂದೊಂದು ಊರಿಗೂ ಹೋಗೋದು ಬೀದಿ ಬೀದಿ ಅಲೆಯೋದು, ಎಲ್ಲಾದ್ರೂ ಕಾಣ್ತಾಳೇನೋ ಅಂತ ಹುಡುಕ್ತಾ ಇರೋದು....

ಮುದುಕ: ನಾನು ಇದುವರೆಗೆ ಏನಿಲ್ಲಾಂದ್ರೂ 30-40 ಊರು ಸುತ್ತಿದೀನಿ....

ಯುವಕ : 60-70 ಆಗಿರಬಹುದು ನಾನು ನೋಡಿರೋ ಊರುಗಳ ಸಂಖ್ಯೆ.

ಮುದುಕ: ನಾನು ಬೆಳಗ್ಗೆ ಎದ್ದು ಈ ಊರಲ್ಲಿ ಹುಡುಕಾಟ ಶುರು ಮಾಡಬೇಕು... ನನ್ನ ಜೀವ ಇರೋ ವರೆಗೂ ಹುಡುಕೋದನ್ನ ಬಿಡೋದಿಲ್ಲ.

ಯುವಕ : ಜೀವ ಹೋಗೋಕೆ ಮುಂಚೆ ನಾನು ಅವಳನ್ನ ಹುಡುಕಲೇ ಬೇಕು.

ಮುದುಕ: ಯಾವತ್ತಾದ್ರೂ ಒಂದಿವ್ಸ ಸಿಕ್ಕೇ ಸಿಕ್ತಾನೆ ಅಂತ ನನಗೆ ಆಸೆ ಇದೆ... ಎಲ್ಲಾ ಜಾತ್ರೆಗಳಿಗೂ ಹೋಗ್ತಿದೀನಿ, ಎಲ್ಲಾ ಸಂತೆಗಳಲ್ಲೂ ಹುಡುಕ್ತಿ ದೀನಿ....ಎಲ್ಲಾ ಊರನ್ನು ಒಂದೊಂದು ಸಲ ನೋಡಿಬಿಡೋಣ ಅಂತ ಮನಸ್ಸು....ಛೇ, ಆ ಮುಗ್ಧತೆ, ಆ ಸರಳತೆ.. ಅವನು ನಗ್ತಾ ಇದ್ರೆ ಪ್ರಪಂಚದ ಎಲ್ಲಾ ಕಷ್ಟಾನೂ ಮರೆತುಹೋಗುತ್ತೆ..

ಯುವಕ : ನನಗಿರೋದು ಒಂದೇ ಗುರಿ: ಅವಳನ್ನು ಪತ್ತೆ ಮಾಡಬೇಕು.... ಆಗಲೇ ನನ್ನ ಜೀವನ ಸಾರ್ಥಕ....ಅವಳು ಸಿಗೋವರೆಗೂ ನನ್ನ ಜೀವನದಲ್ಲಿ ಕತ್ತಲೆ ತುಂಬಿಕೊಂಡಿರುತ್ತೆ.

ಮುದುಕ: ನನ್ನ ಕನಸು ಮನಸ್ಸಿನಲ್ಲೆಲ್ಲಾ ಅವನೇ, ನನ್ನ ಮುರಳಿ....

ಯುವಕ: ಅವಳು ಹೋದಾಗ ಒಂದು ವಾರ ನಾನು ಬದುಕಿರೋದೇ ವ್ಯರ್ಥ ಅನ್ನಿಸಿ ಆತ್ಮಹತ್ಯೆಗೆ ಪ್ರಯತ್ನಿಸಿದ್ದೆ....

ಮುದುಕ: ಮುರಳೀ, ಮುರಳೀ..

ಯುವಕ: ಇಲ್ಲಾ, ಇದು ತಪ್ಪು, ಅವಳನ್ನು ಹುಡುಕಿ ಕಳೆದುಹೋದ ಬೆಳಕನ್ನು ಸಂಪಾದಿಸಬೇಕು ಅಂತ ಆಮೇಲೆ ಗಟ್ಟಿ ಮನಸ್ಸು ಮಾಡಿ ಇಡೀ ಜೀವಮಾನಾನ ಅವಳಿಗೋಸ್ಕರ ಮೀಸಲಾಗಿಟ್ಟೆ....

ಮುದುಕ: ಶಾಸ್ತ್ರ ಕೇಳಿದಾಗ, ಒಂದು ವೇಳೆ ಅವನು ಸಿಕ್ಕಿದರೂ ದಕ್ಕಲಾರ ಅಂತ ಬಂತು..

ಯುವಕ: ನನಗೆ ಅದ್ರಲ್ಲೆಲ್ಲಾ ನಂಬಿಕೆ ಇಲ್ಲಾ..

ಮುದುಕ: ಕಡೇ ಪಕ್ಷ ಅವನನ್ನ ಒಂದು ಬಾರಿ ಕಣ್ಣಲ್ಲಾದ್ರೂ ನೋಡದೆ ಸತ್ರೆ ನನ್ನ ಆತ್ಮಕ್ಕೆ ಶಾಂತಿ ಸಿಕ್ಕೋಲ್ಲ ಅಂತ ಹುಡುಕೋಕೆ ಶುರು ಮಾಡಿದೀನಿ....

ಯುವಕ: ಅವಳೇನಾದ್ರೂ ಒಂದು ಸಲ ಸಿಕ್ಲಿ; ಖಂಡಿತಾ ಇನ್ನೊಂದ್ಸಲ ಅವಳನ್ನ ಕಳೆದುಕೊಳ್ಳೋಷ್ಟು ಮೂರ್ಖನಲ್ಲ, ನಾನು...ರಶ್ಮಿ, ನನ್ನ ರಶ್ಮೀ...

ಮುದುಕ: ಭಾಗವತದ ಕೃಷ್ಣ ಇದ್ದ ಹಾಗೆ ನಮ್ಮ ಮುರಳಿ...

ಯುವಕ: ಯಾವುದಿದ್ರೆ ಮತ್ತೇನೂ ಬೇಕಾಗೂದಿಲ್ವೋ ಅದೇ ನನ್ನ ರಶ್ಮಿ..

ಮುದುಕ: ಬೇರೆ ಎಷ್ಟೋ ಜನ ಹುಡುಗರನ್ನ ನೋಡಿದೀನಿ, ಆದ್ರೆ ನಮ್ಮ ಮುರಳೀ ಥರ ಇರೋ ಇನ್ನೊಬ್ಬ ಹುಡುಗ ಸಿಗಲಾರ....ಸಿಕ್ಕಿದ್ರೆ ಬಹುಶಃ ಅವನನ್ನೇ ದತ್ತು ತೊಗೋತಿದ್ನೋ ಏನೋ....

ಯುವಕ: ರಶ್ಮಿಗೆ Substitute ಹುಡುಕೋದು ಕನಸಿನಲ್ಲೂ ಸಾಧ್ಯವಿಲ್ಲ (ಇಬ್ಬರೂ ಪರಸ್ಪರ ನೋಡುತ್ತಾರೆ.)

ಮುದುಕ: ನಿಮಗೆ ಮದುವೆ ಆಗಿದೆಯೇ?

ಯುವಕ: ಮದುವೆ? ರಶ್ಮಿ ಇಲ್ಲದೆ ಇರೋವಾಗ ಆಗಿದೆ ಅಂತ ಹೇಗೆ ಹೇಳೋದು?

ಮುದುಕ: ಹುಂ!..ಒಂದು ಕೆಲ್ಸ ಮಾಡೋಣ. ಈ ಊರನ್ನ ನಾವಿಬ್ರೂ ಹಂಚಿಕೊಂಡು ಹುಡ್ಕೋಣ. ನಿಮ್ಮ ಹುಡುಗೀ ಚಹರೆ ಸ್ವಲ್ಪ ಹೇಳಿ....

ಯುವಕ: (ಸ್ವಲ್ಪ ಯೋಚಿಸಿ) ಸರಿ. ಹಾಗೆ ಮಾಡೋಣ..ಸುಮಾರು ಐದೂವರೆ ಅಡಿ ಎತ್ತರ....ದುಂಡು ಮುಖ..(ಕಣ್ಣು ಮುಚ್ಚಿಕೊಂಡು) ಹೊಳೆಯುವ ಕಣ್ಣುಗಳು....ಅಗಲವಾದ ಹಣೆ..ಉದ್ದನೆ ಜಡೆ.. ರಶ್ಮೀ....

(ಮುದುಕ ತನ್ನ ಡೈರಿಯಲ್ಲಿ, ಮೇಲೆ ಹೇಳಿದುದನ್ನೆಲ್ಲ ಬರೆದುಕೊಳ್ಳು ತ್ತಾನೆ.)

ಮುದುಕ: ನಮ್ಮ ಮುರಳಿ ಸುಮಾರು ಮೂರುವರೆ ಅಡಿ ಇದ್ದಾನೆ..ಅವನ ಮುಖದ ಮೇಲಾಗಲಿ ಮೈಮೇಲಾಗಲಿ ಎಂಥದೂ ಕಲೆ ಇಲ್ಲ..ಬಹಳ ಶುಭ್ರ.. ದುಂಡು ಮುಖ..ಮಿನುಗುವ ಕಣ್ಣು..ಮುಖದಲ್ಲಿ, ಒಂದು ಥರಾ ಸೆರೆ ಹಿಡಿಯುವ ಮೋಹಕ ಶಕ್ತಿ ಇದೆ..ನೋಡಿದ ತಕ್ಷಣ ಇವನೇ ಮುರಳೀಂತ ಗೊತ್ತಾಗ್ಬಿಡುತ್ತೆ..ಅಂಥಾ ಆಕರ್ಷಣೆ......

ಯುವಕ: ಸರಿ, ಬರ್ಕೊಳೋ ಅಗತ್ಯ ಇಲ್ಲ, ಜ್ಞಾಪಕ ಇರುತ್ತೆ, ನಂಗೆ.

ಮುದುಕ: ನೋಡಿದ್ರಾ, ಎಂಥಾ ಪರಿಸ್ಥಿತೀಲಿ ಇಬ್ರೂ ಒಟ್ಟಿಗೇ ಇದೀವಿ!

ಯುವಕ: ಹುಂ! ಮಲಗೋಣ, ತುಂಬಾ ಹೊತ್ತಾಯ್ತು ಅಂತ ಕಾಣುತ್ತೆ ತಮಗೆ.

ಮುದುಕ: ಪರವಾಗಿಲ್ಲ....ಅಂತೂ ತಮ್ಮ ಪರಿಚಯ ಆದದ್ದು ನನಗೆ ಅನುಕೂಲ ವಾದ ಹಾಗೆ ಆಯ್ತು.

ಯುವಕ: ನನಗೂ ಅಷ್ಟೇ....ಸರಿ, ಉಳಿದ ವಿಚಾರ ಬೆಳಗ್ಗೆ ಎದ್ದು ಮಾತಾ ಡೋಣ. ಯಾರು ಎಲ್ಲಿ ಹುಡುಕಬೇಕು, ಎಷ್ಟು ಹೊತ್ತಿಗೆ ಎಲ್ಲಿ ಸೇರಬೇಕು—ಎಲ್ಲಾ.

ಮುದುಕ: ಸರಿ, ಹಾಗೆ ಮಾಡೋಣ.

(ಇಬ್ಬರೂ ದೀಪ ಆರಿಸಲು ಸ್ವಿಚ್ ಕಡೆ ಬರುತ್ತಾರೆ.)

ಮುದುಕ: ನಾನು ಆರಿಸ್ತೀನಿ, ನೀವು ಮಲಗಿಕೊಳ್ಳಿ. ಸ್ವಿಚ್ ನನ್ನ ಹಾಸಿಗೆ ಹತ್ರಾನೇ ಇದೆ.

(ಯುವಕ ಅಷ್ಟರಲ್ಲೇ ದೀಪ ಆರಿಸಿರುತ್ತಾನೆ. ಮಂದವಾದ ಬೆಳಕಿನಲ್ಲಿ ಮಂಚ ಕುರ್ಚಿ ಇತ್ಯಾದಿಗಳನ್ನು ಮಾತ್ರ ಗುರುತಿಸಬಹುದು.

ಯುವಕ ತನ್ನ ಹಾಸಿಗೆಯ ಮೇಲೆ ಮಲಗಿಕೊಳ್ಳುತ್ತಾನೆ. ಇಬ್ಬರೂ ನಿದ್ರಿಸುತ್ತಿರುವಾಗ ಇಂಪಾದ ಕೊಳಲಿನ ಶಬ್ದ ಹಿನ್ನೆಲೆಯಲ್ಲಿ ಕೇಳಿ ಬರುತ್ತದೆ. ಮಂದವಾದ ಬೆಳಕು ಕ್ರಮೇಣ ಕಡಿಮೆಯಾಗಿ ಪೂರ್ತಿ ಕತ್ತಲಾಗುತ್ತದೆ. ಕೊಳಲಿನ ನಾದ ಹೆಚ್ಚು ಹೆಚ್ಚು ಜೋರಾಗಿ ಕೇಳಿ ಬರುತ್ತಿರುವಂತೆ ರಂಗದ ಮೇಲೆ ತಿಳಿನೀಲಿ ಬಣ್ಣದ ಬೆಳಕು ಹರಡು ತ್ತದೆ. ಕೊಳಲಿನ ದನಿ ಕ್ರಮೇಣ ಕಡಿಮೆಯಾಗಿ, ತೀರ ಕೆಳಮಟ್ಟದಲ್ಲಿ ಮಾತ್ರ ಹಿನ್ನೆಲೆಯಲ್ಲಿ ಕೇಳಿಸುತ್ತಿರುತ್ತದೆ. ಮುದುಕ ಹೊರಳಿ ಏನೋ ಕನವರಿಸಿಕೊಳ್ಳುತ್ತಾನೆ. ಯುವಕ ಮೆಲ್ಲಗೆ ಎದ್ದು ಹಾಸಿಗೆಯ ಮೇಲೆ ಕುಳಿತುಕೊಳ್ಳುತ್ತಾನೆ. 'ಉಹುಂ, ಇಲ್ಲ, ಇರಲಾರದು' ಎಂದು

ಅಸ್ಪಷ್ಟವಾಗಿ ಉಚ್ಚರಿಸಿ ಪುನಃ ಮಲಗಿಕೊಳ್ಳುತ್ತಾನೆ. ಮುದುಕ ಮೆಲ್ಲಗೆ ಎದ್ದು ಕುಳಿತುಕೊಂಡು, 'ಎಲ್ಲಿ ಎಲ್ಲಿ?' ಎಂದು ಪುನಃ ಮಲಗಿಕೊಳ್ಳುತ್ತಾನೆ.

ಕೊಳಲಿನ ನಾದದ ಮಧ್ಯದಲ್ಲಿ ಕಿಲಕಿಲನೆ ನಕ್ಕ ಶಬ್ದ ಕೇಳುತ್ತದೆ. ಮುದುಕ, ಯುವಕ, ಇಬ್ಬರೂ ಏಳುತ್ತಾರೆ.)

ಮುದುಕ: ನಾನು ನೋಡಿದೆ, ಇಲ್ಲೆ ಎಲ್ಲೋ ಇರಬೇಕು:

ಯುವಕ : ನನಗೂ ಕೇಳಿಸ್ತು. ಅವಳದ್ದೇ ನಗು, ಅದು.

ಮುದುಕ: ಮುರಳೀ, ಮುರಳೀ......

ಯುವಕ : ರಶ್ಮೀ, ಎಲ್ಲಿದ್ದೀಯೂ...ನಾನು ನಿನ್ನನ್ನು ಎಷ್ಟು ದಿನದಿಂದ ಹುಡುಕ್ತಾ ಇದೀನಿ, ನನ್ನ ಮಾತು ಕೇಳಿಸುತ್ತಾ, ನಿನಗೆ?

ಮುದುಕ: ನಾನು ಕಣ್ಣಾರ ಕಂಡೆ, ಇಲ್ಲೇ ಎಲ್ಲೋ ಇರಬೇಕು......

ಯುವಕ : ಎಲ್ಲೂ ಕಾಣಸ್ತಾ ಇಲ್ವಲ್ಲಾ, ಎಲ್ಲಿ ಹೋದ್ಳು...ಈಗ ಕೇಳಿದ ಹಾಗಿತ್ತು ಅವಳ ನಗು......

ಮುದುಕ: ಇಲ್ಲ, ಇಲ್ಲ, ಮುರುಳೀನೇ. ಈಗ ಕಂಡೆ...ಸ್ವಲ್ಪ ಹುಡುಕಬೇಕು ಸಹಾಯ ಮಾಡ್ತೀರಾ?

ಯುವಕ : ನನಗೆ ಈಗ ಪುರುಸೊತ್ತಿಲ್ಲ...ಇಲ್ಲಿ ಮುರಳಿ ಗಿರಳಿ ಯಾರೂ ಬರಲಿಲ್ಲ. ನನ್ನ ರಶ್ಮಿ ಬಂದಿದಾಳೆ, ಬನ್ನಿ, ಸ್ವಲ್ಪ ಹುಡುಕೋಣ.

ಮುದುಕ: ಇಂಥ ಸಮಯ ಹಾಳು ಮಾಡ್ಕೊಳ್ಳೋದೇ, ಯಾರನ್ನೋ ಕಾಣ ದೋಳನ್ನ, ಇಲ್ಲದೋಳನ್ನ ಹುಡುಕ್ತಾ? ಸಾಧ್ಯವೇ ಇಲ್ಲ. ಈಗ ಬಂದಿರೋ ಅವಕಾಶ ಮತ್ತೊಂದ್ಸಲ ಸಿಗೋಲ್ಲ...ಮುರಳೀನ ಈಗಲೇ ಹುಡುಕಬೇಕು. ಏಳಿ ನೀವು, ಆ ಕಡೆ ಎಲ್ಲಾ ನೀವು ಹುಡುಕಿ... ಈ ಕಡೆ ನಾನು ನೋಡ್ತೀನಿ......

ಯುವಕ : ಏನ್ರೀ, ನಿಮಗೇನು ಬುದ್ಧಿ ಕೆಟ್‌ಗಿಟ್‌ಇದೆಯೋ? ಇಲ್ಲಿ ನಾನು ಬಂದಿರೋದು ನಿಮ್ಮ ಮುರಳೀನ ಹುಡುಕೋಕಲ್ಲ. ಚೆನ್ನಾಗಿ ತಿಳ್ಕೊಳ್ಳಿ. ಸ್ವಲ್ಪ ಎದ್ದು ಬಂದು ಸರ್‍ಯಾಗಿ ನೋಡಿ, ನಮ್ಮ ರಶ್ಮಿ ಸಿಗ್ತಾಳೆ...ನಿಮ್ಮ ಜೀವನದಲ್ಲಿ ಅಷ್ಟಾದ್ರೂ ಒಳ್ಳೆ ಕೆಲ್ಸ ಮಾಡಿ ಪುಣ್ಯ ಕಟ್ಕೊಳ್ಳಿ......

(ಇಬ್ಬರೂ ಏಳುತ್ತಾರೆ. ಮಂಚದ ಕೆಳಗೆ, ಟೇಬಲ್ ಮೇಲೆ, ಕೆಳಗೆ, ಕಸದ ಬುಟ್ಟಿ ಒಳಗೆ, ಕೋಟ್ ರ್‍ಯಾಕ್‌ನಲ್ಲಿ ಹಾಕಿದ್ದ ಕೋಟು, ಶರಟು ಪ್ಯಾಂಟುಗಳ ಜೇಬಿನಲ್ಲಿ, ದಿಂಬಿನಡಿಯಲ್ಲಿ—ಎಲ್ಲಾ ಕಡೆಯಲ್ಲೂ ತಡಕಾಡುತ್ತಾರೆ.)

ಮುದುಕ: ಉಹುಂ, ಮುರಳಿ ಎಲ್ಲೂ ಇಲ್ಲ, ಬರ್‍ತಾನೆ ಅಂತ ಕಾಣುತ್ತೆ, ಮತ್ತೆ ಸ್ವಲ್ಪ ಕಾಯಬೇಕು. ಬಂದಾಗ ಓಡಿಹೋಗದ ಹಾಗೆ ಹಿಡ್ಕೋಬೇಕು.

ಯುವಕ: ಮುರಳೀ ಮುರಳೀಂತ ಯಾಕೆ ಸುಮ್ನೆ ಬಡಕೋತೀರಾ? ರಶ್ಮೀನ ಹುಡುಕಿ, ಸಿಕ್ರೇ ಸಿಕ್ತಾಳೆ.

ಮುದುಕ: ನಂಗೊತ್ತು, ಅವನೆಲ್ಲೋ ನನ್ನ ಆಟ ಆಡಿಸ್ತಿದಾನೆ. ನಾನು ಹೀಗೆ ಕೂತಿರ್‍ತೀನಿ, ಎಷ್ಟು ಹೊತ್ತಾದ್ರೂ ಪರವಾಗಿಲ್ಲ. ನಂಗೊತ್ತು, ಅವನು ಬಂದೇ ಬರ್‍ತಾನೆ.

(ಮುದುಕ ಮತ್ತು ಯುವಕ ತಮ್ಮ ತಮ್ಮ ಹಾಸಿಗೆಯ ಮೇಲೆ ಕುಳಿತು ಕೊಂಡು ಒಬ್ಬರನ್ನೊಬ್ಬರು ತಿರಸ್ಕಾರದಿಂದ ನೋಡುತ್ತಾರೆ.)

ಯುವಕ: ನಿಮ್ಮಿಂದ ಕೈಗೆ ಸಿಕ್ಕಿದ ನನ್ನ ರಶ್ಮಿ ತಪ್ಪಿಸಿಕೊಂಡು ಹೋದ್ಳು...

ಮುದುಕ: ಮುರಳೀನ ನೀವು ಹೆದರಿಸಿ ಕಳಿಸಿಬಿಟ್ರಿ...

ಯುವಕ: ಸಾಕು, ಸುಮ್ನಿರಿ! ಹುಚ್ಚು ಹಚ್ಚಾಗಿ ಮಾತಾಡ್ಬೇಡಿ...

ಮುದುಕ: ಇನ್ನೊಂದ್ಸಲ ಅವನು ಕಂಡಾಗ ಹೀಗಾಗೋಕೆ ಬಿಡೋಲ್ಲ. ನಿಮ್ಮ ರೋಪ್‌ನೆಲ್ಲಾ ಕಟ್ಟಿಟ್ಬಿಡಿ, ಗೊತ್ತಾಯ್ತಾ?

ಯುವಕ: ನೀವು ಹುಡುಕ್ದೆ ಇದ್ರೂ ಪರವಾಗಿಲ್ಲ, ಬಾಯ್ಮುಚ್ಕೊಂಡಿದ್ರೆ ನನ್ನ ರಶ್ಮಿ ಸಿಗ್ತಾಳೆ, ನಂಗೆ.

(ಕ್ಷಣಕಾಲ ಮೌನ. ಹಿನ್ನೆಲೆಯ ಕೊಳಲಿನ ನಾದ ಕೆಳಮಟ್ಟದಲ್ಲಿ ಸ್ಪಷ್ಟವಾಗಿ ಕೇಳುತ್ತದೆ. ಯುವಕ ಯೋಚನಾಪರನಾಗಿದ್ದಾನೆ.)

ಯುವಕ: ಅವಳಿಲ್ಲಿ ನಿಜವಾಗಿ ಬಂದಿರಲಿಲ್ವೇ, ಹಾಗಾದ್ರೆ?

ಮುದುಕ: ನಾನು ಮುರಳೀನ ಕಣ್ಣಾರ ಕಂಡೆ...

ಯುವಕ: ಬಹುಶಃ ಎಲ್ಲಾ ನಮ್ಮ ಕಲ್ಪನೆ ಇರಬಹುದು......ರಶ್ಮಿ ನಕ್ಕಿದ್ದನ್ನ ಊಹಿಸಿಕೊಂಡಿರಬಹುದು...

(ಮುದುಕ ಈಗ ಯೋಚಿಸುತ್ತಾನೆ.)

ಮುದುಕ: ನೀವು ಹೇಳೋದು ನಿಜವೇನೋ ಅನ್ಸುತ್ತೆ...

ಯುವಕ: ಏನು ನಿಜ?

ಮುದುಕ: ಅದೇ, ಎಲ್ಲಾ ಕಲ್ಪನೆ ಇರಬಹುದು...ಇಲ್ಲ, ಇಲ್ಲ, ಸಾಧ್ಯವಿಲ್ಲ. ನಾನು ಕಣ್ಣಾರೆ...

ಯುವಕ: ಕನಸಿರಬಹುದು.

ಮುದುಕ: (ಕಣ್ಣುಜ್ಜಿಕೊಳ್ಳುತ್ತಾ) ಕನಸು?

ಯುವಕ : ಹೌದು, ಕನಸಿರಬಹುದು.

(ಬೆಳಕು ತುಂಬಾ ಅಸ್ಪಷ್ಟವಾಗುತ್ತಾ ಬರುತ್ತದೆ. ದೂರದಲ್ಲಿ ಒಬ್ಬ ಯುವತಿ ಗಾಳಿಯಲ್ಲಿ ತೇಲಿಬರುವಂತೆ ಬಂದು ಅವರಿಬ್ಬರ ಮುಂದೆ ನಡೆದು ಕಣ್ಮರೆಯಾಗುತ್ತಾಳೆ. ಮುದುಕ ಏನನ್ನೋ ನೋಡುವಂತೆ ಕುಳಿತಿರುತ್ತಾನೆ.)

ಮುದುಕ : ಕನಸು ! ಕನಸು !

(ಯುವಕ ಚಟ್ಟನೆ ಎದ್ದು ನಿಂತು ಯುವತಿ ಕಣ್ಮರೆಯಾದ ದಿಕ್ಕಿನಲ್ಲಿ ಕೈ ತೋರಿಸುತ್ತಾನೆ.)

ಯುವಕ : ಅಗೋ ! ಅಲ್ಲಿ. ಅವಳೇ ! ರಶ್ಮೀ, ರಶ್ಮೀ...ನಿಲ್ಲು, ನಿಲ್ಲು...

ಮುದುಕ : ಛೇ, ಯಾಕೆ ಹಾಗೆ ಕಿರಿಚ್ಕೋತಿರಾ ? ಸುಮ್ಮನೆ ಕೂತ್ಕೊಳ್ಳಿ...

ಯುವಕ : ನೀವು ನೋಡಲಿಲ್ಲವೇ ? ಈಗ ಬಂದಿದ್ಳು...ಈಕಡೆ ಹೋದ್ಳು.

(ಯುವಕ ಆ ದಿಕ್ಕಿನಲ್ಲಿ ನಾಲ್ಕೆಂಟು ಹೆಜ್ಜೆ ಹೋಗಿ ನಿರಾಶನಾಗಿ ಹಿಂದಿರುಗುತ್ತಾನೆ.)

ಮುದುಕ : ಕನಸು !

ಯುವಕ : ಪುನಃ ಬರ್ತಾಳೆ, ನನಗೆ ಗೊತ್ತು. ಅವಳು ಬರೋವರೆಗೂ ಕಾದು ಕೊಂಡು ಕೂತಿರ್ತೀನಿ.

ಮುದುಕ : ಮುರಳಿ ನನಗೆ ಸಿಗಬಹುದೂಂತ ನಿಮಗನಿಸುತ್ತೇ ?

(ಒಬ್ಬ ಹುಡುಗ ಬಂದು ಮಾಯವಾಗುತ್ತಾನೆ. ಯುವಕ ಹುಡುಗನನ್ನು ಗಮನಿಸುವುದಿಲ್ಲ. ಮುದುಕ ತಕ್ಷಣ ಎದ್ದು ಹುಡುಗನನ್ನು ಹಿಂಬಾಲಿ ಸುತ್ತಾನೆ.)

ಮುದುಕ : ನೋಡಿ, ನೋಡಿ ! ನಾನು ಹೇಳಲಿಲ್ಲವೇ ? ಮುರಳೀ, ಮುರಳೀ ನಿಲ್ಲು...ನಿನ್ನ ಹುಡುಕ್ಕೊಂಡ್ಬಂದಿದೀನಿ, ನಿಲ್ಲು ಮುರಳೀ...

(ಮುದುಕ ನಿರಾಶನಾಗಿ ವಾಪಸ್ ಬರುತ್ತಾನೆ.)

ಯುವಕ : ಸುಮ್ಮನೆ ಯಾಕೆ ಗಲಾಟೆ ಮಾಡ್ತೀರಾ ? ಯಾರೂ ಬಂದಿಲ್ಲ...ರಶ್ಮಿ ಬಂದಿದ್ಳು, ನೀವು ಗಲಾಟೆಮಾಡಿ ಓಡಿಸಿಬಿಟ್ರಿ...

ಮುದುಕ : ಈ ಸಲ ಖಂಡಿತಾ ನೋಡ್ದೆ, ಅವನೇ ಮುರಳಿ...ಕನಸಲ್ಲ, ನಿಜ ವಾಗ್ಲೂ...

(ಕ್ಷಣಕಾಲ ಮೌನ.)

ಯುವಕ : ಬಹಶಃ ಕನಸೇ ಇರಬಹುದು.

(ಮುದುಕ ಹತಾಶನಾಗಿ ಹಾಸಿಗೆ ಮೇಲೆ ಕೂರುತ್ತಾನೆ.)

ಮುದುಕ: ಕನಸೇ? ನಿಜವಾಗ಼್್ಲೂ ಕನಸೇ?
(ಯುವಕ ಎದ್ದು ನಿಲ್ಲುತ್ತಾನೆ. ಅಧಿಕಾರಯುತ ಧ್ವನಿಯಿಂದ ಮಾತನಾಡುತ್ತಾನೆ.)

ಯುವಕ: ಹೌದು! ಇರಬಹುದು. ನಾನು ಹೇಳಿದ ಹಾಗೆ ನೀವು ಕೇಳಬೇಕು.

ಮುದುಕ: (ಪ್ರತಿಭಟನೆ) ಯಾಕೋ?

ಯುವಕ: ಯಾಕೇಂತ ಕೇಳೋ ಅಧಿಕಾರ ನಿಮಗಿಲ್ಲ, ಇದು ನನ್ನ ಕನಸು.

ಮುದುಕ: ಸಾಧ್ಯವಿಲ್ಲ. ಇದು ನನ್ನ ಕನಸು. ನನ್ನ ಕನಸಿನಲ್ಲಿ ನೀವು ಬಂದಿರೋದ್ರಿಂದ ನಾನು ಹೇಳಿದ ಹಾಗೆ ನೀವು ಕೇಳಬೇಕು.
(ಮುದುಕ ಎದ್ದು ನಿಲ್ಲುತ್ತಾನೆ.)

ಯುವಕ: ನೀವು ಆ ಬಾಗಿಲಿನಲ್ಲಿ ಅಡ್ಡನಿಲ್ಲಿ. ರಶ್ಮಿ ಬಂದರೆ ಈ ಸಲ ತಪ್ಪಿಸಿಕೊಂಡು ಹೋಗಕೂಡದು. ಅದರ ಜವಾಬ್ದಾರಿ ನಿಮ್ಮದು.

ಮುದುಕ: ಸಾಧ್ಯವಿಲ್ಲ, ನನಗೆ ಮುರುಳೀನ ಹಿಡಿಯೋ ಕೆಲಸದಲ್ಲಿ ನೀವು ಸಹಾಯ ಮಾಡಬೇಕು. ನನ್ನ ಕನಸಿನಲ್ಲಿ ಬಂದು ನನಗೆ ಅಪ್ಪಣೆ ಮಾಡೋ ಅಧಿಕಾರ ನಿಮಗಿಲ್ಲ, ತಿಳ್ಕೊಳಿ.

ಯುವಕ: ಈ ರೀತಿ ಒಡ್ಕೊಡ್ಡಾಗಿ ಮಾತಾಡೋದಿಂದ್ರ ಏನೂ ಪ್ರಯೋಜ್ನ ಇಲ್ಲ. ಸುಮ್ನೆ ನಾನು ಹೇಳಿದ ಹಾಗೆ ಕೇಳಿ.

ಮುದುಕ: ಮೊದಲು ನಾನು ಹೇಳಿದ ಹಾಗೆ ಕೇಳಿ ನೀವು.

ಯುವಕ: ನನ್ನ ಕನಸಾದ್ರಿಂದ್ಲೆ ರಶ್ಮಿ ಕಾಣಿಸಿದ್ದು...

ಮುದುಕ: ಮುರಳಿ ಬಂದಿದ್ರಿಂದಾನೇ ಕನಸು ಸಾದುನಂದು...

ಯುವಕ: (ಅಸಹನೆ) ಸಾಕು ಸುಮ್ನಿರಿ. ಬಾಯಿಗೆ ಬಂದ್ಹಾಗೆ ಮಾತಾಡ್‌ಬೇಡಿ.

ಮುದುಕ: ನೀವು ಬಾಯಿಗೆ ಬಂದ ಹಾಗೆ ಮಾತಾಡ್ತಿರೋದು, ನಾನಲ್ಲ.

(ಜಗಳ ನಡೆಯುತ್ತಿದ್ದಾಗ, ಇಬ್ಬರೂ ಗಮನಿಸದ ಹಾಗೆ ಹುಡುಗ ಮತ್ತು ಯುವತಿ ಪ್ರವೇಶಿಸುತ್ತಾರೆ. ಯುವತಿ ನಗುತ್ತಾಳೆ. ಯುವಕ ಮತ್ತು ಮುದುಕ ಇಬ್ಬರೂ ಒಮ್ಮೆಲೇ ಅವರ ಕಡೆ ನೋಡಿ ಅವರತ್ತ ಧಾವಿಸುತ್ತಾರೆ. ಆದರೆ ಯಾರೂ ಕೈಗೆ ಸಿಕ್ಕುವುದಿಲ್ಲ. ರೂಮಿನಲ್ಲಿ ಅಲ್ಲಿಂದಿಲ್ಲಿಗೆ ಓಡಾಡಿ, ಹುಡುಗ ಮತ್ತು ಯುವತಿ, ಇಬ್ಬರೂ ಕಣ್ಮರೆಯಾಗುತ್ತಾರೆ. ಅವರನ್ನು ಹಿಡಿಯಲು ಓಡಾಡಿ, ಮುದುಕ ಮತ್ತು ಯುವಕ, ಇಬ್ಬರೂ ದಣಿದು, ಅವರು ಕಣ್ಮರೆಯಾದ ಮೇಲೆ ತಮ್ಮ ತಮ್ಮ ಹಾಸಿಗೆಗಳ ಮೇಲೆ ಬಂದು ಕುಳಿತುಕೊಳ್ಳುತ್ತಾರೆ.)

ಯುವಕ: ನನ್ನ ಮಾತು ಕೇಳಿದ್ರೆ ಅವರನ್ನು ಹಿಡಿಯಬಹುದಾಗಿತ್ತು.

ಮುದುಕ: ನಿನ್ನ ಹಟದಿಂದ ನನ್ನ ಮುರಳೀನ ಕಳೆದುಕೊಂಡೆ.

ಯುವಕ : ಪುನಃ ತಪ್ಪಿಸಿಕೊಂಡಳು ರಶ್ಮಿ…

ಮುದುಕ: ಇನ್ನೆಲ್ಲಿ ಹುಡುಕ್ಲಿ ನನ್ನ ಮುರಳೀನ…

(ಇಬ್ಬರೂ ಎದ್ದು, ಮೊದಲು ಹುಡುಕಿದಂತೆ ಮಂಚದ ಕೆಳಗೆ, ಟೇಬಲ್ ಮೇಲೆ, ಕೆಳಗೆ, ಡ್ರಾಯರ್ ಒಳಗೆ, ಕೋಟು ಪ್ಯಾಂಟುಗಳ ಜೇಬಿನಲ್ಲಿ ಕಿಟ್ಟಿನಲ್ಲಿ, ದಿಂಬಿನ ಕೆಳಗೆ, ರಗ್ಗನ್ನು ಕೊಡವಿ, ದಿಂಬಿನ ಕವರನ್ನು ಎಳೆದು ತಮ್ಮ ತಮ್ಮ ಮೈ ಮುಟ್ಟಿ ನೋಡಿಕೊಂಡು—ಹುಚ್ಚು ಹುಚ್ಚಾಗಿ ಹುಡುಕುತ್ತಾರೆ.)

ಯುವಕ : ಇಲ್ಲ, ಇಲ್ಲ, ಎಲ್ಲೂ ಇಲ್ಲ.

ಮುದುಕ: ಹುಂ! ಕೈ ತಪ್ಪಿಹೋಯಿತು.

(ಕೊಳಲಿನ ನಾದ ಜೋರಾಗುತ್ತಾ ಬಂದು, ಮತ್ತೆ ಕ್ರಮೇಣ ಕಮ್ಮಿಯಾಗುತ್ತದೆ. ಇಬ್ಬರೂ ಸುಸ್ತಾಗಿ, ವಿಷಾದದಿಂದ ಒಬ್ಬರನ್ನೊಬ್ಬರು ನೋಡುತ್ತಿರುವಂತೆ ತಿಳಿನೀಲಿ ಬೆಳಕು ಸ್ವಲ್ಪ ಸ್ವಲ್ಪವಾಗಿ ಮಂದವಾಗಿ ಪೂರ್ತಿ ಕತ್ತಲೆ ಆವರಿಸುತ್ತದೆ. ಹಿನ್ನೆಲೆಯ ಕೊಳಲು ನಿಲ್ಲುತ್ತದೆ.)

(ಅದೇ ಕೋಣೆ. ಯುವಕ ಕುರ್ಚಿಯ ಮೇಲೆ ಕುಳಿತಿದ್ದಾನೆ. ಮುದುಕ ಹಾಸಿಗೆಯ ಮೇಲೆ ಕುಳಿತು ತನ್ನ ಕಿಟ್ಟಿಗೆ ಬಟ್ಟೆಗಳನ್ನು ತುರುಕುತ್ತಿದ್ದಾನೆ. ಪೂರ್ತಿ ಬೆಳಕು ಬಂದಿದೆ. ಕೆಳಗಿನ ಮಾತುಗಳನ್ನು ವಿಶೇಷ ಆಸಕ್ತಿ ಇಲ್ಲದೆ ಆಡುತ್ತಾರೆ.)

ಯುವಕ : ಗಲ್ಲಿ ಗಲ್ಲೀನೂ ಬಿಡಲಿಲ್ಲ.

ಮುದುಕ: ಪೇಟೆ ಬೀದಿ ಎಲ್ಲಾ ಅಲೆದೆ.

ಯುವಕ : ವ್ಯರ್ಥ!

ಮುದುಕ: ವೃಥಾ ಶ್ರಮ!

ಯುವಕ : ಕಂಡ ಕಂಡೋರ್ನೆಲ್ಲಾ ಕೇಳಿದೆ.

ಮುದುಕ: ತಿಳಿದೋರು ಅನ್ನಿಸಿಕೊಂಡೋರ್ನೆಲ್ಲಾ ವಿಚಾರಿಸಿದೆ.

ಯುವಕ : ತಿಳೀದ ಬೆಪ್ಪರನ್ನೂ ಕೇಳಿದೆ.

ಮುದುಕ: ಊರೂರು ಅಲೆದಾಯ್ತು.

ಯುವಕ : ಕೇರಿ ಕೇರೀಲೆಲ್ಲಾ ಡಂಗುರ ಹೊಡೆದಾಯ್ತು.

ಮುದುಕ: ರೈಲ್ವೆ ಸ್ಟೇಷನ್ ಎಲ್ಲಾ ಶೋಧಿಸಿ ಆಯ್ತು.

ಯುವಕ : ಎಲ್ಲಿ ಹೋದ್ರು, ಎಲ್ಲಿ ನೋಡಿದ್ರೂ ಇಲ್ಲ!

ಮುದುಕ: ಅಂದ್ಹಾಗೆ ಬೊಂಬಾಯಿಗೆ ಹೋಗಿಸ್ರಾ? ಯಾಕೇಂದ್ರೆ ಅಲ್ಲಿ ಹುಡುಗೀ ರನ್ನ ಹಿಡ್ಕೊಂಡ್ಹೋಗಿ ಸೂಳೆಮನೆ ಸೇರಿಸ್ತಾರಂತೆ.

ಯುವಕ : ಬೊಂಬಾಯಿ, ಕಲ್ಕತ್ತಾ, ಮದ್ರಾಸ್, ಬೆಂಗಳೂರು......

ಮುದುಕ: ಕಾಶಿ, ತಿರುಪತಿ, ಪಂಡರಪುರ......

ಯುವಕ : ಪಂಡರಪುರದಲ್ಲಿ ಮಕ್ಳನ್ನ ಹಿಡ್ಕೊಂಡು ಹೋಗಿ ಕಣ್ ಕಿತ್ತು, ಕಾಲು ಮುರಿದು ತಿರುಪೇಗೆ ಕಳಿಸ್ತಾರಂತೆ......

ಮುದುಕ: ಮಂತ್ರಾಲಯ, ಕನ್ಯಾಕುಮಾರಿ, ಪುಟ್ಟಪರ್ತಿ, ಪೂರಿ, ಕೋಣಾರ್ಕ, ಉಡುಪಿ......

ಯುವಕ : ಸಿಮ್ಲಾ, ಆಗ್ರಾ, ಕಾಶ್ಮೀರ, ನಂದಿ, ಕೆಮ್ಮಣ್ಣುಗುಂಡಿ, ಪಾಂಡಿಚೆರಿ, ಖಜುರಾಹೊ......

ಮುದುಕ: ಎಲ್ಲಾ ಊರೂ ಹುಡುಕಾಯ್ತು.

ಯುವಕ : ಊರಲ್ಲಿ ನೋಡಿದೆ, ಕೇರೀಲಿ ನೋಡಿದೆ.

ಮುದುಕ: ಜಾತ್ರೇಲಿ ನೋಡ್ದೆ, ಸಭೇಲಿ ನೋಡ್ದೆ, ಸಮಾರಾಧನೇಲಿ ನೋಡ್ದೆ, ಸಂತೇಲಿ ನೋಡ್ದೆ......

(ಇಬ್ಬರೂ ತಮ್ಮ ತಮ್ಮ ಜಾಗಗಳಿಂದ ಎದ್ದು ರಂಗದ ಮುಂಭಾಗದಲ್ಲಿ, ಎರಡೂ ಬದಿಯಲ್ಲಿ ನಿಲ್ಲುತ್ತಾರೆ.)

ಯುವಕ : ಥಿಯೇಟರ್‌ನಲ್ಲಿ, ದೇವಸ್ಥಾನದಲ್ಲಿ ನೋಡ್ದೆ.

ಮುದುಕ: ಮಠದಲ್ಲಿ ನೋಡಿದೆ.

ಯುವಕ : ಲೈಬ್ರರೀಲಿ ಹುಡುಕಿದೆ.

ಮುದುಕ: ಪಾರ್ಕ್‌ನಲ್ಲಿ ಅಲೆದಾಡಿದೆ.

ಯುವಕ : ಬಯಲಿನಲ್ಲಿ ನೋಡಿದೆ, ಕಾಡಿನಲ್ಲಿ ಹುಡುಕಿದೆ.

ಮುದುಕ: ಮರಳುಗಾಡಿನಲ್ಲಿ ನೋಡ್ದೆ, ಒಯಸಿಸ್‌ನಲ್ಲಿ......

ಯುವಕ : ಆಕಾಶದಲ್ಲಿ, ದಿಗಂತದಲ್ಲಿ.

ಮುದುಕ: ಹೊಳೇಲಿ, ಕೆರೇಲಿ, ಭಾವೀಲಿ.

ಯುವಕ : ಯೂನಿವರ್ಸಿಟೀಲಿ, ಪೋಲೀಸ್ ಸ್ಟೇಷನ್‌ನಲ್ಲಿ.

ಮುದುಕ: ಹಿಮಾಲಯದಲ್ಲಿ, ಕೋರ್ಟಿನಲ್ಲಿ, ರಿಮ್ಯಾಂಡ್ ಹೋಮ್‌ನಲ್ಲಿ.

ಯುವಕ : ಸಾಗರದಲ್ಲಿ.

ಮುದುಕ: ಶಿವಮೊಗ್ಗದಲ್ಲಿ?

ಯುವಕ : ಕನಕನ ಕಿಂಡೀಲಿ.

ಮುದುಕ : ಕೋಟೆ ಬಾಗ್‌ಲಲ್ಲಿ.

ಯುವಕ : ಉಕ್ಕಡದಲ್ಲಿ.

ಮುದುಕ : ಕೂಲಿ ಮಠದಲ್ಲಿ.

ಯುವಕ : ಪಾಲಿ ಟೆಕ್ನಿಕ್‌ನಲ್ಲಿ.

ಮುದುಕ : ಬಸ್ ಸ್ಟ್ಯಾಂಡ್‌ನಲ್ಲಿ.

ಯುವಕ : ಮ್ಯೂಸಿಯಂನಲ್ಲಿ, ಆರ್ಟ್ ಗ್ಯಾಲರೀಲಿ.

ಮುದುಕ : ಸಂಗೀತ ಕಛೇರೀಲಿ, ಭಜನೆ ಮಂಡಲೀಲಿ.

ಯುವಕ : ಹೋಟೆಲ್‌ಗಳಲ್ಲಿ

ಮುದುಕ : ಟೌನ್‌ಹಾಲ್‌ನಲ್ಲಿ

ಯುವಕ : ಬೆಳದಿಂಗಳಲ್ಲಿ, ಔತಣ ಕೂಟದಲ್ಲಿ, ಬಾರ್‌ನಲ್ಲಿ, ಪತ್ರಿಕಾಲಯದಲ್ಲಿ, ಯೋಗಾಶ್ರಮದಲ್ಲಿ, ಗರಡೀಮನೇಲಿ

ಮುದುಕ : ವರ್ಕ್ಸ್ ಷಾಪ್‌ನಲ್ಲಿ ಲ್ಯಾಬೊರೇಟರೀಲಿ

ಯುವಕ : ಗುಹೇಲಿ, ಬೆಂಕೀಲಿ, ರೀಡರ್ಸ್ ಡೈಜೆಸ್ಟ್‌ನಲ್ಲಿ

ಮುದುಕ : ಎಲ್ಲಾ ಕಡೆ ಹುಡುಕಾಯ್ತು

ಯುವಕ : ಮುಗೀತೆ ?

ಮುದುಕ : ಏನು ?

ಯುವಕ : ಇನ್ನೇನು ಬಾಕಿ ಇಲ್ವೇ ?

ಮುದುಕ : ಏನು ಸಿಕ್ತು ಕೊನೇಗೆ ?

ಯುವಕ : ಎಚ್ಚರವಿದ್ದಾಗ, ನಿದ್ರೆಮಾಡೋವಾಗ... ಹಾಯಾಗಿರೋವಾಗ.

ಮುದುಕ : ಕನಸಲ್ಲಿ ಮನಸಲ್ಲಿ ಧ್ಯಾನದಲ್ಲಿ

ಯುವಕ : ಎಲ್ಲೂ ಸಿಕ್ಕಿಲ್ಲ. ಬಹುಶಃ ಸಿಕ್ಕೋದೂ ಇಲ್ಲ ಅಂತ ಕಾಣುತ್ತೆ.

ಮುದುಕ : ಹಾಗಂತೀರಾ ?

ಯುವಕ : ಅವಳು ಇದಾಳೋ ಇಲ್ವೊ ಅಂತ ಅನುಮಾನ ಬರುತ್ತೆ.
(ಈಗ ಯುವಕ ಮತ್ತು ಮುದುಕ ಒಬ್ಬರಿಗೊಬ್ಬರು ಬೆನ್ನು ಮಾಡಿ ನಿಂತಿರುತ್ತಾರೆ.)

ಮುದುಕ : ಯಾರಿಗೆ ತಾನೆ ಗೊತ್ತು ?

ಯುವಕ : ಮುರಳಿ ಇದಾನೆ ಅಂತ ಹ್ಯಾಗೆ ಹೇಳ್ತೀರಾ?

ಮುದುಕ: (ಪ್ರತಿಧ್ವನಿ) ಹ್ಯಾಗೆ?

ಯುವಕ : ಹೀಗೇ...ಏನೇನೋ ಅಂದ್ಕೊಂಡಿರ್ತೀವಿ......

ಮುದುಕ: ಆಹಾ! ಇರಬಹುದು.

ಯುವಕ : ಮುರಳಿ ಬರೀ ಭ್ರಮೆ ಆಗಿದ್ರೆ?

ಮುದುಕ: ಭ್ರಮೆ.

ಯುವಕ : ನಾನು ಸುಸ್ತಾಗಿದೀನಿ.

ಮುದುಕ: ನಾನು ಬೆಂಡಾಗಿದೀನಿ.

ಯುವಕ : ನಾನು ನಿದ್ದೆ ಮಾಡ್ತಿರಬಹುದು.

ಮುದುಕ: ನಾನು ಕನಸು ಕಾಣ್ತಿರಬಹುದು.

ಯುವಕ : ಎಲ್ಲಾ ಹೀಗೇ ಇರುತ್ತೆ.

ಮುದುಕ: ಎಲ್ಲಾ ಬದಲಾಗಿಬಿಡುತ್ತೆ.

ಯುವಕ : ಯಾರೂ ಸಿಕ್ಕೋಲ್ಲ.

ಮುದುಕ: ಸಿಗೋದಕ್ಕೆ ಯಾರೂ ಇಲ್ಲ.

(ಮುದುಕ ಮತ್ತು ಯುವಕ, ಇಬ್ಬರೂ ರಂಗದಮೇಲೆ ನಿಧಾನವಾಗಿ ಗೊತ್ತು ಗುರಿ ಇಲ್ಲದಂತೆ ಸುತ್ತಾಡುತ್ತಾರೆ.)

ಯುವಕ : ಯಾಕೆ ಹುಡುಕಬೇಕು? ಅವರು ಸಿಕ್ಕಿ ನಮಗೇನು ಆಗಬೇಕಾಗಿದೆ?

ಮುದುಕ: ಏನೂ ಇಲ್ಲ!

(ಇಬ್ಬರೂ ಓಡಾಟ ನಿಲ್ಲಿಸಿ, ಒಬ್ಬರ ಹೆಗಲಮೇಲೊಬ್ಬರು ಕೈ ಹಾಕಿ ನಿಲ್ಲುತ್ತಾರೆ. ಇಬ್ಬರೂ ಕೈ ಕುಲುಕುತ್ತಾರೆ. ಮುದುಕ ತನ್ನ ಮಂಚದ ಬಳಿ ಬಂದು ಕಿಟ್ ಬಿಚ್ಚಿ, ಒಳಗಿನಿಂದ ಒಂದು ಫುಟ್‌ಬಾಲ್ ಕವರ್, ಬ್ಲಾಡರ್ ತೆಗೆಯುತ್ತಾನೆ.)

ಯುವಕ : ಏನಿದು? ಫುಟ್‌ಬಾಲ್! ಅದನ್ಯಾಕೆ ತಂದಿದೀರಿ?

ಮುದುಕ: (ಕವರಿನೊಳಕ್ಕೆ ಬ್ಲಾಡರ್ ತುರುಕಿ ಗಾಳಿ ಊದುತ್ತಾ) ಪ್ರಯಾಣ ಮಾಡೋವಾಗ ತಲೆದಿಂಬಿಗೆ ಏನಾದ್ರೂ ಬೇಕಲ್ಲಾ!

(ಗಾಳಿ ತುಂಬಿದ ಫುಟ್‌ಬಾಲನ್ನು ಮುದುಕ ನೆಲದಮೇಲೆ ಪುಟಿಸುತ್ತಾನೆ. ಚೆಂಡು ಉರುಳಿಕೊಂಡು ಹೋಗಿ ಒಂದು ಮೂಲೆಗೆ ಬರುತ್ತದೆ. ಯುವಕ ಅದರ ಹತ್ತಿರ ಹೋಗಿ ಅದನ್ನು ಮೆಲ್ಲಗೆ ಮುದುಕನತ್ತ

ಒದೆಯುತ್ತಾನೆ. ಮುದುಕ ಅದನ್ನು ಯುವಕನಿಗೆ ಹಿಂತಿರುಗಿಸುತ್ತಾನೆ. ಒಂದೆರಡು ಸಲ ಈ ತರಹ idle play ನಡೆದ ಮೇಲೆ ಮುದುಕ ಚೆಂಡನ್ನು ಬಲವಾಗಿ ಒದೆಯುತ್ತಾನೆ. ಯುವಕ ಅದನ್ನು ಅಷ್ಟೇ ಚುರುಕಿನಿಂದ ತಡೆದು, ವಿರುದ್ಧ ದಿಕ್ಕಿನಲ್ಲಿ ಒದೆಯುತ್ತಾನೆ. ಇಬ್ಬರಲ್ಲೂ ಸ್ವಲ್ಪ ಉತ್ಸಾಹ ಮೂಡುತ್ತಿರುತ್ತದೆ. 'ಹೋ!', 'ಓಹ್!' ಇತ್ಯಾದಿ ಉದ್ಗಾರಗಳೊಡನೆ ರಂಗದ ಮೇಲೆಲ್ಲಾ ಚೆಂಡನ್ನು ಓಡಾಡಿಸುತ್ತಿರುತಾರೆ.)

(ಹೋಟಲಿನ ಸೇವಕ ಮತ್ತು ಗುಮಾಸ್ತ, ಇಬ್ಬರೂ ಓಡೋಡಿ ಬರುತ್ತಾರೆ. ಸೇವಕನ ಬಾಯಲ್ಲಿ ಸೀಟಿಯಿದೆ, ಗುಮಾಸ್ತನ ಕೈಯಲ್ಲಿ ಒಂದು ಚೂರು ಕಾಗದ.)

ಸೇವಕ : ತಡೀರಿ! ತಡೀರಿ! ನಾನು ರೆಫ್ರೀ. ಸೀಟಿ ಊದೋ ತನಕ ನೀವು ಸುಮ್ಮನಿರ್ಬೇಕು.

ಗುಮಾಸ್ತ: ನಾನು ಪ್ರೇಕ್ಷಕ. ನಾನು ಬರೋವರ್ಗೂ ಆಟ ಶುರು ಮಾಡಬಾರ್ದು. ಟಿಕೇಟ್ ಕೊಂಡ್ಕೊಂಡಿದಿನಿ.

ಮುದುಕ : ರೆಡೀನಾ?

ಯುವಕ : ರೆಡಿ!

(ಸೇವಕ ಎರಡು ಕೈಗಳನ್ನೂ ಮೇಲೆತ್ತಿ ಜೋರಾಗಿ ಸೀಟಿ ಊದುತ್ತಾನೆ. ಮುದುಕ, ಯುವಕ, ಇಬ್ಬರೂ ಚೆಂಡನ್ನು ಒದೆಯುತ್ತಾರೆ. ಚೆಂಡು, ರಂಗದ ಎಲ್ಲಾ ಭಾಗಗಳಲ್ಲೂ ಉರುಳಾಡುತ್ತದೆ. ಅದನ್ನನುಸರಿಸಿ ಇಬ್ಬರೂ ಧಾವಿಸುತ್ತಿರುತ್ತಾರೆ. ಮಧ್ಯೆ ಮಧ್ಯೆ 'ರೆಫ್ರೀ' ಸೀಟಿ ಊದಿದಾಗ, 'ಫೌಲ್!' 'ಕಾರ್ನರ್!', 'ಫ್ರೀ ಕಿಕ್!', ಇತ್ಯಾದಿ ಕೂಗುಗಳು ಹಿನ್ನೆಲೆಯಲ್ಲಿ ಪ್ರಚಂಡವಾಗಿ ಕೇಳಬರುವುದನ್ನು ಗುಮಾಸ್ತ—ಪ್ರೇಕ್ಷಕ ಪ್ರತಿಧ್ವನಿಸುತ್ತಾನೆ. ಯುವಕ ರಂಗದ ಎಡ ಬದಿಗೆ ಚೆಂಡನ್ನು ಒದೆಯುತ್ತಾನೆ.)

ಯುವಕ : ಗೋಲ್!

ಸೇವಕ : ಉಹುಂ! ಗೋಲ್ ಆಕಡೆ ಇಲ್ಲಾ!

(ಸೇವಕ ಸೀಟಿ ಊದುತ್ತಾನೆ. ಮುದುಕ ಚೆಂಡನ್ನು ಎದುರು-ದಿಕಿನಲ್ಲಿ ಒದೆಯುತ್ತಾನೆ.)

ಮುದುಕ : ಗೋಲ್!

ಸೇವಕ : ಉಹುಂ! ಗೋಲ್ ಆಕಡೆ ಇಲ್ಲಾ!

(ಮುದುಕ, ಯುವಕ, ಇಬ್ಬರೂ ಚೆಂಡನ್ನು ಎಲ್ಲ ದಿಕ್ಕಿನಲ್ಲಿ ಒದ್ದು 'ಗೋಲ್, ಗೋಲ್' ಎಂದು ಕಿರಿಚುತ್ತಾರೆ. ರೆಫ್ರೀ ಒಂದೇ ಸಮನೆ ಸೀಟಿ ಊದಿ ಊದಿ, 'ಇಲ್ಲಾ ಇಲ್ಲಾ ಇಲ್ಲಾ' ಎಂದು ಸೀಟಿ ಮಧ್ಯೆ ಕಿರಿಚುತ್ತಾನೆ. ಜನಗಳ ಕೂಗು ಕೇಕೆ ಜೋರಾಗುತ್ತದೆ. ಗುಮಾಸ್ತ-ಪ್ರೇಕ್ಷಕ ಒಂದು ಕಡೆ ನಿಲ್ಲಲಾರದೆ 'ಫೌಲ್ ಫೌಲ್!' ಎಂದು ಕೂಗುತ್ತಾ ಕಿರಿಚುತ್ತಾ ಅಲ್ಲಿಂದಿಲ್ಲಿಗೆ ಓಡಾಡುತ್ತಾನೆ. ಆ ವೇಳೆಗೆ ಚೆಂಡು ನಿಧಾನವಾಗಿ ಉಸಿರು ಕಳೆದುಕೊಳ್ಳುತ್ತಿರುತ್ತದೆ. ಯುವಕ ಅದನ್ನು ಒದ್ದು, 'ಗೋಲ್!' ಎಂದು ಕೂಗುತ್ತಾನೆ.)

ಸೇವಕ : ಯಾಕೆ ಹಾಗೆ ಕಿರಿಚ್‌ತಿಯಾ? ಎಲ್ಲಿದೆ ಗೋಲು?

ಮುದುಕ : ಗೋಲ್!

ಸೇವಕ : ಇಲ್ಲಾ, ಫೌಲ್!

(ಸೇವಕ ಸೀಟಿ ಊದುತ್ತಾನೆ, ಚೆಂಡಿನಲ್ಲಿ ಅರ್ಧ ಗಾಳಿ ಹೋಗಿ 'ತೊಪ್ಪೆ' ಯಾಗಿದೆ. ಯುವಕ ಚೆಂಡನ್ನು ಕೈಗೆತ್ತಿಕೊಂಡು ಪರೀಕ್ಷಿಸುತ್ತಾನೆ.)

ಮುದುಕ : ಗಾಳಿ ಹೋಗಿದೆ. ಆಡೋಕಾಗಲ್ಲ.

ಯುವಕ : (ಚೆಂಡನ್ನು ಅಮುಕುತ್ತಾ) ಇನ್ನೂ ಸ್ವಲ್ಪ ಇದೆ. ಆದ್ರೆ ಆಟ ಆಡೋ ಕಾಗಲ್ಲ.

ಸೇವಕ : ಎಲ್ಲಿ, ಇಲ್ಲಿ ಕೊಡಿ ಬಾಲ್ನ. ನಾನು ನೋಡಿ ಹೇಳ್ತೀನಿ, ಆಡೋಕೆ ಸಾಧ್ಯವೋ ಇಲ್ವೋಂತ.

(ಸೇವಕ ಚೆಂಡನ್ನು ತೆಗೆದುಕೊಂಡು ಪರೀಕ್ಷಿಸುತ್ತಾನೆ—ಅಮುಕಿ, ಹಿಚಿಕಿ, ಕಿವಿಗಿಟ್ಟುಕೊಂಡು—ಇತ್ಯಾದಿ ಡಾಕ್ಟರ್ ರೋಗಿಯನ್ನು ಪರೀಕ್ಷಿಸುವಂತೆ.)

ಗುಮಾಸ್ತ: ಶುರುಮಾಡಿ, ಶುರುಮಾಡಿ ಬೇಗ, ಹೊತ್ತಾಯ್ತು. (ಚಡಪಡಿಸು ತ್ತಾನೆ).

ಸೇವಕ : (ಚೆಂಡನ್ನು ನೆಲದ ಮೇಲಿಡುತ್ತಾ) ಇನ್ನೂ ಆಡಬಹುದು, ಶುರುಮಾಡಿ. (ಸೇವಕ ಸೀಟಿ ಊದುತ್ತಾನೆ. ಯುವಕ, ಮುದುಕ, ಇಬ್ಬರೂ ಒಬ್ಬರನ್ನೊಬ್ಬರು ನೋಡಿಕೊಂಡು, ಬೇರೇನೂ ದಾರಿಯೇ ಇಲ್ಲ ಎಂಬಂತೆ desperate ಆಗಿ ಆಡಲು ಪ್ರಾರಂಭಿಸುತ್ತಾರೆ. ಮೊದಲಿನಂತೆಯೇ ಸೀಟಿ, ಕೂಗು, ಕೇಕೆ. ಗುಮಾಸ್ತ, ಅತ್ತಿಂದಿತ್ತ ಓಡಾಡುತ್ತಿರುವ ಚೆಂಡನ್ನು ಬಹಳ ಆಸ್ಥೆಯಿಂದ ನೋಡುತ್ತಿರುತ್ತಾನೆ.

ಚೆಂಡು ಪೂರ್ತಿ ಗಾಳಿ ಕಳೆದುಕೊಂಡು ಚಪ್ಪಟೆಯಾಗಿದೆ. ಅದನ್ನು ಒಡೆಯಲಾರದೆ ಮುದುಕ, ಯುವಕ, ಇಬ್ಬರೂ ಕೈಚೆಲ್ಲಿ ಸುಮ್ಮನೆ ನಿಲ್ಲುತ್ತಾರೆ. ಸೇವಕ ಸೀಟಿ ಊದುವುದನ್ನು ನಿಲ್ಲಿಸಿ ಚೆಂಡನ್ನು ಎತ್ತಿಕೊಂಡು ಪರೀಕ್ಷಿಸುತ್ತಿರುವಾಗ—ಕತ್ತಲು.)

## ಪಾತ್ರವರ್ಗ:

| | |
|---|---|
| ಭಾಗವತ | |
| ಅಜ್ಜಿ | ಟಗರಜ್ಜಿ |
| ಕುಂಬಾರ್ತಿ | ಮಗ |
| ಟಗರು | ಭಗವಂತ |
| ಮುದುಕ | ಸೂಳೆ |
| ಕರಡಿ | ರಾಜಕುಮಾರಿ |
| ರಾಜ | ಮೇಳ (ಏಳು ಜನ) |
| ಕಿಟ್ಟಿ | |
| ಶೆಟ್ಟಿ | |

# ಕಿಟ್ಟೀ ಕಥೆ

## ಗಣ್ಣಪದ

ಮೇಳ : ಬಂದ ಕುಂತಿದೀರಿ ಹಿರಿಯ ಕಿರಿಯರಾ
ಶರಣು ಹೇಳತೀವಿ ನಾವು ನಿಮಗೆ—। ಸ್ವಾಮಿ
ಸಣ್ಣ ಹುಡುಗರು ಬಣ್ಣದ ಗಾಬರಿ
ಚೆನ್ನಾಗಿ ಕೇಳರಿ ನಮ್ಮ ಕಥನಾ ॥

ತಪ್ಪ ಮಾಡಿದರೆ ಒಪ್ಪ ಮಾಡಿಕೊಳ್ಳಿ
ಚಪ್ಪಾಳಿ ಹೊಡೆಯಿರಿ ನಗುನಗುತಾ ! ಸ್ವಾಮಿ
ಸ್ಕೂಲಿನ ಎಳೆಯರು ತಲೆಯ ಬಾಗತೀವಿ
ಕೈಯ ಮುಗಿಯತೀವಿ ನಾವು ನಿಮಗೆ ॥ ಸ್ವಾಮಿ

ಬುದ್ಧಿವಂತ ಗಣಪ ಡೊಳ್ಳಹೊಟ್ಟೆ ಟೊಣಪ
ಕೈಯ ಮುಗಿಯತೀವಿ ನಾವು ನಿಮಗೆ । ಸ್ವಾಮಿ
ಬುದ್ಧಿಕೊಡು ನಮಗಷ್ಟು ದೊಡ್ಡ ಕಡುಬಿನಷ್ಟು
ಹಾಡಿ ಕುಣಿಯತೀವಿ ನಿನ್ನ ಮುಂದ ॥ ಸ್ವಾಮಿ

## ಹಾಕಮ್ಮ ಗಂಟು

(ಕಿಟ್ಟಿಯ ಆಗಮನ. ಅತ್ತಿತ್ತ ನೋಡಿ ಕಂಬಳಿ ಹೊದ್ದು ಮಲಗುತ್ತಾನೆ. ಅಜ್ಜಿ ಅದು ಇದು ಕೆಲಸ ಮಾಡುತ್ತ ಬರುತ್ತಾಳೆ.)

ಅಜ್ಜಿ : ಏ ಕಿಟ್ಟೀ, ಏಳೊ ಮೇಲೇಳೊ. ಏಳೊ ಅಂದರೆ ಏಳಬೇಕು. ಸ್ಕೂಲಿಗೆ ಹೊತ್ತಾಗೋಯ್ತು. ಏಳೋ ಅಂದ್ರೆ.

ಸೂತ್ರಧಾರ: (ಆಗಮಿಸಿ) ಇದೇನು ? ನಾನು ಬರೋದರೊಳಗೇ ನಾಟಕ ಸುರು ವಾಗಿಬಿಟ್ಟಿದೆ ! ಯಾರು ಈ ಮುದುಕಮ್ಮ ? ಯಾರನ್ನ ಎಬ್ಬಿಸ್ತಿದಾಳೆ ? ಏ ಏ ಮುದುಕಮ್ಮ, ತಡಿ ತಡಿ. ಏನಿದು ? ನಾನು ಬರೋದರೊಳಗೇ ನಾಟಕ ಸುರು ಮಾಡೋದೆ ? ಹೇಳಿಲ್ಲಾ ನಿನಗೆ ? ಶಾಸ್ತ್ರದ ಪ್ರಕಾರ ನಾಟಕ ಸುರುವಾಗಬೇಕು. ಆಮೇಲೆ ನಿನ್ನ ಪ್ರವೇಶ ಅಂತ ? ಈ ಮುದಿಕೇರ ಹಣೇಬರಾನೆ ಇಷ್ಟು. ಈಗ ಮೊದಲು ನನ್ನ ಮಾತಿದೆ. ಸ್ವಲ್ಪ ಆಚೆ ಹೋಗ್ತೀಯಾ ?

ಅಜ್ಜಿ : ಯಾರೋ ತಮ್ಮಾ ನೀನು ?

ಭಾಗವತ : ನಾನು ಯಾರು ? ಇದೊಳ್ಳೆದಾಯ್ತಲ್ಲ, ನಾನು ಭಾಗವತ. ರಂಗದ ಮೇಲೆ ನಿಮ್ಮಂಥವರು ಬರ್ತೀರಲ್ಲ, ನಿಮ್ಮನ್ನ ಈ ಪ್ರೇಕ್ಷಕರಿಗೆ ಪರಿಚಯ ಮಾಡಿಸಬೇಕು. ನಮ್ಮ ಆಟದ ವಿಷಯ ಹೇಳಬೇಕು. ಅದು ಬಿಟ್ಟು ಯಾರಂತ ನನ್ನೇ ಕೇಳ್ತಿದ್ದೀಯಾ ! ಬಲೇ ಮುದುಕಿ ನೀನು ! ಸ್ವಲ್ಪ ಆಚೆ ಹೊಗ್ತೀಯಾ ?

ಅಜ್ಜಿ : ಯಾವನಯ್ಯಾ ನೀನು ? ನನ್ನ ಮನೆ, ನನ್ನ ಮೊಮ್ಮಗ, ನನ್ನ ಮಾತು. ನನಗೇ ಆಚೆ ಹೋಗಂತೀಯಾ. ನನ್ನ ಯಜಮಾನ ಕೂಡ ಹಾಗ್ಹೇಳಲಿಲ್ಲ.

ಭಾಗವತ : ಓಹೊ ! ಈ ಪಾತ್ರಗಳಿಗೆಲ್ಲಾ ಆಗಲೇ ಜೀವ ಬಂದುಬಿಟ್ಟದೆ. ಇವನ್ನೀಗ ಕಂಟ್ರೋಲ್ ಮಾಡೋದೇ ಕಷ್ಟ. ಆಯ್ತಮ್ಮಾ ನಾನು ಭಾಷಣಾ ಮಾಡೋದಿಲ್ಲ, ಒಂದೆರಡು ಮಾತು ಹೇಳ್ತೀನಿ. ಸ್ವಲ್ಪ ತೆಪ್ಪ ಗಿರ್ತೀಯಾ ?

ಅಜ್ಜಿ : ಅದೇನೊ ಬೇಗನೆ ಮುಗಸು. ನಾನು ಇಷ್ಟರಲ್ಲೇ ಬರತೇನೆ.

(ಹೋಗುವಳು)

ಭಾಗವತ: ಪ್ರೇಕ್ಷಕ ಮಕ್ಕಳಲ್ಲಿ ವಿಜ್ಞಾಪನೆ. ಈ ಹೊತ್ತು ನಾವು ಆಡೋ ಆಟ ಕಿಟ್ಟೀ ಕಥೆ. ಕಿಟ್ಟೀ ನಿಮ್ಮ ಹಾಗೇ ಒಬ್ಬ ಹುಡುಗ. ವಯಸ್ಸು ಎಷ್ಟೋ ಇರಬಹುದು. ಮದುವೆ ವಯಸ್ಸಂತೂ ಖಂಡಿತ ಅಲ್ಲ, ಬೇಕಾದರೆ ನೀವೇ ನೋಡಿ—ಎಲ್ಲಿ ಕಿಟ್ಟೀ, ಕಿಟ್ಟೀ, ಏ ಕಿಟ್ಟೀ—

ಕಿಟ್ಟಿ : (ಮಲಗಿಕೊಂಡೇ) ಏನು ಭಾಗವತರೇ ?

ಭಾಗವತ : ಅಪಾ, ನೀನು ನಮ್ಮ ಕಥಾನಾಯಕ. ಆಟದ ಆರಂಭದಲ್ಲಿ ನಮ್ಮ ಪ್ರೇಕ್ಷಕರಿಗೆ ನಿನ್ನ ಪರಿಚಯ ಮಾಡಿಕೊಡಬೇಕು. ಈಚೆ ಬರತೀಯಾ ?

ಕಿಟ್ಟಿ : ನಮ್ಮಜ್ಜಿ ಇಲ್ಲ ತಾನೆ ?

ಭಾಗವತ: ಯಾಕೆ ಹೆದರಿದೆಯಾ ?

ಕಿಟ್ಟಿ : (ಎದ್ದು ಬಂದು) ಹೆದರಲಿಲ್ಲ ಭಾಗವತರೇ, ರೇಗಿಕೊಂಡು ಎದ್ದು ಬಂದೆ !

ಭಾಗವತ: ರೇಗಿಕೊಂಡು ? ಯಾರ ಮೇಲೆ ?

ಕಿಟ್ಟಿ : ನಿಮ್ಮ ಮೇಲೆ.

ಭಾಗವತ: ನನ್ನ ಮೇಲೆ ? ಅದ್ಯಾಕಪ್ಪ ?

ಕಿಟ್ಟಿ : ನಿಮಗೆ ನನ್ನ ಮದುವೆ ಮಾಡಬೇಕೊಂತ ಇಷ್ಟಾನಾ ?

ಭಾಗವತ: ಛೀ ಛೀ, ನಾನೂ ಗಂಡಸಲ್ವೇನಪ್ಪಾ ನಿನ್ನ ಹಾಗೆ.

ಕಿಟ್ಟಿ : ಮತ್ತೆ, ನನಗೆ ಮದುವೆ ವಯಸ್ಸಾಗಿಲ್ಲ ಅಂದಿರಿ. ನನಗೆ ಮದುವೆ ವಯಸ್ಸಾಗಿಲ್ಲ ಅಂತ ನಿಮಗೆ ಹ್ಯಾಗೆ ಗೊತ್ತಾಯ್ತು?

ಭಾಗವತ: ನೋಡಿದರೇ ತಿಳಿಯುತ್ತಲ್ಲ. ಮೀಸೆ ಮೂಡಿಲ್ಲ. ಗಡ್ಡ ಬಂದಿಲ್ಲ.

ಕಿಟ್ಟಿ : ಭಾಗವತರೇ, ಇಲ್ಲಿ ನೋಡಿ, ಮೆಣಸಿನಕಾಯಿ ಚಿಕ್ಕದಾದರೂ ಖಾರ ಕಡಿಮೆ ಇರತ್ತಾ?

ಭಾಗವತ: ಇಲ್ಲಸಾ, ಇಲ್ಲ.

ಕಿಟ್ಟಿ : ನನಗಲ್ಲ, ನನಗೆ ವಯಸ್ಸಾಗಿಲ್ಲ ಅಂದ್ರೆಲ್ಲಾ, ಆ ನಿಮ್ಮ ಪ್ರೇಕ್ಷಕರಿಗೆ ಹೇಳಿಕೊಳ್ಳಿ. (ಹೋಗಿ ಮಲಗುವನು)

ಭಾಗವತ: ಎಲಾ ಇವನ!

ಅಜ್ಜಿ : (ಬಂದು) ಏ ಕಿಟ್ಟೀ, ಏಳೋ ಮೇಲೇಳೊ. ಏಳೊಂದ್ರೆ ಏಳಬೇಕು. ಏಳ್ರಾಜಾ, ಏಳೂ ಜಾಣಾ—ಅಯ್ಯೊ ಈ ಹುಡುಗನ್ನ ಏನ್ಮಾಡಿ ಎಬ್ಬಿಸಲಿ? ಏ ಕಿಟ್ಟಿ, ಏಳ್ತಿಯೊ? ಹಿರಿಯರನ್ನ ಕರಸಲೊ...? ಅಯ್ಯೋ ಭಾಗವತರೇ,

ಭಾಗವತ: ಏನಮ್ಮಾ ಕರದೆ?

ಅಜ್ಜಿ : ನನ್ನ ಮೊಮ್ಮಗ ಕಿಟ್ಟಿ, ನಿನ್ನೆಯಿಂದ ಒಂದ ಮಾತಾಡಿಲ್ಲ. ಒಂದ ನಕ್ಕಿಲ್ಲ, ಒಂದ ಉಂಡಿಲ್ಲ, ತಿಂದಿಲ್ಲ. ಸುಮ್ಮನೆ ಮಲಗಿಬಿಟ್ಟಿದಾನೆ. ನೀವಾದರೂ ಎಬ್ಬಿಸಿ ಉಪಕಾರ ಮಾಡತೀರಾ?

ಭಾಗವತ: ಓಹೊ! ನಿನ್ನೆಯಿಂದ ಹೀಗೇ ಬಿದ್ದುಕೊಂಡಿದಾನಾ?

ಅಜ್ಜಿ : ಹೂ.

ಭಾಗವತ: ಹಾಗಿದ್ದರೆ ಈ ಕೇಸು ಭಾಳಾ ಸೀರಿಯಸ್ಸು. ಅಲ್ಲಮ್ಮಾ ಯಾಕೆ ಹೀಗೆ ಮಲಗಿದಾನಂತೆ?

ಅಜ್ಜಿ : ಆತ ಹೇಳಿದರಲ್ಲವೆ?

ಭಾಗವತ: ಏನಾದರೂ ತಿಂಡಿ ಕೇಳಿದ್ನಾ?

ಅಜ್ಜಿ : ಇಲ್ಲಾ.

ಭಾಗವತ: ಏನಾದರೂ ಆಟಿಗೆ ಬೇಡಿ ಅತ್ತನಾ?

ಅಜ್ಜಿ : ಇಲ್ಲಾ.

ಭಾಗವತ: ಯಾರ ಜೊತೆಗಾದರೂ ಜಗಳ ಆಡಿದ್ನಾ?

ಅಜ್ಜಿ : ಇಲ್ಲಾ.

ಭಾಗವತ : ತಿಂಡೀ ಕೇಳಿಲ್ಲಾ, ಆಟಿಗೆ ಬೇಡಿಲ್ಲಾ, ಜಗಳ ಆಡಿಲ್ಲ…ತಾಯೀ ಈತನಿಗೆ ಮದುವೆ ಮಾಡಿದ್ದೀಯಾ ?

ಕಿಟ್ಟಿ : (ಮೇಲೆದ್ದು) ಕೇಳಿ ಭಾಗವತರೇ, ಅದನ್ನ ಮಾಡಿದಾಳೇನು ಕೇಳಿ.

ಭಾಗವತ : ಏನನ್ನ ?

ಕಿಟ್ಟಿ : ನೀವಾಗಲೇ ಏನೋ ಅಂದಿರಲ್ಲ, ಅದನ್ನ.

ಭಾಗವತ : ಅಂದರೆ, ಮದುವೇನಾ ?

ಕಿಟ್ಟಿ : ಹೂ ಹೂ. ಅದನ್ನ ಮಾಡಿದಾಳೇನು ಕೇಳಿ.

ಅಜ್ಜಿ : ಅಯ್ಯೊ ಶಿವನೆ ! ನಿನ್ನಂಥಾ ಚಿಕ್ಕವನಿಗೆ ಮದುವೇನಾ ?

ಕಿಟ್ಟಿ : ನಾನು ಚಿಕ್ಕವನೊ ದೊಡ್ಡವನೊ ! ಅದನ್ನ ಹೇಳೋಳು ನನ್ನ ಹೆಂಡತಿ, ನೀವಲ್ಲ.

ಭಾಗವತ : ಏನು ಕಲಿಕಾಲ ಬಂತಪ್ಪ ?

ಕಿಟ್ಟಿ : ಏನ್ರಿ ಕಲಿಕಾಲ ಅಂತೀರಿ. ಕಲಿಕಾಲ್ದಲ್ಲಿ ಯಾರೂ ಮದುವೇನೇ ಆಗಬಾರದಾ ? 'ಬೆಳದ ನಿಂತಿದಾನೆ, ಮದುವೆ ಮಾಡಮ್ಮಾ' ಅಂತ ಹೇಳೋದ ಬಿಟ್ಟು, ಏನೇನೋ ಹೇಳ್ತೀರಾ. ಅಜ್ಜೀ, ಮಾಡಜ್ಜಿ ಮದುವೆ.

ಅಜ್ಜಿ : ಛೀ ಛೀ—

ಕಿಟ್ಟಿ : ಅಜ್ಜೀ—

ಅಜ್ಜಿ : ಬಾಬ್ಬಾಬ್ಬಾ ! ಇನ್ನೂ ಚಿಗರ ಮೀಸೆ ಮೂಡಿಲ್ಲಾ—

ಕಿಟ : ಅಜ್ಜೀ—

ಅಜ್ಜೀ ಅಜ್ಜೀ ಹುಡಿಗಿ ಬೇಕು
ನನಗೆ ಮದುವೆ ಮಾಡಬೇಕು ॥

ಹಾಕಮ್ಮ ಗಂಟು
ಭಾರೀ ಅರ್ಜೆಂಟು.
ಮೀಸೆ ಮೂಡಿಲ್ಲಾಂತ ಹೇಳ ಬೇಡ ಕುಂಟನೆಪ ॥
ನಿಂತೇನೆ ಉದ್ದಾ.
ಎದೀ ತನಕಾ ಬೆಳದಾ
ಮೀಸೆ ಮೂಡಿಲ್ಲಾಂತ ಹೇಳಬ್ಯಾಡ ಕುಂಟನೆಪ ॥

ಕೇಳಿ ಬಂತಾ ಅಜ್ಜೀ—

ಅಜ್ಜಿ : ಸಾಧ್ಯವೆ ?

ಭಾಗವತ: ಸಾಧ್ಯವೆ?

ಕಿಟ್ಟಿ : ನಿಮ್ಮಿಬ್ಬರಿಗೂ ಬುದ್ಧಿಯಿಲ್ಲಾಂತ ಹೇಳೋದೇ ಇದಕ್ಕಾಗಿ. ಭಾಗವತರೇ ನಿನ್ನೆ ಏನಾಯ್ತು ಗೊತ್ತಾ?

ಭಾಗವತ: ಇಲ್ಲಪಾ.

ಕಿಟ್ಟಿ : ಚಿನ್ನಿದಾಂಡ ಆಡ್ತಿದ್ದೆ, ಮಕ್ಕಳೊಂದಿಗೆ.

ಭಾಗವತ: ನಿನ್ನ ಮಕ್ಕಳೊಂದಿಗಾ?

ಕಿಟ್ಟಿ : ಬೇರೆಯವರ ಮಕ್ಕಳೊಂದಿಗೆ. ಆಗ ಚಿನ್ನೀ ಹೊಡೆದೆ. ಹೋಗಿ ಒಬ್ಬ ಹೆಂಗಸಿನ ತಲೆಗೆ ಹೊಡೀತು. ಅವಳು ಬಿರಿ ಬಿರೀ ಹೀಗೆ ಬಂದ್ಲು. ಏನಂದ್ಲು ಗೊತ್ತಾ?

ಅಜ್ಜಿ : ಏನಂದ್ಲು?

ಕಿಟ್ಟಿ : ಹೇಳಜ್ಜಿ ನೋಡೋಣ; ಏನಂದಿರಬೇಕು?

ಅಜ್ಜಿ : 'ಹೋಗೊ ಬರೋ ಜನ ನೋಡಿ ಚಿನ್ನಿದಾಂಡ ಆಡಬೇಕು ಮಗಾ'— ಅಂದಿರಬೇಕು.

ಕಿಟ್ಟಿ : ಊಹೂ, ನೀವ್ಹೇಳಿ ಭಾಗವತರೇ ನೋಡೋಣ, ಏನಂದಿರಬೇಕು?

ಭಾಗವತ: 'ರಸ್ತೆ ಮೇಲಲ್ಲ, ಬಯಲಲ್ಲಿ ಚಿನ್ನಿದಾಂಡ ಆಡಬೇಕಪಾ'—ಅಂದಿರಬೇಕು.

ಕಿಟ್ಟಿ : ಅದಕ್ಕೇ ನಿಮ್ಮಿಬ್ಬರಿಗೂ ಬುದ್ಧಿಯಿಲ್ಲಾ ಅಂತ ಅಂದದ್ದು. ಏನಂದ್ಲು ಗೊತ್ತಾ? ಹೀಗೆ ಬಿರಿ ಬಿರಿ ನನ್ನ ಹತ್ತಿರ ಬಂದ್ಲು. 'ಲೋ ಹುಚ್ಚ ಮುಂಡೇ ಗಂಡಾ, ಇಷ್ಟುದ್ದ ಬೆಳದ ನಿಂತೀಯಾ, ಸಕಾಲದಲ್ಲಿ ಮದುವೆ ಆಗಿದ್ದರೆ ಇಷ್ಟೊಂದ ಜನ ಮಕ್ಕಳ ತಂದೆ ಆಗತಿದ್ದೆ, ನಾಚಿಕೆ ಇಲ್ಲಾ? ಯಾರೋ ನಿನ್ನ ಬೆಳೆಸಿದವರು? ಜೋಪಾನ ಮಾಡಿದವರು? ಅವರಿಗಾದರೂ ಮಾನ ಇಲ್ಲಾ? ಮರ್ಯಾದೆ ಇಲ್ಲಾ?' —

ಅಜ್ಜಿ : ಅಂದಳಾ?

ಕಿಟ್ಟಿ : ಹೂ. ಹೀಗೆ ಅಂದ್ಲು.

ಅಜ್ಜಿ : ಅಯ್ಯೋ ಶಿವನೆ, ನನ್ನ ಮಾನ ಮರ್ಯಾದೆಯೆಲ್ಲಾ ಹೋಯ್ತಲ್ಲೊ!

ಕಿಟ್ಟಿ : ಕೂಡಲೇ ನನಗೊಂದು ಮದುವೆ ಮಾಡು. ನಿನಗೂ ಮಾನ ಮರ್ಯಾದೆ ಇದೆ ಅಂತ ಹುಡಿಕ್ಕೊಂಡ ಹೋಗಿ, ಹೇಳಿ ಬರ್ತೀನಿ.

ಅಜ್ಜಿ : ಅಯ್ಯೋ ಶಿವನೆ! ತಂದೆ ತಾಯಿ ಇಲ್ಲದ ನಿನ್ನನ್ನ ಇಷ್ಟೊಂದು ಕಷ್ಟ ಪಟ್ಟು ಬೆಳಸಿದ್ದೆಲ್ಲಾ ವ್ಯರ್ಥವಾಯ್ತಲ್ಲೊ!

ಕಿಟ್ಟಿ : ಅದಕ್ಕೇ ಈಗೊಂದು ಮದುವೆ ಮಾಡು, ಎಲ್ಲಾ ಸಾರ್ಥಕವಾಗತದೆ.

ಅಜ್ಜಿ : ಮದುವೆಗೆ ಈಗಿನ ಕಾಲದಲ್ಲಿ ಹತ್ತು ಸಾವಿರ ರೂಪಾಯಿನಾದರೂ ಬೇಕು. ಎಲ್ಲಿಂದ ತರಲಿ ?

ಕಿಟ್ಟಿ : ಅದ್ಯಾಕಜ್ಜಿ ಯೋಚನೆ ಮಾಡ್ತಿ ? ನನ್ನ ಹತ್ತಿರ ಹತ್ತು ಪೈಸೆ ಇದೆ. ಒಂದ ಪೈಸೆ ವಧುವಿನ ಸೀರೆ, ಒಂದ ಪೈಸೆ ನನ್ನ ಬಟ್ಟೆ, ಒಂದ ಪೈಸೆ ಊಟ, ಒಂದ ಪೈಸೆ ಪುರೋಹಿತರ ಫೀಜು, ಒಂದು ಪೈಸೆ ಹಾಸಿಗೆ,— ಹತ್ತರಲ್ಲಿ ಇನ್ನೆಷ್ಟು ಉಳೀತು ಭಾಗವತರೇ ?

ಭಾಗವತ : ಓ ಇನ್ನೂ ಐದು ಪೈಸೆ ಉಳಿಯಿತು.

ಕಿಟ್ಟಿ : ಅದನ್ನ ನನ್ನ ಹೆಸರಲ್ಲಿ ಬ್ಯಾಂಕಿನಲ್ಲಿಟ್ಟುಬಿಡಿ.

ಭಾಗವತ : ಮತ್ತೆ ಹುಡಿಗಿ ?

ಕಿಟ್ಟಿ : ಅದೇನು ಮಹಾ ! ಯಾವುದಾದರು ಕಾಲೇಜ ಕಡೆ ಹೋದರೆ ಯದ್ವಾ ತದ್ವಾ ಹುಡಿಗೀರು ಸಿಗತಾರೆ !

ಅಜ್ಜಿ : ಹತ್ತ ಪೈಸಾದಲ್ಲಿ ಮದುವೆ ! ಭಾಗವತರೇ ಇರೋನೊಬ್ಬ ಮೊಮ್ಮಗ— ಅವನಿಗೋ ಮದುವೆ ಹುಚ್ಚು ನೆತ್ತಿಗೇರಿಬಿಟ್ಟದೆ, ಏನು ಮಾಡೋದು ?

ಕಿಟ್ಟಿ : ಮದುವೆ.

ಅಜ್ಜಿ : ಭಾಗವತರೇ,

ಭಾಗವತ : ಏನಜ್ಜಿ ?

ಅಜ್ಜಿ : ಏನ್ಮಾಡೋದು ಅಂತ ನಿಮ್ಮನ್ನ ಕೇಳಿದೆ.

ಭಾಗವತ : ಹೇಳ್ತೀನಲ್ಲಾ ಮದುವೆ ಅಂತ.

ಕಿಟ್ಟಿ : ಅಜ್ಜಿ ನನಗಿದೆಲ್ಲಾ ಸರಿಬರೋದಿಲ್ಲ. ನೀನೇನು ಈ ಹತ್ತ ಪೈಸಾದಲ್ಲಿ ಮದುವೆ ಮಾಡ್ತೀಯೊ, ಅಥವಾ ನಾನೇ ಮಾಡಿಕೊಂಡ ಬರಲೊ ?

ಅಜ್ಜಿ : ಇವನ ಮಾತ ಕೇಳಿ ನನಗೂ ಹುಚ್ಚು ಹತ್ತತಾ ಇದೆಯಲ್ಲ ಭಾಗವತರೇ !-

ಕಿಟ್ಟಿ : ಸರಿ ಸರಿ. ಈ ಹತ್ತು ಪೈಸಾದಲ್ಲೇ ಮದುವೆ ಮಾಡಿಕೊಂಡು ಬರ್ತೀನಿ ನೋಡ್ತಾ ಇರಿ.

(ಭಾಗವತ, ಅಜ್ಜಿ 'ಕಿಟ್ಟೀ ಕಿಟ್ಟೀ ತಡೆಯೋ' ಎನ್ನುತ್ತಿರುವಂತೆ ಹೋಗುವನು.)

## ಸಣ್ಣ ದೇವರು

(ಒಂದೂರಿನ ಪೇಟೆ, ಮಡಕೆ ಮಾರುವ ಕುಂಬಾರ್ತಿ, ಅಕ್ಕಿ ಮಾರುವ ಶೆಟ್ಟಿ ಕುಣಿಯುತ್ತ ಬರುತ್ತಾರೆ. ಪರಸ್ಪರ ನೋಡುತ್ತ, ನಗುತ್ತ ಒಲವು ಸೂಚಿಸುತ್ತಾರೆ.)

ಕುಂಬಾರ್ತಿ: ಮಡಕೆ ಬೇಕೆ ಮಡಕೆ ಬೇಕೆ
ಮಡಕೆ ಬೇಕೆ?

ಶೆಟ್ಟಿ : ಅಕ್ಕಿ ಬೇಕೆ ಅಕ್ಕಿ ಬೇಕೆ
ಅಕ್ಕೀ ಬೇಕೆ?

ಕುಂಬಾರ್ತಿ: ಒಡೆದೇನಂದರ ಒಡೆಯೋದಿಲ್ಲ
ಮುರಿದೇನಂದರ ಮುರಿಯೋದಿಲ್ಲ
ಹೊಚ್ಚ ಹೊಸ ಮಣ್ಣಿನಾ ಮಡಕೆ ॥

ಶೆಟ್ಟಿ : ಬಂಗಾರ ಕಡ್ಡಿ ಬೆಳ್ಳೀ ಬಣ್ಣ
ಕೋಲಾರಕ್ಕಿ ಸಣ್ಣ ಸಣ್ಣ
ಇಂದಿರ ಭೋಗ ಏನ ರುಚಿಯನ್ನ ॥

ಕಿಟ್ಟಿ : (ಪ್ರವೇಶಿಸಿ) ಅಯ್ಯೋ, ಯಾವೂರಪ್ಪಾ ಇದು? ಹಸಿವಾಗ್ತಾ ಇದೆ. ಊಟಾಮಾಡಿ ಸಿಟ್ಟ ಮಾಡಬೇಕಿತ್ತು. ಹಾಳದ್ದು ಊಟಾಮಾಡಿದರೆ, ನಾ ಸಿಟ್ಟ ಮಾಡಿದ್ದೂ ಅಜ್ಜಿಗೆ ತಿಳಿಯೋದೆ ಇಲ್ಲ. ಈಗೇನ್ಮಾಡ್ಲಿ?

ಕುಂಬಾರ್ತಿ: ಮಡಕೆ ಬೇಕೆ, ಮಡಕೆ?

ಶೆಟ್ಟಿ : ಅಕ್ಕಿ ಬೇಕೆ, ಅಕ್ಕಿ?

ಕಿಟ್ಟಿ : ಅಮ್ಮಾ, ಈ ಮಡಕೆ ಬೆಲೆ ಎಷ್ಟು?

ಕುಂಬಾರ್ತಿ: ಅದಕ್ಕೆ ಐದು ರೂಪಾಯಿ.

ಕಿಟ್ಟಿ : ಇದಕ್ಕೆ?

ಕುಂಬಾರ್ತಿ: ಹತ್ತು ರೂಪಾಯಿ.

ಕಿಟ್ಟಿ : ಇದಕ್ಕೆ ಅಬ್ಬಬ್ಬಾ ಅಂದು ಐದ ಪೈಸಾ ಕೊಡತೇನೆ, ಕೊಡತೀಯಾ?

ಕುಂಬಾರ್ತಿ: ನೀನೆಂಥ ವ್ಯಾಪಾರ ಮಾಡ್ತಿ ತಗಿ ತಗಿಯೊ. ಹತ್ತು ರೂಪಾಯಿ ಮಡಕೆಗೆ ಐದ ಪೈಸಾ ಕೊಡತಾನಂತೆ. ಪಾಪ ಪುಟ್ಟ ಹುಡುಗ!

ಕಿಟ್ಟಿ : ನೋಡಮ್ಮಾ, ಮಡಕೆ ಕೊಟ್ಟರೆ ಕೊಡು ಬಿಟ್ಟರೆ ಬಿಡು, ನನಗೆ ಪುಟ್ಟ ಹುಡುಗಾ ಅಂತ ಮಾತ್ರ ಹೇಳಬ್ಯಾಡ. ಸಕಾಲದಲ್ಲಿ ಮದುವೆ ಆಗಿದ್ದರೆ ನನಗೂ ನಿನ್ನ ವಯಸ್ಸಿನ ಮಗಳಿರುತ್ತಿದ್ಲು.

ಕುಂಬಾರ್ತಿ: ಅವಯ್ಯಾ! ಆಯ್ತುಸಾ, ಚೆಲುವಾ ಅನ್ನಲಾ?

ಕಿಟ್ಟಿ : ಆಗಬಹುದು.

ಕುಂಬಾರ್ತಿ: ಚೆಲುವಾ, ಐದ ಪೈಸೆಗೆ ಮಡಕೆ ಬರೋದಿಲ್ಲಪ.

ಶೆಟ್ಟಿ : ಮಡಕೆ ಏನ್ಮಾಡ್ತಿ? ಅಕ್ಕಿ ತಗೊ ಅಕ್ಕಿ.

ಕಿಟ್ಟಿ : ಶೆಟ್ಟಿ, ಅಬ್ಬುಬ್ಬಾ ಅಂದು ಐದ ಪೈಸೆ ಕೊಡತೇನೆ, ಒಂದು ಕೇಜಿ ಅಕ್ಕಿ ಕೊಡತೀಯಾ?

ಶೆಟ್ಟಿ : ಯಾವನಪ್ಪ ಅವನು? ಐದ ಪೈಸೆಗೆ ಕೇಜಿ ಅಕ್ಕಿ ಕೇಳ್ತಾನೆ? ಯಾವನೋ ಪುಟ್ಟ ಹುಡುಗ, ಪಾಪ!

ಕಿಟ್ಟಿ : ಶೆಟ್ಟಿ, ಅಕ್ಕಿ ಕೊಡು ಬಿಡು, ಪುಟ್ಟ ಹುಡುಗಾ ಅಂತ ಮಾತ್ರ ಹೇಳ ಬೇಡ. ನನಗೂ ಸಕಾಲದಲ್ಲಿ ಮಕ್ಕಳಾಗಿದ್ದರೆ ನಿನ್ನಂಥಾ ಮಗ ಇರತಿದ್ದ.

ಶೆಟ್ಟಿ : ಎಲಾ ಇವನಾ! ಇನ್ನೇನಪ್ಪಾ, ನಿನಗೆ ತಾತಾ ಅನ್ನಲಾ?

ಕಿಟ್ಟಿ : ಆಗಬಹುದು.

ಶೆಟ್ಟಿ : ತಾತಾ, ಐದ ಪೈಸೆಗೆ ಅಕ್ಕಿ ಬರೋದಿಲ್ಲ, ಹೊರಟ್ಹೋಗು. ತಾತ! ನನ್ನ ತಾತ!

ಕುಂಬಾರ್ತಿ: ಚೆಲುವ! ಘನ ಚೆಲುವ!

(ಹಿಂದೆ ಸರಿಯುತ್ತ ಇಬ್ಬರೂ ಪರಸ್ಪರ)

ಶೆಟ್ಟಿ : ನನ್ನ ತಾತ ಅವನು!

ಕುಂಬಾರ್ತಿ: ಪಾಪ ಯಾವೂರ ಹುಡುಗನೋ! ತಪ್ಪಿಸಿಕೊಂಡು ಬಂದಿದಾನೋ ಏನೋ?

ಶೆಟ್ಟಿ : ಯಾವೂರಪ್ಪ ನಿಂದು?

ಕಿಟ್ಟಿ : ಮೇಲ್ಗಡೆ ಊರಿಂದ ಬಂದೆ.

ಶೆಟ್ಟಿ : ಮೇಲ್ಗಡೆ ಊರು? ಅದೇನೋ ಕೈಲಾಸ, ವೈಕುಂಠ ಅಂತಾರೆ ಆ ಊರಾ?

ಕುಂಬಾರ್ತಿ: ಮೇಲ್ಗಡೆ ಊರು? ಅದೇನೋ ಸ್ವರ್ಗ ಗಿರ್ಗ ಅಂತಾರೆ ಆ ಊರೇನಪ್ಪಾ?

ಕಿಟ್ಟಿ : ಹೌದು.

ಶೆಟ್ಟಿ : ಆ ಏನಂದೆ? ಕೈಲಾಸದವನ? ಅಯ್ಯಾ ತಾತ, ನನ್ನ ಯಜಮಾನಿ ಮೇಲೆ ಹೋಗಿ ಐದಾರು ವರ್ಷ ಆಯ್ತು. ಅವಳನ್ನೇನಾದರೂ ನೋಡಿದಿಯಾ?

ಕಿಟ್ಟಿ : (ಬದಿಗೆ ಕರೆದು) ಒಂದು ಮೂಗಿದೆ, ಎರಡು ಕಣ್ಣಿವೆ, ಒಂದೇ ತಲೆ ಇದೆ, ಸೀರೆ ಉಟ್ಟಾಳೆ, ಅವಳೇ ತಾನೆ?

ಶೆಟ್ಟಿ : ಹಾ ಹಾ ಅವಳೇ ಕಣಪ್ಪ, ನೋಡಿದಿಯಾ ?

ಕಿಟ್ಟಿ : ಅಯ್ಯೊ, ನೋಡದೇನು? ದಿನಾಲು ಶೆಟ್ಟಜ್ಜಿ–ಶೆಟ್ಟಜ್ಜಿ ಅಂತ ಎಷ್ಟೊಂದ ಆಟ ಆಡತೇನೆ, ಆಕೆ ಜೊತೆ.

ಶೆಟ್ಟಿ : ಅಯ್ಯೊ ಅಯ್ಯೊ ! ನೋಡಿದಿಯಾ ? ಅವಳ ಜೊತೆ ದಿನಾಲು ಆಟ ಆಡ್ತೀಯಾ ? ಕೇಳಿದೆಯೇನೇ ಕುಂಬಾರ್ತಿ, ಈ ತಾತ ನನ್ನ ಹೆಂಡತೀನ್ನ ದಿನಾಲು ನೋಡಿದಾನಂತೆ ಕೈಲಾಸದಲ್ಲಿ ! ಹ್ಯಾಗಿದಾಳೆ? ದಿನಾಲು ನನ್ನ ನೆನಪಿಸಿಕೊಳ್ತಾಳಾ ?

ಕಿಟ್ಟಿ : ಅದ್ಯಾಕೋಪ್ಪಾ. ದೇವರ ಹತ್ತರ ಅದೇನೇನೊ ಗೊಣಗತಿದ್ಲು.

ಶೆಟ್ಟಿ : ದೇವರ ಹತ್ತರ? ಅದೇನಪ್ಪಾ ?

ಕಿಟ್ಟಿ : (ಪಕ್ಕಕ್ಕೊಯ್ದು) ನೀನೇನೊ ಇತ್ತೀಚೆ ನಿನ್ನ ಯಜಮಾನಿನ ಮರತು ಕುಂಬಾರ್ತಿನ್ನ ನೋಡಿ, ಹಲ್ಲ ಕಿಸೀತಿ ಅಂತೆ !

ಶೆಟ್ಟಿ : ಆ ? ಛೀ ಛೀ, ಶಿವ ಶಿವಾ ! ನಾನು ? (ಸ್ವಗತ) ಇದೂ ಅವಳಿಗೆ ಗೊತ್ತಾಗಿಬಿಟ್ಟಿತೆ ? (ಕುಂಬಾರ್ತಿಯನ್ನು ಗಮನಿಸಿ) ತಾತ, ನಿನ್ನ ಆಮೇಲೆ ನೋಡ್ತೀನೆ...ಅಕ್ಕಿ ಬೇಕಾದರೆ ತಗೊಂಡ್ಹೋಗು, ಹಾ.

ಕುಂಬಾರ್ತಿ: ಅಯ್ಯಾ ಚೆಲುವಾ, ನೀ ಸ್ವರ್ಗಾನೂ ನೋಡೀಯಾ ?

ಕಿಟ್ಟಿ : ಸ್ವರ್ಗ ಅಲ್ಲ ಅದು ಗಿರ್ಗ ಅಂತ.

ಕುಂಬಾರ್ತಿ: ಹಾ ಗಿರ್ಗ, ಏನಪಾ, ನನ್ನ ಯಜಮಾನ ಅಲ್ಲಿಗೆ ಹೋಗಿ ಹತ್ತು ವರ್ಷ ಆಯ್ತು. ಅವನ್ನೇನಾದರೂ ನೋಡೀಯಾ ?

ಕಿಟ್ಟಿ : (ಪಕ್ಕಕ್ಕೆ ಕರೆದುಕೊಂಡು ಹೋಗಿ) ಯಾವನು ಕುಂಬಾರ ತಾನೆ ?

ಕುಂಬಾರ್ತಿ: ಹೂ.

ಕಿಟ್ಟಿ : ಎರಡು ಕಿವಿ ಇವೆ, ಎರಡು ಕಣ್ಣು, ಒಂದು ಮೂಗು, ಆದರೆ ಒಂದೇ ಬಾಯಿ, ಧೋತರ ಉಡತಾನಲ್ಲ ?

ಕುಂಬಾರ್ತಿ: ಅಯ್ಯೊ ಅಯ್ಯೊ ! ಅವನೇ ಕಣಪ್ಪ, ಮಾರಾಯ ನನ್ನೊಬ್ಬಳನ್ನೇ ಬಿಟ್ಟುಹೋದ. ಹ್ಯಾಗಿದಾನೆ ? ನನ್ನ ನೆನಪಿಸಿಕೊಳ್ತಾನಾ ?

ಕಿಟ್ಟಿ : ಅದೇನೋಮ್ಮ ಯಾಕೋ ಚಡಪಡಿಸ್ತಿದ್ದ ದೇವರ ಹತ್ತರ.

ಕುಂಬಾರ್ತಿ: ದೇವರ ಹತ್ತಿರ ಚಡಪಡಿಸ್ತಿದ್ದ ? ಯಾಕೆ ?

ಕಿಟ್ಟಿ : ನೀನೇನೊ ಕುಂಬಾರನ್ನ ಮರೆತು ಶೆಟ್ಟೀನ ನೋಡ್ತಾ ಇದ್ದೀಯಂತೆ !

ಕುಂಬಾರ್ತಿ: (ಸ್ವಗತ) ಆಂ ? ಅಯ್ಯೊ ನನ್ನ ಶಿವನೆ ! ನಾನು ? ಇದೂ ಅವನಿಗೆ ಗೊತ್ತಾಗಿಬಿಡ್ತೋದೆ ? (ಶೆಟ್ಟಿಯನ್ನು ಗಮನಿಸಿ) ಅಯ್ಯೊ ಚೆಲುವಾ

ನಾನು ಆಮೇಲೆ ಬಂದ ನೋಡತೇನೆ. ಬೇಕಾದರೆ ಐದ ಪೈಸೆಗೇ ಮಡಕೆ ತಗೊಂಡ್ಹೋಗು, ಹಾ?

ಶೆಟ್ಟಿ : ತಾತ, ಅದಕ್ಕೆ ದೇವರು ಏನ್ಹೇಳಿದಾ?

ಕುಂಬಾರ್ತಿ: ಹಾ ಅಂದ್ಹಾಗೆ ದೇವರು ಏನ್ಹೇಳಿದಾ?

ಕಿಟ್ಟಿ : ಏನ್ಹೇಳಿದಾ?

ಶೆಟ್ಟಿ, ಕುಂಬಾರ್ತಿ: ಹೂ ಹೂ ದೇವರು ಏನ್ಹೇಳಿದಾ?

ಕಿಟ್ಟಿ : ಏನೂ ಹೇಳಲಿಲ್ಲ.

ಶೆಟ್ಟಿ : ತಾತ, ನೀನೇ ದೇವರು ಅಂತಿಟ್ಟುಕೊ—ನೀ ಏನ ಹೇಳತಿ?

ಕುಂಬಾರ್ತಿ: ಹೇಳಪ್ಪಾ, ನೀನೇ ದೇವರು—ನೀ ಏನ ಹೇಳ್ತಿ, ಹೇಳು.

ಕಿಟ್ಟಿ : ನೀನು ಕುಂಬಾರ ಅಂತ ಹೆಸರಿಟ್ಟುಕೊಂಡು, ನೀನು ಶೆಟ್ಟಿಜ್ಜಿ ಅಂತ ಹೆಸರಿಟ್ಟುಕೊಂಡು ಮದುವೆಯಾಗಿರಿ ಅಷ್ಟೆ.

ಇಬ್ಬರೂ : ದೇವರು ಅಂದರೆ ನೀನಪ್ಪ. ನಿನ್ನ ಹಾಗಿರಬೇಕು. ನೀನೊಬ್ಬ ಸಣ್ಣ ದೇವರಪ್ಪ.

ಶೆಟ್ಟಿ : ತಗೊ ತಗೊ ಅಕ್ಕಿ.

ಕುಂಬಾರ್ತಿ: ತಗೊ ತಗೊ ಮಡಕೆ.

ಕಿಟ್ಟಿ : ತಗೊ ಐದ ಪೈಸಾ, ತಗೊ ಐದ ಪೈಸಾ.

ಶೆಟ್ಟಿ : ಬಾರೆ ನನ್ನ ಶೆಟ್ಟಿಜ್ಜಿ.

ಕುಂಬಾರ್ತಿ: ಬಾರೊ ನನ್ನ ಕುಂಬಾರ.

(ನಿರ್ಗಮನ)

## ಮಡಕೆ ಹೋಗಿ ಟಗರು ಬಂತು

(ಮಡಕೆ, ಅಕ್ಕಿ ಹಿಡಿದುಕೊಂಡು ಕುಣಿಯುತ್ತ ಕಿಟ್ಟಿ ಬರುತ್ತಾನೆ. ಮುದುಕಿಯೊಬ್ಬಳು ನೂಲುತ್ತ ಕುಳಿತಿದ್ದಾಳೆ. ಪಕ್ಕದಲ್ಲೇ ಟಗರು ಇದೆ.)

ಮೇಳ :
ಐದ ಪೈಸೆಗಕ್ಕಿ ಬಂತು ಲಾ ಲಾ ಲಾ
ಐದ ಪೈಸೆಗೆ ಮಡಕೆ ಬಂತು ಲಾ ಲಾ ಲಾ ॥

ಕಿಟ್ಟಿ : ಆಹಾ! ಈ ಟಗರು ಎಷ್ಟೊಂದ ಚೆನ್ನಾಗಿದೆ! ಎಷ್ಟು ಚೆನ್ನಾಗಿ ಹಾಡತದೆ. ಈ ಟಗರೇ ಇಷ್ಟು ಚೆನ್ನಾಗಿರಬೇಕಾದರೆ ಇದನ್ನ ಸಾಕಿದ

ಮುದಕಿ ಎಷ್ಟು ಒಳ್ಳೆಯವಳಿರಬೇಕು! ಟಿಗರಜ್ಜೀ ಟಿಗರಜ್ಜೀ, ಈ ಟಿಗರು ನಿಂದೇ ತಾನೆ?

ಮುದಿಕಿ : ಹೌದಪ್ಪ ಮಗಾ, ನಂದೇ

ಕಿಟ್ಟಿ : ನನಗ್ಗೊತ್ತಿತ್ತು. ಇಷ್ಟೊಂದು ಒಳ್ಳೆ ಟಿಗರು ನಿಂದೇ ಇರಬೇಕು ಅಂತ. ಇದಕ್ಕೆ ಮದುವೆ ಮಾಡಿಯಾ ಟಿಗರಜ್ಜಿ ?

ಮುದಿಕೆ : ಟಿಗರಿಗೆ ಮದುವೆ? ಒಳ್ಳೇ ಹುಡುಗ. ಇನ್ನೂ ಮಾಡಿಲ್ಲಪ. ಒಂದು ಹೆಣ್ಣು ಸಿಕ್ಕಿದ ಮೇಲೆ ಮಾಡೋಣಾಂತ ಬಿಟ್ಟಿದ್ದೇನೆ.

ಕಿಟ್ಟಿ : ಆಹಾ ಏನು ಬುದ್ಧಿವಂತಿಕೆ! ಏನು ತಿಳುವಳಿಕೆ! ಇಷ್ಟು ಬುದ್ಧಿ ನಮ್ಮಜ್ಜಿಗಿದ್ದಿದ್ದರೆ ಇಲ್ಲಿಗ್ಯಾಕೆ ಬರತಿದ್ದೆ! ನೀನೇ ನನಗೆ ಅನ್ನ ಬೇಯಿಸಸಲಿಕ್ಕೆ ತಕ್ಕವಳು. ನೋಡು ಟಿಗರಜ್ಜಿ, ಅಕ್ಕೀ ಇದೆ. ಮಡಕೆ ಇದೆ. ಸ್ವಲ್ಪ ಅನ್ನಾ ಬೇಯಿಸಿ ಹಾಕತೀಯಾ? ನಿನ್ನ ಹತ್ತರಾನೇ ಯಾಕೆ ಬಂದೆ ಅಂತ ಕೇಳು.

ಮುದಿಕಿ : ಸರೀನಪ್ಪಾ, ನನ್ನ ಹತ್ತಿರಾನೇ ಯಾಕೆ ಬಂದೆ?

ಕಿಟ್ಟಿ : ನೋಡು, ನಾನು ಒಳ್ಳೆಯವರು ಬೇಯಿಸಿದ ಅನ್ನಮಾತ್ರ ಉಣ್ಣೋದು. ಈ ಊರಿನಲ್ಲಿರೋರೆಲ್ಲ, ಇಲ್ಲಾ ದಡ್ಡರು. ಇಲ್ಲಾ ಮೂರ್ಖರು. ನಿನ್ನ ನೋಡು—ನೀ ಮೂರ್ಖಳಾ?

ಮುದಿಕಿ : ಅಲ್ಲ.

ಕಿಟ್ಟಿ : ಧಡ್ಡಳಾ?

ಮುದಿಕಿ : ಅಲ್ಲಾ

ಕಿಟ್ಟಿ : ಅದಕ್ಕೇ ನಿನ್ನ ಹತ್ತಿರ ಬಂದೆ. ಅನ್ನ ಬೇಯಿಸಿ ಹಾಕತೀಯಾ?

ಮುದಿಕಿ : ಇಷ್ಟೇನೊ? ನೀನೆಲ್ಲಿ ಟಿಗರು ಕೇಳ್ತೀಯೊ ಅಂತಿದ್ದೆ. ಕೊಡು ಬೇಯಿಸಿ ಹಾಕತೇನೆ.

ಕಿಟ್ಟಿ : ಹಾಗಿದ್ದರೆ ಟಿಗರಜ್ಜಿ, ನಾನು ನದೀಗೆ ಹೋಗಿ ಸ್ನಾನ ಮಾಡಿಕೊಂಡು ಬರ್ತೀನಿ. ಅಷ್ಟರಲ್ಲಿ ನೀ ಅನ್ನ ಬೇಯಿಸಿಡು. ಹಾ……

(ಮಡಕೆ, ಅಕ್ಕಿ ಕೊಟ್ಟು ಹೋಗುವನು)

ಮುದಿಕಿ : ಬಲ್‌ನನ ಮಗಾ ಇವನು! ಒಳ್ಳೆಯವಳು ಅಂತ ಹೊಗಳಿದರೆ ಉದ್ದಿನ ವಡೇ ಥರ ಉಬ್ಬುತಾಳೆ, ಅನ್ನಾ ಬೇಯಿಸಿ ಹಾಕತಾಳೆ—ಅಂದ್ಕೊಂಡಿದಾನೆ. ನಾನೆಷ್ಟು ಒಳ್ಳೆಯವಳು ಅಂತ ನನಗ್ಗೊತ್ತಿಲ್ಲವೆ? ಭಾಗವತರೇ,

ಭಾಗವತ: ಏನಮ್ಮಾ ?

ಮುದಿಕಿ : ನಾನು ಯಾರೂಂತ ನಿಮಗೆ ಗೊತ್ತು ತಾನೆ?

ಭಾಗವತ: ಇಲ್ಲಮ್ಮ ಯಾರು ನೀನು? ಏನ್ನಿನ್ನ ಮಹಿಮೆ?

ಮುದಿಕಿ :
ಊರಿನಾಗೆ ಹಿರಿಯವಳು
ಹದ್ದಿನ ವಯಸ್ಸಿನವಳು
ಏನೆಲ್ಲ ಉಂಡವಳು ಕಂಡವಳು। ಮಗನೆ
ಅಡಗೂಲಜ್ಜಿಯು ನಾನು ॥

ನಾನೆಂಬೊ ಪುಂಡರಿಗೆ
ಸಂಗನಾಮ ಹಚ್ಚಿದವಳು
ಠಕ್ಕರ ಲೆಕ್ಕಕ್ಕೆ ಕೊಕ್ಕೆ ಹಾಕಿದೆ ನಾನು
ಮಣ್ಣ ಮುಕ್ಕಿಸಿದವಳು ॥

ತಿಳಿದ ಬಂತಾ ಭಾಗವತರೇ?

ಭಾಗವತ: ಅದೇನು ಚೆನ್ನಾಗಿ ತಿಳಿಸಿ ಹೇಳಮ್ಮಾ.

ಮುದಿಕಿ : ಹದ್ದಿಗಾದಷ್ಟು ವಯಸ್ಸಾಯ್ತು ನನಗೆ. ಏನೆಲ್ಲ ಕಂಡವಳು, ಉಂಡವಳು. ನಾನೆಂಬೊ ಪುಂಡರಿಗೆ ಸಂಗನಾಮಾ ಹಚ್ಚಿದವಳು. ಠಕ್ಕರನ್ನ ಮಣ್ಣ ಮುಕ್ಕಿಸಿದವಳು. ಎಂಥೆಂಥವರನ್ನೋ ಲಾಗಾ ಹಾಕಿಸಿ ಹಣ್ಣಾದವಳು ನಾನು—ನನ್ನ ಎದುರಿಗೆ ಈ ಪುಟ್ಟ ಚಿಗುರೆ?

ಭಾಗವತ: ಛೀ ಛೀ, ಪಾಪ ಹುಡುಗ ನಿನ್ನ ತಪ್ಪ ತಿಳಕೊಂಡಿದಾನೆ.

ಮುದಿಕಿ : ನಾನೇನ ಮಾಡ್ತೀನಿ ಗೊತ್ತಾ? ಕೊಟ್ಟದ್ದರಲ್ಲಿ ಅರ್ಧಾ ಅಕ್ಕಿನಾ ಇಟ್ಟಕೊಂಡು ಅರ್ಧಾ ಅಕ್ಕಿ ಬೇಯಿಸಿ ಹಾಕತೇನೆ. ನಾ ಇಟ್ಟ ಕೊಂಡದ್ದು ಇವನಿಗೇಕೆ ತಿಳಿದೀತು? ಅಲ್ಲವಾ?

ಭಾಗವತ: ಭಲಾ ಮುದಿಕಿ ನೀನು.

ಮುದಿಕಿ : ಅವನ ಮುಂದೆ ಹೇಳಬೇಡಿ.

ಭಾಗವತ: ಇಲ್ಲವಮ್ಮಾ.

(ಅರ್ಧ ಅಕ್ಕಿ ಮುಚ್ಚಿಟ್ಟುಕೊಳ್ಳುವಳು. ಇನ್ನರ್ಧ ಬೇಯಿಸ ತೊಡಗುವಳು. ಕಿಟ್ಟಯ ಆಗಮನ. ಸಂಗೀತ.)

ಕಿಟ್ಟ : ಗೊತ್ತಾಯ್ತು, ಗೊತ್ತಾಯ್ತು. (ಸಂಗೀತ) ಗೊತ್ತಾಯ್ತೂ ಅಂದೆ. (ಸಂಗೀತ) ಎಷ್ಟು ಸಲ ಹೇಳಿದರೂ ಅದೇ ಮಾತು. ಕೇಳಿಸಿ ಬಂತು. ಅಂತ ಹೇಳಲಿಲ್ಲಾ?

ಮುದಿಕಿ : ಯಾರ ಜೊತೆ ಮಾತಾಡ್ತಿದಾನೆ? ಅಪ್ಪಾ ನನ್ನ ಕರದೆಯಾ?

ಕಿಟ್ಟಿ : ಇಲ್ಲಾ ಅಜ್ಜಿ ?

ಮುದಿಕಿ : ಮತ್ತ್ಯೇನೊ ಮಾತಾಡತಿದ್ದೆ ?

ಕಿಟ್ಟಿ : ಈ ಮಡಕೆ ಏನೋ ಹೇಳ್ತಾ ಇತ್ತು. ಅದಕ್ಕೆ ಏನೊ ಹೇಳ್ತಾ ಇದ್ದೆ.

ಮುದಿಕಿ : ಮಡಕೆ ಏನೊ ಹೇಳ್ತಾ ಇತ್ತಾ ? ಮಡಕೆ ಮಾತಾಡೀತೇನೊ ಮಗಾ ?

ಕಿಟ್ಟಿ : ಹೌದು ಟಗರಜ್ಜಿ, ಈ ಮಡಕೆ ಮಾತಾಡತ್ತೆ.

ಮುದಿಕಿ : ಹೌದಾ? ಏನು ಮಾತಾಡಿತು ?

ಕಿಟ್ಟಿ : ನೀನೇನೊ ಒಂದಷ್ಟು ಅಕ್ಕಿ ಕದ್ದೆಯಂತಲ್ಲ,—ಅದನ್ನೇ ಹೇಳ್ತಾ ಇತ್ತು.

ಮುದಿಕಿ : ಆ ? ಏನ ಹೇಳಿತು ? ನಾನು ಅಕ್ಕಿ ಕದ್ದೆನಂತಾ ? ಅಯ್ಯಯ್ಯೋ ! (ಸಮೀಪ ಬಂದು) ನಾ ಅಕ್ಕಿ ಕದ್ದದ್ದೇನೊ ನಿಜ. ಆದರೆ ಏನ ಮಗಾ, ಮಡಕೆ ಮಾತಾಡೋದಂದರೇನು ? ನಾ ಕದ್ದದ್ದು ಅದಕ್ಕೆ ತಿಳಿಯೋದಂದರೇನು ? ಅಬ್ಬಬ್ಬಾ ! ಮಗಾ—

ಕಿಟ್ಟಿ : ಅಂ ?

ಮುದಿಕಿ : ಎಲ್ಲಿ ಸಿಗ್ತು ಮಗಾ ಈ ಮಡಕೆ ? ಎಷ್ಟು ಕೊಟ್ಟೆ ? ಬಾ ಊಟಾ ಮಾಡು ಊಟಾ......(ತಿನ್ನಿಸುವಳು)

ಕಿಟ್ಟಿ : ಅದನ್ನೆಲ್ಲ ಏನ್ಕೇಳ್ತಿ ಅಜ್ಜಿ ? ಕೈ ತುಂಬ ದುಡ್ಡು ಕೊಟ್ಟು ದೂರದ ಊರಿನಿಂದ ತಂದೆ.

ಮುದಿಕಿ : ಮಗಾ, ನಾನೂ ಮುದಿಕಿ. ವಯಸ್ಸಾಯ್ತು. ನನಗೆ ಯಾರೂ ನಿನ್ನ ಹಾಗೆ ಮಕ್ಕಳಿಲ್ಲ ಮರಿಯಿಲ್ಲ. ಒಂದೇ ಒಂದು ಬಿದ್ದುಕೊಂಡಿದೇನೆ. ಸಾಯೋತನಕ ಕಾಲ ಕಳಿಯೋದೆ ಕಷ್ಟ. ಮಾತಾಡಿಕೊಂಡಿರ್ಲಿಕ್ಕೆ ಈ ಮಡಕೆ ಕೊಡ್ತೀಯಾ ?

ಕಿಟ್ಟಿ : ಏನಂದೆ ? ಈ ಮಾತಾಡೋ ಮಡಕೆ ನಿನಕ್ಕೊಡೋದೆ ?

ಮುದಿಕಿ : ಪುಕ್ಕಟೆ ಬೇಡ. ನಿನಗೆ ಕೊಡೋದಕ್ಕೆ ನನ್ನ ಹತ್ತರ ಕೈತುಂಬ ದುಡ್ಡಿಲ್ಲ, ಇದೊಂದು ಟಗರ ಇದೆ. ಇದನ್ನ ತಗೊಂಡು ಆ ಮಡಕೆ ಕೊಡ್ತೀಯಾ?

ಕಿಟ್ಟಿ : ಅಜ್ಜಿ ಈ ಮಡಕೆ ಬೆಲೆ ಏನು ? ಈ ಪಿಸ್ ಟಗರಿನ ಬೆಲೆ ಏನು ? ಛೀ ಛೀ ನಿನ್ನ ಬಿಟ್ಟು ಇನ್ನು ಯಾರಾದರೂ ಈ ಮಾತು ಹೇಳಿದ್ದರೆ ರೇಗಿ ಬಿಡತಿದ್ದೆ.

ಮುದಿಕಿ : ಮಗಾ, ನೀನೇ ನನ್ನ ಮೊಮ್ಮಗ ಆಗಿದ್ದರೆ ಹೀಗಂತಿದ್ಯಾ? ಅನ್ನಾ ಬೇಯಿಸಿ ಹಾಕಿದ್ದಕ್ಕಾದರೂ ಒಪ್ಪಿಕೊಳ್ಳಪಾ.

ಕಿಟ್ಟಿ : ಇನ್ನೇನ ಮಾಡಲಿಕ್ಕಾಗತ್ತಜ್ಜಿ ? ಅನ್ನದ ಋಣ. ಇಲ್ಲಾ ಅಂದರೆ ಆಗತ್ತಾ ? ನೀ ಬೇರೆಯಲ್ಲ, ನನ್ನಜ್ಜಿ ಬೇರೆಯಲ್ಲ. ಬೇರೆಯವರಾಗಿದ್ದರೆ

ಇಂಥಾ ಹತ್ತು ಟಗರಿಗೂ ಈ ಮಡಕೆ ಕೊಡತಿರಲಿಲ್ಲ. ಹೋಗಲಿ ಮಡಕೆ ತಗೊ, ಟಗರು ಕೊಡು.

ಮುದಿಕಿ : ತಗೊ ತಗೊ (ಉತ್ಸಾಹದಿಂದಕೊಡುವಳು. ಕಿಟ್ಟಿ ಟಗರಿನೊಂದಿಗೆ ಹೊರಡುವನು.) ಏನವ್ವಾ ಮಡಕೆವ್ವಾ? ಹ್ಯಾಗಿದ್ದಿ? ಚೆನ್ನಾಗಿದ್ದೀಯಾ? ಯಾಕೆ ಮಾತಾಡವೊಲ್ಲೆ? ಹುಡುಗ ನಿನ್ನ ಮಾರಿದನಂತ ಕೋಪವಾ ನಿಂಗೆ? ನೀನೇನೂ ಕಾಳಜಿ ಮಾಡಬ್ಯಾಡ, ಆತ ನಿನ್ನನ್ನು ಹ್ಯಾಗೆ ನೋಡಿಕೊಳ್ತಿದ್ದನೋ ನಾನೂ ಹಾಗೇ ನೋಡಿಕೊಳ್ತೀನೆ. ಆಯ್ತಾ? ಯಾಕೋ ಮಾತೇ ಆಡವೊಲ್ದು. ಮಡಕೆವ್ವಾ ಚೆನ್ನಾಗಿದ್ದೀಯಾ? ಕಿವಿ ಕೇಳಿಸುತ್ತೋ ಇಲ್ಲವೋ. ನನ್ನ ಹಾಗೆ ಇದಕ್ಕೂ ವಯಸ್ಸಾಗಿದೆಯೋ ಏನೊ. ಏ ಮಡಕೆವ್ವಾ. (ಎತ್ತಿ ಕುಕ್ಕುವಳು. ಮಡಕೆ ಒಡೆಯುವುದು) ಆ? ಇದೂ ಎಲ್ಲಾ ಮಡಕೆ ಥರಾನೇ ಇದೆ. ಇದರಲ್ಲೇನಿದೆ? ನಾನು ಸೇರು ಅಂದರೆ ಆ ಪೋರ ನನಗೇ ಸವ್ವಾಸೇರು ಮಾಡಿಬಿಟ್ಟನೆ? ಎಲಾ ಎಲಾ ನನಮಗನೆ, ಇರು ನೋಡ್ತೀನೆ. ಎಷ್ಟುದೂರ ಓಡಿ ಹೋಗ್ತಿ ನನ್ನ ತಪ್ಪಿಸಿ? ಅಯ್ಯಾ ಭಾಗವತರೇ—

ಭಾಗವತ: ಏನವ್ವಾ ಕರದೆ?

ಮುದಿಕಿ : ನೋಡಿದಿರಾ ಈ ಹುಡುಗ ನನಗೇ ಸವ್ವಾಸೇರ ಮಾಡಿದ್ದು?

ಭಾಗವತ: ನೋಡಿದೆ. ಅದೇನೋ ಪುಂಡರು ಠಕ್ಕರಿಗೆಲ್ಲಾ ಮಣ್ಣು ಮುಕ್ಕಿಸಿದವಳು ಅಂತ ಹೇಳ್ತಿದ್ದೆ—

ಮುದಿಕಿ : ಇನ್ನೂ ನೋಡ್ತಾ ಇರಿ. ಸವ್ವಾಸೇರ ಯಾರೂಂತ ತಿಳೀತದೆ.

ಭಾಗವತ: ಅಸಾಧ್ಯ ಹುಡುಗ, ಅಸಾಧ್ಯ ಹುಡುಗ.

(ಹೊರಡುವಳು)

ಟಗರು ಹೋಗಿ ದುಡ್ಡು ಬಂತು

(ಕಿಟ್ಟಿ ಟಗರಿನೊಂದಿಗೆ ಕುಣಿಯುತ್ತ ಬರುವನು. ಮಳೆ ಬರುತ್ತಿದೆ. ಒಂದು ಮನೆ, ಒಳಮನೆ, ಪಡಸಾಲೆ ಕಾಣುತ್ತಿದೆ. ಒಳ ಮನೆಯಲ್ಲಿ ಒಬ್ಬ ಮುದುಕ, ಅವನ ಮಗ.)

ಮೇಳ : ಮಡಕೆ ಹೋಗಿ ಟಗರು ಬಂತು ಲಾ ಲಾ ಲಾ
ಮಡಕೆ ಹೋಗಿ ಟಗರು ಬಂತು ಲಾ ಲಾ ಲಾ ||

(ಮುದುಕ ನರಳುತ್ತಾ ಮಲಗಿದ್ದಾನೆ. ಮಗ ಅತ್ತಿತ್ತ ಅಡ್ಡಾಡುತ್ತಿದ್ದಾನೆ. ಪಡಸಾಲೆಯಲ್ಲಿ ಕಿಟ್ಟಿ ಟಗರಿನೊಂದಿಗೆ ಬಂದು ಮಲಗುತ್ತಾನೆ)

ಮುದುಕ: ಸಾಯುತೇನೊ ಮಗಾ ಛಳಿ ಛಳಿ ಛಳಿ! ಕಂಬಳಿ ಹೊಚ್ಕೊ ಮಗಾ ಛಳಿ ಛಳಿ ಛಳಿ!

ಮಗ: ಗಟ್ಟಿ ಜೀವ ಮಾಡಿಕೊಂಡು ಹೇಗೊ ಮಲಗಪ್ಪಾ, ಇನ್ನೇನು ಬೆಳಗಾಯ್ತು.

ಭಾಗವತ: ಯಾಕೆ, ಈ ಮುದುಕನಿಗೆ ಏನಾಗಿದೆ?

ಮಗ: ಏನ್ಹೇಳಲಿ ಭಾಗವತರೇ, ಮುದುಕ, ವಯಸ್ಸಾಗಿದೆ, ಛಳೀ ಸಹಿಸವೊಲ್ಲ.

ಭಾಗವತ: ಮುದುಕ ಅಂತಿ, ವಯಸ್ಸಾಗಿದೆ ಅಂತಿ, ಅದು ಹ್ಯಾಗೆ ಛಳಿ ತಡದಾನು? ಇನ್ನೇನಾದರೂ ಇದ್ದರೆ ಹೊಚ್ಚು.

ಮಗ: ಎಲ್ಲಾ ಆಯ್ತು ಭಾಗವತರೇ ಮನೆಯಲ್ಲಿರೋದೆಲ್ಲ ಹೊಚ್ಚಿಯಾಯ್ತು. ನಾನುಟ್ಟಿರೋದು ಇದೊಂದು ಪಂಚೆ ಇದೆ.

ಭಾಗವತ: ಹಾ ಅದನ್ನೂ ಹೊಚ್ಚಿಬಿಡಬೇಡ. ಇಲ್ಲೆಲ್ಲಾ ಮಕ್ಕಳಿದ್ದಾರೆ.

(ಹೊರಗಡೆ ಗೊರಕೆ ಶಬ್ದ)

ಮಗ: ಹೊರಗಡೆ ಯಾರೋ ಗೊರಕೆ ಹೊಡೆಯೋ ಹಾಗೆ ಕೇಳ್ಸುತ್ತಲ್ಲ ಯಾರು? ನೋಡೋಣ.

(ಹೊರಗೆ ಬಂದು ನೋಡುತ್ತಾನೆ)

ಏನಿದು! ಇಂಥಾ ಛಳಿಯಲ್ಲಿ ಈ ಹುಡುಗ ಏನೇನೊ ಖಬರಿಲ್ಲದೆ ಮಲಗಿಡ್ಡಾನಲ್ಲ! ಇದರ ರಹಸ್ಯ ತಿಳೀಲೇಬೇಕು. ಅಯ್ಯಾ ಯಾರು ನೀನು?

(ಗೊರಕೆ)

ಸುಖನಿದ್ದೆ ಹೊಡೀತಿದಾನೆ. ಅಯ್ಯಾ ಯಾರಪ್ಪಾ ನೀನು?

(ಗೊರಕೆ)

ಆಯ್ತಲ್ಲ, ನಿದ್ದೆ ಹೊಡಿತಾ ಇದ್ದೀಯಂತ ಗೊತ್ತಾಯ್ತು. ಇನ್ನು ಮೇಲಕ್ಕೇಳು.

ಕಿಟ್ಟಿ: (ಆಕಳಿಸುತ್ತ) ಯಾಕ್ರಿ ಎಬ್ಬಿಸ್ತೀರಿ? ಯಾರು ನೀವು?

ಮಗ: ಚೆನ್ನಾಗಿದೆ. ನನ್ನ ಮನೆಗೆ ಬಂದು ನನ್ನನ್ನೇ ಯಾರು ನೀವು ಅಂತ ಕೇಳ್ತೋದೆ! ಅಯ್ಯಾ ನಾನು ಈ ಮನೆ ಯಜಮಾನ. ಅಂದರೆ

ನೀನೀಗ ಮಲಗಿರೋದು ನನ್ನ ಮನೆ ಚಾವಡಿ. ಆ ಟಗರು ಕಟ್ಟಿದ್ದೀ ನೋಡು—ಅದು ನನ್ನ ಮನೆ ಕಂಬ. ನೀನೀಗ ಎದ್ದು ಕೂತೀದಿ ನೋಡು, ಅದು ನನ್ನ ಮನೆ ನೆಲ. ಇಲ್ಲಿ ಮಲಗಬೇಕಾದರೆ ನನ್ನ ಪರವಾನಿಗಿ ಬೇಕು.

ಕಿಟ್ಟಿ: ಹೌದಾ ? ನಮಸ್ಕಾರ ಯಜಮಾನರೆ.

ಮಗ: ನಮಸ್ಕಾರ.

ಕಿಟ್ಟಿ: ನೆಲದ ಯಜಮಾನರೆ, ಇಂದೊಂದು ರಾತ್ರಿ ನಾನಿಲ್ಲಿ ಮಲಗಬಹುದೇ ?

ಮಗ: ಆಗಬಹುದು.

ಕಿಟ್ಟಿ: ಕಂಬದ ಯಜಮಾನರೆ, ಈ ರಾತ್ರಿ ಈ ಕಂಬಕ್ಕೆ ನನ್ನ ಟಗರು ಕಟ್ಟ ಬಹುದಾ ?

ಮಗ: ಆಗಬಹುದು.

ಕಿಟ್ಟಿ: ಗುಡ್ ನೈಟ್.

ಮಗ: ಇನ್ನೊಂದು ಮಾತು. ಅಯ್ಯಾ ಇಂಥಾ ಕೊರೆಯೋ ಛಳಿಯಲ್ಲಿ ಅಷ್ಟೊಂದು ನಿರಂಬಳವಾಗಿ ಒಂದೂ ಹೊದಿಕೆಯಿಲ್ಲದೆ ಮಲಗಿಯಿದ್ದೀ ಯಲ್ಲಾ—ಹೇಗೆ ?

ಕಿಟ್ಟಿ: ಹೇಳಲೇಬೇಕಾ ?

ಮಗ: ಹೌದು ಹೌದು.

ಕಿಟ್ಟಿ: ಹೇಳದಿದ್ದರೆ—

ಮಗ: ನಮ್ಮಪ್ಪ ಒಳಗೆ ಛಳಿಯಿಂದ ಸಾಯಿತಿದಾನೆ. ನಾನು ಆಶ್ಚರ್ಯ ದಿಂದ ಸಾಯುತಾ ಇದೀನಿ—

ಕಿಟ್ಟಿ: ಹಾಗಿದ್ದರೆ ಹೇಳತೀನಿ.

ಮಗ: ಹೇಳು.

ಕಿಟ್ಟಿ: ಅದರಲ್ಲಿ ಹೇಳೋದೇನಿದೇರಿ ? ಪಕ್ಕದಲ್ಲಿ ಟಗರು ಕಟ್ಟಿದೇನೆ. ಈ ಟಗರು ನನ್ನ ಮೈ ಛಳಿಯನ್ನೆಲ್ಲ ಮೇಯುತದೆ. ನಾನು ಆರಾಮಾಗಿ ಮಲಗ ತೇನೆ. ಅಷ್ಟೇ ಅಲ್ಲಿ ನನಗೀಗ ಶಕೆ ಆಗತಾ ಇದೆ. ಸುಮ್ಮನೆ ಮರ್ಯಾದೆಗಂಜಿ ಸುಮ್‌ಕಿದೇನೆ ಅಷ್ಟೆ.

ಮಗ: ಅಯ್ಯಾ, ನೀ ದೊಡ್ಡವನಪ್ಪಾ.

ಕಿಟ್ಟಿ: ಹೌದಾ ? ಮದುವೆ ಆಗೋವಷ್ಟು ದೊಡ್ಡವನಾ ?

ಮಗ: ಮದುವೆ? ಮಕ್ಕಳು ಹಡೆಯೋವಷ್ಟು ದೊಡ್ಡವನಯ್ಯಾ ನೀನು.

ಕಿಟ್ಟಿ: ಹೌದ? (ದೇವರಂತೆ ನಿಂತು) ನಿಮಗೇನು ವರ ಬೇಕೊ ಕೇಳ್ರಿ, ಕೊಡತೇನೆ.

ಮಗ: ಅಯ್ಯಾ, ನನ್ನ ತಂದೆಗೆ ವಯಸ್ಸಾಗಿದೆ. ಛಳಿತಡೀಲಾರದೆ ಸಾಯ್ತಿದ್ದಾನೆ. ದಯಮಾಡಿ ನಿನ್ನ ಟಗರು ಕೊಟ್ಟು ಉಪಕಾರ ಮಾಡತೀಯಾ?

ಕಿಟ್ಟಿ: ಅಯ್ಯಯ್ಯೋ ಸಿಕ್ಕಬಿದ್ದೆ. ಏನು ಸ್ವಾಮಿ? ವರ ಕೇಳಿಕೊ ಅಂದರೆ ಟಗರು ಕೇಳೋದೆ?

ಮಗ: ಮನೆಯಲ್ಲಿ ಹೆಣ್ಣು ಮಕ್ಕಳೇ ಇಲ್ಲ. ವರ ತಗೊಂಡೇನು ಮಾಡಲಿ? ಇದೊಂದು ಟಗರು ಕೊಟ್ಟುಬಿಡು ಸಾಕು.

ಕಿಟ್ಟಿ: ಸ್ವಾಮಿ, ರೂಪಾಯಿ ನಾನೂರು ಕೊಟ್ಟು ಈ ಸ್ಪೆಶಲ್ ಟಗರು ಕೊಂಡೀನಿ. ನಿಮಗೆ ಕೊಡಲಾ?

ಮಗ: ಅಯ್ಯಾ, ನಾನೂರ ಮೇಲೆ ಒಂದು ನೂರು ಹೆಚ್ಚು ಕೊಡತೀನಿ. ಏನೊ ನನ್ನ ತಂದೆ ಸಾಯೋ ಕಾಲ್ದಲ್ಲಿ ನೆಮ್ಮದಿಯಿಂದ ಸಾಯಲಿ ಅಂತ ನನ್ನ ಆಸೆ. ದಯಮಾಡಿ ಇಲ್ಲನ್ನಬೇಡ. ರೂಪಾಯಿ ತರತೇನೆ.........

(ಒಳಗೆ ಹೋಗುವನು)

ಕಿಟ್ಟಿ: ಏನು ಭಾಗವತರೇ, ಇಲ್ಲಿದ್ದೀರಿ—

ಭಾಗವತ: ನಿನ್ನ ಸಾಹಸಗಳಿಗೆಲ್ಲ ತಾಳ ಹಾಕಬೇಕಲ್ಲಪಾ!

ಕಿಟ್ಟಿ: ಅಡ್ಡಿಯಿಲ್ಲವಾ?

ಭಾಗವತ: ಅಕೋ ಬಂದ.

ಮಗ: (ಬಂದು) ತಗೊಳ್ಳಪಾ ಐನೂರು ರೂಪಾಯಿ.

ಕಿಟ್ಟಿ: ಅದೇನೊ ಸರಿ. ಆದರೆ ಹ್ಯಾಗಪ್ಪಾ ಕೊಡಲಿ? ಈ ಭಾಗವತರು ಒಂದು ಮಾತು ಹೇಳಿದರೆ—

ಮಗ: ಹೇಳಿ ಭಾಗವತರೇ ಪ್ಲೀಸ್!

ಭಾಗವತ: ಛೇ ಛೇ ಕಿಟ್ಟೀ, ನೀನುಂಟು, ನಿನ್ನ ವ್ಯವಹಾರ ಉಂಟು. ಮಧ್ಯದಲ್ಲಿ ನನ್ನ ಸಿಗ ಹಾಕ್ಬೇಡ. ನೀನು ಓಡಿ ಹೋದ ಮೇಲೂ ಸ್ವಲ್ಪ ಹೊತ್ತು ನಾ ಇಲ್ಲೇ ಇರಬೇಕು.

ಕಿಟ್ಟಿ: ಸರಿ. ಆಗಲಿ. ನಿಮ್ಮ ತಂದೆ ನನಗೂ ತಂದೆ ಆದ ಹಾಗೆ. ಹ್ಯಾಗೂ ಸಾಯೋ ವಯಸ್ಸಿಗೆ ಬಂದಿದಾನೆ. ನಿಮ್ಮದಿಯಿಂದ ಸತ್ತರೆ ನಿಮ್ಮ ಹಾಗೆ ನನಗೂ ಸಂತೋಷ. ಕೊಡಿ ಕೊಡಿ.
(ದುಡ್ಡು ಇಸಿದುಕೊಳ್ಳುವನು. ಮಗ ಟಿಗರು ತಕ್ಕೊಂಡು ಒಳಗೆ ಹೋಗುವನು.)

ಕಿಟ್ಟಿ: ನಾನಿನ್ನು ಬರಲಿ?

ಮಗ: ಬೆಳತನಕ ಇದ್ದು ಹೋಗಪ್ಪಾ.

ಕಿಟ್ಟಿ: ಸಾಧ್ಯವೆ? ಬರತೇನೆ, ಭಾಗವತರೇ, ತಾಳ ಹಾಕಿ.

(ಸಂಗೀತ. ಕಿಟ್ಟಿ ಹೋಗುವನು. ಮಗ ಟಿಗರು ಒಯ್ದು ತಂದೆಯ ಬಳಿ ಕಾಲುದಸೆ ಕಟ್ಟುವನು. ಟಿಗರು ಮುದುಕನನ್ನು ಹಾಯು ವುದು. ಛಳಿ ಮೋಯುತ್ತಿದೆಯೆಂದು ಮಗ ಭಾವಿಸುವನು.)

ಮಗ: ನೋಡಿದಿರಾ ಭಾಗವತರೇ, ಟಿಗರು ಛಳಿ ಮೋಯಲಿಕ್ಕೆ ಸುರು ಮಾಡಿತು. ಐನೂರು ರೂಪಾಯಿ ಟಿಗರಿಗೆ ಹೆಚ್ಚೆ? ಆದರೆ ಮಾಡೋ ಕೆಲಸ! ಛೇ ಛೇ ಸಾವಿರ ರೂಪಾಯಿ ಕೊಟ್ಟರೂ ಕಡಿಮೆ. ನೋಡಿ ಭಾಗವತರೇ ನನ್ನ ತಂದೆ ಸುಮ್ಮನೆ ಮಲಗಿ ಬಿಟ್ಟನಲ್ಲ. ಆ ಟಿಗರು ಕೊಟ್ಟೋನ ಹೊಟ್ಟೆ ತಣ್ಣಗಿರಲಿ.

ಭಾಗವತ: ಅಯ್ಯೊ, ನಿನ್ನ ತಂದೆ ಯಾಕೋ ಸುಮ್ಮನಾದರು. ಏನಾಯ್ತು ನೋಡ ಹೋಗು.

ಮಗ: ಯಾಕೋ ಆರಾಮಾಗಿ ಮಲಗಿದಾನಲ್ಲ.

ಭಾಗವತ: ಆರಾಮಾಗಿ ಮಲಗಿದಾರೆ ನಿಜ. ಜೀವಂತವಾಗಿದಾರಾ—ಅಂತ.

ಮಗ: ಏನಂದಿರಿ?

(ಗಡಿಬಿಡಿಸಿ ಹೋಗಿ ನೋಡುವನು.)

ಮೋಸವಾಯ್ತಲ್ಲ ಭಾಗವತರೇ, ನನ್ನ ತಂದೆ ಸತ್ತೇ ಹೋಗಿದಾನೆ. ಅಯ್ಯೋ ಐನೂರು ರೂಪಾಯಿ ಕೊಟ್ಟು ಕೈಯಾರೆ ಕೊಲ್ಲಿಸಿದ ಹಾಗಾಯ್ತಲ್ಲಾ! ಅವನೆಲ್ಲಿ ಹೋಗ್ತಾನೋ ನೋಡ್ತೀನಿ.

ಭಾಗವತ: ಅಯ್ಯೊ ಅಯ್ಯೊ ಈ ಹೆಣ?

ಮಗ: ಸತ್ತಹೋಯಿತು.

(ಅವಸರದಲ್ಲಿ ಹೋಗುವನು, ಸಂಗೀತ)

ದುಡ್ಡು ಹೋಗಿ ಕುದುರೆ ಬಂತು

ಮೇಳ : ಮಡಕೆ ಹೋಗಿ ಟಗರು ಬಂತು ಲಾ ಲಾ ಲಾ
ಟಗರು ಹೋಗಿ ದುಡ್ಡು ಬಂತು ಲಾ ಲಾ ಲಾ ॥

(ಹಾಡುತ್ತ ಕಿಟ್ಟಿ ಕಾಡಿನಲ್ಲಿ ಬರುತ್ತಿದ್ದಾನೆ. ಕರಡಿ ಬರುತ್ತದೆ. ಅದರೊಂದಿಗೆ ಗುದ್ದಾಡಿ ಓಡಲು ಪ್ರಯತ್ನಿಸುತ್ತಾನೆ. ಕರಡಿ ಬಿಡುವುದಿಲ್ಲ. ದುಡ್ಡು ಕೆಳಗೆ ಬೀಳುತ್ತದೆ. ಗುದ್ದಾಡುತ್ತ)

ಕಿಟ್ಟಿ: ಅಯ್ಯೋ ಮನುಷ್ಯರಾದರೆ ಮೋಸ ಮಾಡಬಹುದಿತ್ತು. ಈ ಕರಡಿಗೆ ಹ್ಯಾಗಪ್ಪಾ ಮೋಸ ಮಾಡೋದು? ಆ ಭಾಗವತನಾದರೂ ಇದ್ದಿದ್ದರೆ ಚೆನ್ನಾಗಿರೋದು. ಏ ಕರಡೆ ಏ ಏ........

(ದೂರದಿಂದ ಭಗವಂತನ ಹಾಡು.)

ಭಗವಂತ: ಹುಡಿಗೇರೊಳಗೆ ಹುಡಿಗಿ ಚೆಂದ
ಹೇಮಮಾಲಿನಿ।
ಹುಡಿಗೇರೊಳಗೆ ಹುಡಿಗಿ ಚೆಂದ
ಹೇಮಮಾಲಿನಿ ॥

ಕಿಟ್ಟಿ: ಇದ್ಯಾವನೋ ತಮಿಳು ಸಿನಿಮಾದ ಭಗವಂತನ ಹಾಗೆ ಬರ್ತ್ತಿದಾನೆ!

(ಭಗವಂತ ಕುದುರೆ ಹತ್ತಿ ಸಮೀಪ ಬರುವನು. ಕಿಟ್ಟಿ ಮತ್ತು ಕರಡಿಯು ಗುದ್ದಾಟ ನೋಡಿ ಆಶ್ಚರ್ಯದಿಂದ ನಿಲ್ಲುವನು.)

ಕಿಟ್ಟಿ: ಭಗವಂತನಿಗೆ ನಮಸ್ಕಾರ.

ಭಗವಂತ: ಎಲಾ! ಇವನಿಗೆ ನನ್ನ ಹೆಸರು ಹ್ಯಾಗೆ ಗೊತ್ತಾಯ್ತು?

ಕಿಟ್ಟಿ: ನನಗೊತ್ತಿಲ್ಲದೇನು! ಈ ರೂಪ! ಈ ಕುದುರೆ! ಒಳ್ಳೆ ರಾಜೇಶ್‌ಖನ್ನಾ ಥರಾ ಇದೀರಾ. ನಿಮ್ಮನ್ನ ಹೇಮಮಾಲಿನಿ ನೋಡಬೇಕು.

ಭಗವಂತ: ಎಲಾ ಎಲಾ! ನನಗೆ ಹೇಮಮಾಲಿನಿ ತುಂಬ ಇಷ್ಟ ಅಂತ ಇವನಿಗೆ ಹ್ಯಾಗೆ ಗೊತ್ತಾಯ್ತು? ಅಯ್ಯಾ, ಸೋತೆ. ನನ್ನ ಹೆಸರು ಭಗವಂತ ಹೌದು. ನನಗೆ ಹೇಮಮಾಲಿನಿ ತುಂಬ ಇಷ್ಟ ಹೌದು. (ಕುದುರೆ ಇಳಿದು) ಬೇಗನೆ ಹೇಳು—ಏನು ಮಾಡಿದರೆ ನನಗೆ ಹೇಮಮಾಲಿನಿ ಸಿಗತಾಳೆ?

ಕಿಟ್ಟಿ: ಅದಿರ್ಲಿ, ನೀವು ಹೀಗ್ಯಾಕೆ ಡ್ರೆಸ್ ಮಾಡಿಕೊಂಡೀರಿ ಅಂತ ಮೊದಲು ಹೇಳಿ.

ಭಗವಂತ: ಇಷ್ಟೆಲ್ಲಾ ಹೇಳಿದವನು ಅದು ಗೊತ್ತಿಲ್ಲವೆ ನಿನಗೆ? ಅದೇ ಆ 'ದಿಲ್ ಧಡಕಣ್' ಅಂತ ಪಿಚ್ಚರ್ ಇತ್ತಲ್ಲಾ—ಅದರಲ್ಲಿ ಹೇಮಮಾಲಿನಿ ಪಾರ್ಕ್‌ನಲ್ಲಿದ್ದಾಗ ರಾಜೇಶ್‌ಖನ್ನಾ ಹೀಗೇ ಬರೋದಿಲ್ಲವೆ?

ಕಿಟ್ಟಿ: ಈಗಲೂ ಬರ್ತಾಳೇನೋ ಅಂತ ಬಂದಿರಿ.

ಭಗವಂತ: ಹೆಹೆ—ನಿನ್ನಿಂದ ಮುಚ್ಚಿಟ್ಕೊಳ್ಳೋದೇನಿದೆ?

ಕಿಟ್ಟಿ: ಇದೆಲ್ಲಾ ಖರ್ಚಿನ ಬಾಬತ್ತು ಭಗವಂತಾ. ನೀನ್ಯಾವುದೋ ಹಳ್ಳೀ ಗೌಡಾ. ನಿನ್ನ ನೋಡಿದರೆ ಎಸ್ಸೆಲ್ಸಿ ದಾಟಿಲ್ಲಾ ಅಂತ ಕಾಣ್ಸತ್ತೆ. ದುಡ್ಡು? ಸಿಕ್ಕಬಹುದು ವರ್ಷಕ್ಕೆ ಹತ್ತೆಂಟು ಸಾವಿರ. ಒಂದು ದಿನಕ್ಕೇ ಸಾವಿರ ಖರ್ಚುಮಾಡೋ ಹುಡುಗಿ ಸಿಗತಾಳಾ?

ಭಗವಂತ: (ಸುತ್ತ ದುಡ್ಡನ್ನು ಗಮನಿಸಿ) ಅದಿರಲಿ, ಅದ್ಯಾಕೆ ಹೀಗೆ ಸುತ್ತ ದುಡ್ಡು ಬಿದ್ದಿದೆ? ಯಾಕೆ ಹೀಗೆ ಕರಡಿ ಜೊತೆ ಗುದ್ದಾಡ್ತಾ ಇದ್ದಿ? ನಿನ್ನ ವಿಷಯ ಹೇಳಲೇ ಇಲ್ಲಾ.

ಕಿಟ್ಟಿ: ಇದೊ ಈ ಕರಡಿ ಇದೆಯಲ್ಲ—ನಂದೆ. ದಿನಾಲು ಸಾವಿರ ರೂಪಾಯಿ ಕಕ್ಕತದೆ. ಈ ಹೊತ್ತು ಅದ್ಯಾಕೋ ಐನೂರು ರೂಪಾಯಿ ಮಾತ್ರ ಕಕ್ಕಿದೆ. ಅದಕ್ಕೆ ಇನ್ನಷ್ಟು ಹೊತ್ತು ಹಿಡಕೊಂಡು ಮಿಕ್ಕನಾದ ಐನೂರು ರೂಪಾಯಿ ಕಕ್ಕಿಸ್ತಾ ಇದೀನಿ.

ಭಗವಂತ: ಐಡಿಯಾ! ಗುರು! ನೀನೇ ಕಾಪಾಡಬೇಕು. ನನ್ನ ಹತ್ತಿರ ಇದೊಂದು ಕುದುರೆ ಇದೆ. ಇದನ್ನ ತಗೊಂಡು ಈ ಕರಡಿ ಕೊಟ್ಟುಬಿಡು. ನಿನ್ನ ಹೆಸರು ಹೇಳಿ ಹೇಮಮಾಲಿನೀನ್ನ ಮದುವೆ ಮಾಡಿಕೊಳ್ಳತೇನೆ.

ಕಿಟ್ಟಿ: ಥೇ ಥೇ ಇದೊಳ್ಳೆದಾಯ್ತಲ್ಲ. ದುಡ್ಡು ಕಕ್ಕೋ ಕರಡಿ ಇಲ್ಲಿದೇಂತ ತೋರಿಸಿದರೆ, ತೋರಿಸಿದ ಕೈನೇ ನುಂಗತಿ. ಹೋಗ್ಹೋಗು, ನನಗೇನೋ ಕಣ್ಣೀರಿಟ್ಟು ಅಳೋರನ್ನ ಕಂಡರೆ ವಿಪರೀತ ಕರುಣೆ ಬರತದೆ ನಿಜ. ದಯಮಾಡಿ ಅಳಬೇಡ, ಸುಮ್ಮನೆ ಹೊರಟ್ಹೋಗು.

ಭಗವಂತ: ಗುರು, ನನ್ನನ್ನ ನಿನ್ನ ಹಾಗೆ ತಿಳಿದವರು ಯಾರಿದ್ದಾರೆ? ನೀನು ಈ ಕರಡಿ ಕೊಟ್ಟು ಕಾಪಾಡದೆ ಹೋದರೆ ಹೇಮಮಾಲಿನಿ ನನಗೆ ಸಿಕ್ಕೋ ದಿಲ್ಲ. ಅವಳು ಸಿಕ್ಕದೆ ಹೋದರೆ ನಾನು ನೇಣು ಹಾಕಿಕೊಂಡು ಸಾಯೋದು ಖಂಡಿತ.

ಕಿಟ್ಟಿ: ಭಗವಂತಾ ನೀ ಹೀಗೆಲ್ಲ ಹೇಳಬೇಡ. ನನಗಾಗಲೇ ಸ್ವಲ್ಪ ಸ್ವಲ್ಪ ಕರುಣೆ ಬರತಾ ಇದೆ. ಅಳಬೇಡ.

ಭಗವಂತ: ನಿನ್ನ ಕರುಣೆಗಾಗಿ ಹೇಳ್ತಾ ಇಲ್ಲ ಗುರು. ನನ್ನಾಣೆ, ನಿನ್ನಾಣೆ, ಕೂತವರಾಣೆ—ಹೇಮಮಾಲಿನಿ ಸಿಕ್ಕದೇ ಹೋದರೆ ನನಗೆ ಹುಚ್ಚೇ ಹಿಡೀತದೆ. (ಅಳತೊಡಗುವನು.)

ಕಿಟ್ಟಿ: ಅಯ್ತಲ್ಲಾ, ಅತ್ತೇಬಿಟ್ಟೆಯಾ? ನಿನಗೆ ನಾ ಮೊದಲೇ ಹೇಳಿದ್ದೆ—ಅಳೋರನ್ನ ಕಂಡರೆ ನನಗೆ ಕರುಣೆ ಬರತದೆ ಅಂತ. ಬಂದೇ ಬಿಡ್ತಲ್ಲ. ಹಾಳಾಗಿ ಹೋಗು. ಬಾ ಈ ಕರಡಿ ಹೀಗ್ಬಿಡಿ.

(ಕರಡಿಗೂ ಭಗವಂತನಿಗೂ ಗಂಟು ಹಾಕಿ ಹೊರಡುವನು.)

ಕಿಟ್ಟಿ: ಭಾಗವತರೇ, ಏನಂತೀರಿ?

ಭಾಗವತ: ಅಯ್ಯೊ ನಿನ್ನ ಮಹಿಮೆ ಅಗಾಧವಪ್ಪಾ. ನಮ್ಮ ಪಕ್ಷಾಂತರಿ ರಾಜಕಾರಣಿಗಳಿಗೂ ಇಷ್ಟು ಬುದ್ಧಿಯಿಲ್ಲವಲ್ಲಯ್ಯ!

ಕಿಟ್ಟಿ: ಸಾಕು, ಸಾಕು, ಗುಟ್ಟು ಬಯಲಾಗೋದರಲ್ಲೇ ನಾ ಹೊರಡಬೇಕು. ಎಲ್ಲಿ ಸಂಗೀತ ಕೊಡಿ—

(ಸಂಗೀತ, ಕಿಟ್ಟಿ ಹೋಗುವನು. ಭಗವಂತ ಕರಡಿಯೊಂದಿಗೆ ಹೋರಾಡುತ್ತಿರುವನು, ಸ್ವಲ್ಪ ಹೊತ್ತಾದ ಮೇಲೆ.)

ಭಗವಂತ: ಏನಿದು! ಆಗಲೇ ಮೂರು ಘಂಟೆಯಾಯ್ತು. ಒಂದು ರೂಪಾಯಿನೂ ಕಕ್ಕಲಿಲ್ಲವೇ? ಅಬ್ಬಬ್ಬಾ ಎಂಥಾ ಒರಟು ಕರಡಿ ಇದು? ಮೈಯೆಲ್ಲಾ ಪರಚಿಬಿಟ್ಟಿತು. ಮೊದಲನೇ ದಿನವೇ ಹೀಗಾದರೆ ಮುಂದೆ ದಿನಾಲೂ ಹ್ಯಾಗಪ್ಪಾ ಮಾಡೋದು? ಸಾವಿರ ಕಕ್ಕಿಸಲಿಕ್ಕೆ ಹಗಲು ರಾತ್ರಿ ಈ ಕರಡಿ ಜೊತೆ ಗುದ್ದಾಡಿದರೆ ಹೇಮಮಾಲಿನಿ ಹತ್ತರ ಯಾವಾಗ ಹೋಗೋದು? ಅಯ್ಯಯ್ಯೊ! ಮೇಲೇ ಬರತಾ ಇದೆ. ಎಪ್ಪಾ, ಬರ್‍ರ್ಯೊ ಬರ್‍ರ್ಯೊ—

(ಮಗ, ಮುದುಕಿ ಬರುತ್ತಾರೆ. ಅವರನ್ನು ನೋಡಿ ಕರಡಿ ಭಗವಂತನನ್ನು ಬಿಟ್ಟು ಓಡಿ ಹೋಗುವುದು.)

ಮಗ: ಹಾ ಇಲ್ಲಿದೆ ನನ್ನ ದುಡ್ಡಿನ ಚೀಲ!

ಭಗವಂತ: ಅಯ್ಯೊ ನನ್ನ ಕರಡಿ ಓಡಿ ಹೋಯ್ತು. ದಿನಕ್ಕೆ ಸಾವಿರ ಕಕ್ಕೋ ಕರಡಿ ಓಡಿ ಹೋಯ್ತು. ಹೇಮಮಾಲಿನಿ ಸಹಿತ ಓಡಿ ಹೋಯ್ತು. ರೀ ಯಾರ್‍ರೀ ಅದು? ನನಗಷ್ಟಾದರೂ ಉಳೀಲಿ ಬಿಡರಿ.

ಮಗ: ಇದು ನನ್ನ ದುಡ್ಡು.

ಭಗವಂತ: ಅಯ್ಯೋ ಸುಮ್ಮನೆ ಹೋಗರಿ.

ಮಗ: ರೀ, ಇಲ್ಲೊಬ್ಬ ಬುಶ್‌ಶರ್ಟ್ ಹಾಕಿದ ಹುಡುಗಾ ಬಂದಿದ್ನಾ?

ಭಗವಂತ: ಹೌದು.

ಮಗ: ಅವನೇ ತಾನೇ ನಿನಗೆ ಈ ದುಡ್ಡು ಕೊಟ್ಟದ್ದು?

ಭಗವಂತ: ಹೌದ್ಹಾದು, ನನ್ನ ಕುದುರೆ ತಕ್ಕೊಂಡು ಈ ಕರಡಿ ಬಿಟ್ಟು ಹೋದ ನಲ್ಲಾ! ಮದುವೆಯಾಗಿ ಹೇಮಮಾಲಿನಿ ಜೊತೆ ಗುದ್ದ್ಯಾಡೋಣ ಅಂದರೆ ಈ ಕರಡಿ ಜೊತೆ ಗುದ್ದ್ಯಾಡೋ ಹಾಗೆ ಮಾಡಿ ಹೋದ.

ಮುದಿಕಿ: ನೋಡಿದೆಯಾ ಇವನಿಗೂ ಮೋಸ ಮಾಡಿದಾನೆ!

ಭಗವಂತ: ಹೌದಾ? ನಾನೂ ಬರತೀನಿ. ಅದೆಲ್ಲಿ ಹೋಗತಾನೋ ನೋಡೋಣ.

ಮಗ: ನಡೀರಿ.

(ಸಂಗೀತ. ಎಲ್ಲರೂ ಹೋಗುವರು.)

ಕುದುರೆ ಹೋಗಿ ಆನೆ ಬಂತು

ಮೇಳ:
ಮಡಕೆ ಹೋಗಿ ಟಗರು ಬಂತು ಲಾ ಲಾ ಲಾ
ಟಗರು ಹೋಗಿ ದುಡ್ಡು ಬಂತು ಲಾ ಲಾ ಲಾ
ದುಡ್ಡು ಹೋಗಿ ಕುದುರೆ ಬಂತು ಲಾ ಲಾ ಲಾ

(ನರ್ತಿಸುತ್ತ ಕಿಟ್ಟಿ ಬರುತ್ತಾನೆ)

ಕಿಟ್ಟಿ: ಇದೇನಪ್ಪಾ? ಯಾವೂರಿದು? ಯಾವ್ದೊ ಹಳೇ ಊರಿದ್ದಾಗಿದೆ. ಎಲ್ಲರೂ ಮಲಗಿದಾರೆ. ಆಗಲೇ ಅಷ್ಟೊಂದ ರಾತ್ರಿಯಾಯ್ತೆ? ಇಲ್ಲೇನೋ ಸಂಗೀತ ನಡೆದಿರೋ ಹಾಗಿದೆ.

(ಸಂಗೀತ. ಸೂಳೆಮನೆ. ಒಬ್ಬಿಬ್ಬರು ಕೂತಿದ್ದಾರೆ. ಅವರ ಮುಂದೆ ಇವಳ ನೃತ್ಯ. ಕಿಟ್ಟಿ ತನ್ನ ಕುದುರೆಯೊಂದಿಗೆ ಪ್ರವೇಶಿಸಿ ಪ್ರೇಕ್ಷಕ ರಲ್ಲಿ ಕೂರುವನು. ನೃತ್ಯ ಮುಗಿಯುವುದು. ಸೂಳೆ ಕೈ ಮುಗಿ ಯುತ್ತ ಬರುವಳು, ಅಲ್ಲೇ ಒಂದು ಆನೆ ಇದೆ.)

ಸೂಳೆ: ಹ್ಯಾಗಿತ್ತು ನನ್ನ ನೃತ್ಯ ಸಭ್ಯ ಗೃಹಸ್ಥರೇ?

ಜನರು: ನಿಂದೂ ಒಂದು ನೃತ್ಯವೆ? ಥೂ.

(ಹೋಗುವರು. ಸೂಳೆ ಮುಖಭಂಗಿತಳಾಗಿ ನಿಲ್ಲುವಳು.)

ಕಿಟ್ಟಿ: ಇನ್ನೇನಿಲ್ಲ, ಚೆನ್ನಾಗಿತ್ತು ಅಂತ ಹೇಳತ್ತಿದ್ದರು. ಸಭ್ಯ ಗೃಹಸ್ಥರೇ ಅಂದೆಯಲ್ಲ—ಮನೆ ನೆನಪಾಗಿ ಓಡಿಹೋದರು. ಹೇಗಿತ್ತು ನನ್ನ ನೃತ್ಯ ರಸಿಕರೇ ಅಂದಿದ್ದರೆ ಬಾಯಿ ತೆರೆದುಕೊಂಡು ಬಿದ್ದಿರುತ್ತಿದ್ದರು.

ಸೂಳೆ: ಹೋಗಲಿ, ನೀ ಯಾರೋ ಹೊಸಬ ಈ ಊರಿಗೆ. ನಿನಗೆ ನನ್ನ ನೃತ್ಯ ಹ್ಯಾಗನ್ನಿಸಿತು?

ಕಿಟ್ಟಿ: ನನಗೆ? ಅಯ್ಯೋ! ಅಯ್ಯೋ! ಅಯ್ಯೋ—ಅದೇನ್ಹೇಳಲಿ? ನಿನ್ನ ನೃತ್ಯ ನೋಡಲಿಕ್ಕೆ ಎರಡು ಕಣ್ಣು ಸಾಲದು. ಸಂಗೀತ ಕೇಳಲಿಕ್ಕೆ ಎರಡು ಕಿವಿ ಸಾಲದು. ಅವೆರಡನ್ನೂ ಹೊಗಳಲಿಕ್ಕೆ ಒಂದು ನಾಲಗೆ ಸಾಲದು.

ಸೂಳೆ: ಹೆ ಹೆ ಹೆ ಅಷ್ಟೊಂದ ಚೆನ್ನಾಗಿತ್ತಾ?

ಕಿಟ್ಟಿ: ಅಯ್ಯಯ್ಯೋ!

ಸೂಳೆ: ಇನ್ನಷ್ಟು ಹೊಗಳಪ್ಪಾ.

ಕಿಟ್ಟಿ: ಸಾಧ್ಯವೇ ಇಲ್ಲ.

ಸೂಳೆ: ಯಾಕೆ?

ಕಿಟ್ಟಿ: ಹೇಳಿದೆನಲ್ಲ ಒಂದು ನಾಲಗೆ ಸಾಲದು ಅಂತ.

ಸೂಳೆ: ಸಾಧ್ಯವಾದಷ್ಟು ಹೊಗಳಪ್ಪ.

ಕಿಟ್ಟಿ: ಅದೇನು ಸೊಂಟ ತಿರವತೀಯಾ, ತಿರವತೀಯಾ, ತಿರವತೀಯಾ! ಆ ಸೊಂಟ, ಸ್ಪಿಂಗಿನಾ ತಾಯಿ?

ಸೂಳೆ: ಹೂನಪ್ಪಾ ನಂದೇ. ನೋಡು ನೋಡು. ಇನ್ನೇನು ಮಂದೀ ಸೊಂಟಾ ತಂದು ತಿರುವುಲಿಕ್ಕಾಗುತ್ತಾ?

ಕಿಟ್ಟಿ: ಆದರೂ ಆ ಸೊಂಟ ನಂದಲ್ಲ ಅನ್ನೋ ಹಾಗೆ ತಿರಿವಿದಿಯಲ್ಲ! ತಾಯಿ ಆ ಸೊಂಟ ಕೆಲಸಕ್ಕೆ ಬರುತ್ತಾ?

ಸೂಳೆ: ಓಹೊ!

ಕಿಟ್ಟಿ: ಛೇ ಛೇ! ನಿನ್ನಂಥ ಸೊಂಟವನ್ನು ಪಡೆದ ಆ ಭಾರತಾಂಬೆಯೇ ಧನ್ಯಳು! ಆದರೆ ನನಗೆ ದುಃಖ ಯಾಕೆ ಅಂದರೆ ಇಂಥಾ ಕಲೆ ಸವಿಯುವ ರಸಿಕರಿಲ್ಲದೆ ಹಳ್ಳಿಯ ಕೊಳ್ಳೀ ಬೆಳಕಿನಲ್ಲಿ ಹಾಳಾಗಿಹೋಗು ವಂತಾಯಿತೆ? ಹಾಯ್ ವಿಧಿಯೆ! ನಿನ್ನ ಲೀಲೆ ಅಗಾಧವಾದದ್ದು.

ಸೂಳೆ: ಅವಯ್ಯ! ಏನ್ಚಂದ ಮಾತಾಡ್ತೀಯು! ನನಗೂ ಹಾಗೇ ಅನ್ನಿಸುತ್ತೆ. ಏನ ಮಾಡಲಿ? ಹಿಂದೆ ರಾಜರಿದ್ದರು. ಒಂದೇ ಸಲ ನನ್ನ ನೃತ್ಯ ನೋಡಿ ಬಹುಮಾನವಾಗಿ ಈ ಆನೆ ಕೊಟ್ಟರಪ್ಪ. ಅಂಥಾ ರಸಿಕರು ಈಗೆಲ್ಲಿದ್ದಾರೆ?

ಕಿಟ್ಟಿ: ನೀನ್ಯಾಕಮ್ಮ ಈ ಪರಿ ಚಿಂತಿ ಮಾಡತಿ? ಒಂದೇ ಸಿನಿಮಾದಲ್ಲಿ ಈ ಸೊಂಟ ತಿರುವು. ಕೂತವರೆಲ್ಲಾ ಒನ್ಸ್‌ಮೋರ್ ಅನ್ನದಿದ್ದರೆ ನನಗೆ ಬಂದು ಹೇಳು. ನಾನು ಒನ್ಸ್‌ಮೋರ್ ಅಂತೀನಿ.

ಸೂಳೆ: ಇದ್ದಾರಲ್ಲಪ್ಪಾ ಎಷ್ಟೋ ಜನ ನಟನಟಿಯರು. ನಾನು ವಯಸ್ಸಾದವಳು.

ಕಿಟ್ಟಿ: ಅದಕ್ಕೇ ಹೇಳೋದು ನಿನಗೆ–ಸೊಂಟದಲ್ಲಿರೋ ಬುದ್ಧಿ ತಲೆಯಲ್ಲಿಲ್ಲಾಂತ. ಸಿನಿಮಾದಲ್ಲೇನೋ ನಟಿಯರಿದ್ದಾರೆ ನಿಜ. ಆದರೆ ಇಂಥಾ ಸೊಂಟ ಇದ್ದವರು? ಸಾಧ್ಯವೇ ಇಲ್ಲ. ಹಾಗೇನಾದರೂ ವಯಸ್ಸಾಗಿದೆ ಅಂತ ಅನ್ನಿಸಿದರೆ ಸಿನಿಮಾದಲ್ಲಿ ಬರೀ ಸೊಂಟಾನೇ ತೋರಿಸಲಿ—ಮೂರು ಗಂಟೆ ಭರ್ಜರಿಯಾಗಿರುತ್ತೆ. ಬೇಕಾದರೆ 'ಸೊಂಟದ ಕಥೆ' ಅಂತಾನೇ ಹೆಸರಿಡಬಹುದು.

ಸೂಳೆ: ಅಯ್ಯಾ ಏನಾದರೂ ಮಾಡಿ ನಾ ಸಿನೆಮಾ ಸೇರಲೇಬೇಕಲ್ಲ, ಏನ್ಮಾಡಲಿ?

ಕಿಟ್ಟಿ: ನೀನೇ ಒಂದು ಸಿನೆಮಾ ತೆಗೆದುಬಿಡು. ಎರಡು ಮೂರು ಲಕ್ಷ, ಅಷ್ಟೇ.

ಸೂಳೆ: ಎರಡು ಮೂರು ಲಕ್ಷ ರೂಪಾಯಿ! ಸಿನಿಮಾ ನಟನಟಿಯರೆಲ್ಲ ಅಷ್ಟೊಂದು ದುಡ್ಡು ಕೊಟ್ಟಿರತಾರಾ?

ಕಿಟ್ಟಿ: ಇಲ್ಲ. ಅವರಿಗೇ ಎರಡ ಮೂರ ಲಕ್ಷ ರೂಪಾಯಿ ಕೊಡತಾರೆ. ನಿನ್ನ ಕೇಸಿನಲ್ಲಾದರೆ ನೀನೇ ಕೊಡಬೇಕು. ಸಿನಿಮಾ ಬಂದ ಮೇಲೆ ನೋಡೋರಿಗೂ ಕೊಡಬೇಕಾದೀತು!

ಸೂಳೆ: ಸರಿ ಬಿಡಪ್ಪಾ. ನನಗೆ ಎರಡು ಲಕ್ಷ ರೂಪಾಯಿ ಸಿಕ್ಕು—ನಾನು ಸಿನೆಮಾದಲ್ಲಿ ಸೊಂಟ ಮಾಡಿಸಿ—ಅದೇನೋ ಅಂತಾರಲ್ಲ—ಹಾಗೆ.

(ಹೊರಡುವಳು)

ಕಿಟ್ಟಿ: ಅಮ್ಮಾ, ಇದೊಂದು ರಾತ್ರಿ ಇಲ್ಲಿ ಮಲಗಿದ್ದು ಬೆಳಗ್ಗೆದ್ದು ಹೋಗತೇನೆ, ಆಗಬಹುದಾ?

ಸೂಳೆ: ಅದಕ್ಕೇನಂತೆ ಇರಪ್ಪಾ. ನೀ ಅಲ್ಲಿ ಮಲಗಿಕೊ, ನಿನ್ನ ಕುದುರೆ ಅಲ್ಲಿ, ಆನೇ ಹತ್ತಿರ ಕಟ್ಟು. ಎರಡು ಮೂರು ಲಕ್ಷ! ನನ್ನ ಶಿವನೇ!

(ಹೋಗುವಳು. ಕಿಟ್ಟಿ ಮಲಗುವನು)

ಭಾಗವತ: ಓಹೋ! ನನಗಿಂತ ಮೊದಲೇ ನಮ್ಮ ಕಥಾನಾಯಕನ ಸವಾರಿ ಬಂದಬಿಟ್ಟಿದೆ. ಮಹಾ ಆಸಾಮಿ! ಇಲ್ಲಿ ಬಂದವರಿಗೆಲ್ಲಾ ಈ ಸೂಳೇ ಮೇಲೆ ಕಣ್ಣಾದರೆ ಇವನಿಗೆ ಈ ಆನೇ ಮೇಲೆ ಕಣ್ಣು! ನೋಡಬೇಕು —ಹ್ಯಾಗೆ ಲಪಟಾಯಿಸ್ತಾನೆ ಅಂತ! ಆಗಲೇ ಬೆಳಗಾಯ್ತು. ಅದೇಕೊ ಏಳ್ತಿದಾನೆ! ಎದ್ದು ಕುದುರೆ ಕಾಲಲ್ಲಿ ದುಡ್ಡಿನ ಗುಂಪಿ ಹಾಕ್ತಿದಾನೆ! ಆಕೋ ಬಂದು ಮತ್ತೆ ಮಲಗಿದ! ಯಾಕಿದ್ದೀತು? ನೋಡೋಣ

(ಕಿಟ್ಟಿ ಭಾಗವತ ಹೇಳಿದ ಹಾಗೆ ಎದ್ದು ಕುದುರೆ ಕಾಲಲ್ಲಿ ದುಡ್ಡಿನ ಗುಂಪು ಹಾಕಿ ಮತ್ತೆ ಮಲಗುವನು. ಸೂಳೆ ಎದ್ದು ಬರುವಳು. ಕುದುರೆ ಕಾಲಲ್ಲಿ ದುಡ್ಡು ನೋಡಿ.)

ಸೂಳೆ: ಅವಯ್ಯಾ! ಇಷ್ಟೊಂದು ದುಡ್ಡು ಕುದುರೆ ಕಾಲಲ್ಲಿ ಬಿದ್ದಿದೆಯಲ್ಲ!

(ಆ ಈಕಡೆ ನೋಡಿ, ಕಿಟ್ಟಿ ಮಲಗಿದ್ದನ್ನು ಗಮನಿಸಿ ದುಡ್ಡು ತೆಗೆದು ಕೊಳ್ಳ ಹೋಗುವಳು, ಕಿಟ್ಟಿ ಏಳುವನು.)

ಕಿಟ್ಟಿ: ಹಾ ಹಾ ಹಾ! ಹಿಡೀಬೇಡಮ್ಮ, ಅದು ನನ್ನ ದುಡ್ಡು.

ಸೂಳೆ: ನಿನ್ನ ದುಡ್ಡು?

ಕಿಟ್ಟಿ: ಹೌದು, ನನ್ನ ಕುದುರೆ ದಿನಾಲು ದುಡ್ಡಿನ ಲದ್ದಿ ಹಾಕತದೆ. ದಿನಕ್ಕೆ ಹತ್ತು ಸಾವಿರ ಹಾಕತದೆ!

ಸೂಳೆ: ಆಂ!

ಕಿಟ್ಟಿ: ಅದರಲ್ಲೇನು ಬಂತು?

ಸೂಳೆ: (ತನ್ನಷ್ಟಕ್ಕೆ) ಒಂದು ದಿನಕ್ಕೆ ಹತ್ತು ಸಾವಿರ—ಹತ್ತು ದಿನಕ್ಕೆ ಒಂದು ಲಕ್ಷ—ಒಂದು ತಿಂಗಳು ಲದ್ದಿ ಹಾಕಿಸಿದರೆ—ಅಯ್ಯಯ್ಯೊ—ಸುಲಭ ವಾಗಿ 'ಸೊಂಟದ ಕಥೆ' ತೆಗದ ಬಿಡಬಹುದಲ್ಲ! ಅಯ್ಯಾ! ನನ್ನ ಆನೆ ತಗೊಂಡು ಈ ಕುದುರೆ ಕೊಟ್ಟುಬಿಡತೀಯಾ ನನಗೆ?

ಕಿಟ್ಟಿ: ಛೇ ಛೇ, ನನಗೇನೋ ಕಣ್ಣೀರ ಕಂಡರೆ ಕರುಣೆ ಬರತದೆ ನಿಜ. ಹಾಗಂತ ಇಂಥಾ ಕುದುರೆ ಕೊಟ್ಟುಬಿಡೋದೆ? ಸಾಧ್ಯವಿಲ್ಲ.

ಸೂಳೆ: ಅಪ್ಪಾ, ಇಷ್ಟು ವರ್ಷ ನೃತ್ಯ ಮಾಡಿದೆ. ಎಲ್ಲಾ ವ್ಯರ್ಥ. ಈಗ ನನ್ನಾಸೆ ಪೂರೈಸೋ ಹಾಗೆ ಕಾಣತಿದೆ. ದಯಮಾಡಿ ಕೊಡೋ ರಾಜಾ.

ಕಿಟ್ಟಿ: ನೋಡಮ್ಮಾ, ನನಗೆ ಕರುಣೆ ಬರತಾ ಇದೆ. ಇನ್ನು ಕೇಳಬೇಡ.

ಸೂಳೆ: ಅಪ್ಪಾ, ಇಷ್ಟೊಂದು ಅಂಗಲಾಚತಾ ಇದೇನೆ. ನನಗೂ ವಯಸ್ಸಾಯ್ತು. ಸಿನೆಮಾದಲ್ಲಿ ಇರೋದೊಂದು ಸೊಂಟಾನಾದರೂ ಮಾಡಿಸಿ ಸಾಯೋಣ ಅಂದರೆ ಹೀಗಂತಿಯಲ್ಲೊ—ನನ್ನ ಶಿವನೇ—(ಅಳುವಳು).

ಕಿಟ್ಟಿ: ಸರಿ ಬಿಡಮ್ಮಾ. ನನ್ನನ್ನ ಹ್ಯಾಗೆ ಹಣ್ಣು ಮಾಡಬೇಕಂತ ನಿಮಗೆಲ್ಲಾ ತಿಳಿದಿರೋ ಹಾಗಿದೆ. ಅಯ್ತು ಕೊಟ್ಟೆ ಆನೆ ಕೊಡು.

ಸೂಳೆ: ಹೌದಾ? ತಗೊಳ್ಳಪ್ಪಾ! ತಗೊ! ದೇವರು ನಿನಗೆ ಒಳ್ಳೇದ ಮಾಡಲಿ.

(ಕಿಟ್ಟಿ ಆನೆ ತಗೊಂಡು ಹೋಗುವನು)

ಭಾಗವತ: ಏನಿದು ಬೆಳಗಾಗಿದೆ. ನಮ್ಮ ಕಥಾನಾಯಕ ಆನೆ ಮೇಲೆ ಕೂತು ಕೊಂಡು ಹೋಗಿ ಆಗಲೇ ಒಂದು ದಿನ ಆಯ್ತು. ಈ ಸೂಳೆ ಕುದುರೆ ಕಾಲಲ್ಲೇ ಕೂತು ಅದು ಲದ್ದೀ ಹಾಕೋದನ್ನೇ ನೋಡ್ತಿದಾಳೆ. ನೋಡೋಣ, ಏನಾಗುತ್ತೊ!

ಸೂಳೆ: ಅಯ್ಯ! ಇಷ್ಟು ಹೊತ್ತಾಯ್ತು. ಈ ಕುದುರೆ ನಿಜವಾದ ಲದ್ದೀ ಹಾಕಿತೇ ಹೊರತು ರೂಪಾಯಿ ಹಾಕಲೇ ಇಲ್ಲ! ಈ ಹುಡುಗ ನನಗೇನಾದರೂ ಮೋಸ ಮಾಡಿರಬಹುದಾ? ಯಾಕಿರಬಾರದು?

(ಮಗ, ಮುದುಕಿ, ಭಗವಂತ ಓಡುತ್ತೋಡುತ್ತ ಬರುವರು.)

ಭಗವಂತ: ಹಾ! ಇಲ್ಲಿದೆ ನನ್ನ ಕುದುರೆ!

ಸೂಳೆ: ಇದು ನನ್ನ ಕುದುರೆ. ನೀ ಯಾವನೋ? ದಿನಕ್ಕೆ ಹತ್ತ ಸಾವಿರ ರೂಪಾಯಿ ಲದ್ದೀ ಹಾಕೋ ಕುದುರೆ! ಆನೆ ಕೊಟ್ಟು ಕೊಂಡಿದೀನಿ?

ಮೂವರು: ಓಹೊ! ಇವಳಿಗೂ ಹಾಕಿದಾನೆ ನಾಮ!

ಭಗವಂತ: ಅಮ್ಮಾ, ಒಬ್ಬ ಬುಶ್‌ಶರ್ಟ್ ಹಾಕಿದ ಹುಡುಗ ಈ ಕುದುರೆ ಕೊಟ್ಟನಾ?

ಸೂಳೆ: ಹೌದು.

ಮಗ: ಸರಿ ಸರಿ. ಅವನೇ.

ಸೂಳೆ: ಯಾಕೆ ಏನಾಯ್ತು?

ಭಗವಂತ: ನೋಡಮ್ಮಾ, ಈ ಕುದುರೆ ಲದ್ದೀ ಹಾಕೋದೇನೊ ನಿಜ, ಆದರೆ ರೂಪಾಯಿ ಹಾಕೋದಿಲ್ಲ. ಆ ಹುಡುಗ ನಿನಗೆ ಮೋಸ ಮಾಡಿದಾನ್ನೆ, ನಮಗೂ ಹೀಗೆ ಮೋಸಮಾಡಿ ಬಂದಿದಾನೆ. ಅವನ್ನ ಹಿಡೀಬೇಕು. ಹೊರಟದೇವೆ. ನೀನೂ ಬರೋದಿದ್ದರೆ ಬಾ.

ಸೂಳೆ: ಹೌದಾ? ನನಗನಿಸಿತ್ತು. ನಡೀರಿ ನಾನೂ ಬರತೇನೆ.

(ಸಂಗೀತದೊಂದಿಗೆ ಎಲ್ಲರೂ ಹೋಗುವರು.)

## ಸಿಕ್ಕೆಯೋ ನನ್ನ ಸರದಾರ

ಮೇಳ: ದುಡ್ಡು ಹೋಗಿ ಕುದುರೆ ಬಂತು ಲಾ ಲಾ ಲಾ
ಕುದುರೆ ಹೋಗಿ ಆನೆ ಬಂತು ಲಾ ಲಾ ಲಾ ॥

(ಕಿಟ್ಟಿ ಆನೆಯೊಂದಿಗೆ ಪ್ರವೇಶಿಸುವನು)

ಕಿಟ್ಟಿ: ಇಲ್ಲೀತನಕ ಅವರಿವರನ್ನ ಮೋಸ ಮಾಡಿ ಆನೆಯಾಯ್ತು. ಈ ಆನೇನ್ನ ಮಾರಬಾರದು, ಇಟ್ಕೊಳ್ಳಬಾರದು. ಮದುವೆ ಅಂತೂ ಆಗಲೇ ಇಲ್ಲ. ಇದು ಯಾವೂರು ಭಾಗವತರೇ, ಬಹಳ ವಿಚಿತ್ರವಾಗಿದೆ.

ಭಾಗವತ: ಇದು ಕುರಿಯೂರು ಅಂತ. ಇಲ್ಲಿ ಒಬ್ಬ ರಾಜ ಇದಾನೆ. ಅವನಿಗೆ ಒಬ್ಬಳು ಮಗಳಿದಾಳೆ. ಸುಂದರಿ. ನಿನಗೆ ತಕ್ಕವಳು, ಆದರೆ ಏನು ಮಾಡೋದು? ಮದುವೆ ಆಗೋದಿಲ್ಲ ಅಂತ ಹಟ ಹಿಡಿದಿದಾಳೆ.

ಕಿಟ್ಟಿ: ಯಾಕೆ?

ಭಾಗವತ: ಅವಳದ್ದೊಂದು ಶರ್ತ್ ಇದೆ.

ಕಿಟ್ಟಿ: ಅದೇನು ಭಾಗವತರೇ?

ಭಾಗವತ: ಹಿಂದೆ ಹಿಂಡು ಶಿಷ್ಯರಿರಬೇಕು. ಮುಂದೆ ಹಿಂಡು ಶಿಷ್ಯರಿರಬೇಕು. ವಯಸ್ಸು ಇಪ್ಪತ್ತಕ್ಕೆ ಮೀರಿರಬಾರದು. ಅಂಥಾ ಒಬ್ಬ ಸಣ್ಣ ಗುರು ಬಂದು ಬೆಟ್ಟ ಹಿಂದೋಡಿಸಬೇಕು. ಮುಂದೋಡಿಸಬೇಕು. ಹಾಗೆ ಮಾಡಬಲ್ಲ ಎಳೆಯ ಸ್ವಾಮಿಯನ್ನೇ ಮದುವೆಯಾಗುತೇನೆ ಅಂತ ಹಟ ಹಿಡಿದಿದ್ದಾಳೆ.

ಕಿಟ್ಟಿ: ಕಷ್ಟ ಬಂತಲ್ಲ ಭಾಗವತರೆ.

ಭಾಗವತ: ಇಲ್ಲೀತನಕ ಅನೇಕರು ಬಂದು, ಪ್ರಯತ್ನಮಾಡಿ, ಸೋತು ತಲೆ ಹೊಡಿಸಿಕೊಂಡು ಹೋದರು.

ಕಿಟ್ಟಿ: ತಲೆ ಹೊಡಿಸಿಕೊಂಡು?

ಭಾಗವತ: ಹೂ ಮತ್ತೆ. ರಾಜಕುಮಾರಿ ಸಿಗ್ತಾಳೇಂತ ಸಿಕ್ಕ ಸಿಕ್ಕವರು ಬಂದು ಪ್ರಯತ್ನಮಾಡಿದರೆ ಆಗ್ತದಾ? ದೊಡ್ಡ ದೊಡ್ಡ ಮಾಂತ್ರಿಕರು, ತಾಂತ್ರಿಕರಿಗೇ ಸಾಧ್ಯವಾಗಲಿಲ್ಲ.

ಕಿಟ್ಟಿ: ಸರಿ. ಈಗ ನಾನೊಬ್ಬ ಉಳಿದಿದೇನೆ ಅನ್ನಿ.

ಭಾಗವತ: ನಿಶ್ಚಿತ್ಯವಪ್ಪ ಅದು.

ಕಿಟ್ಟಿ: ಹಾಗಾದರೆ ಹೊರಟು ಹೋಗೋದೇ ಒಳ್ಳೇದು. ಇಲ್ಲದಿದ್ದರೆ ರಾಜಕುಮಾರಿ ಮೇಲೆ ಮನಸ್ಸಾಗಿ ನಾನೂ ತಲೆ ಹೊಡಿಸ್ಕೊಂಡು ಹೋಗೋದಾಗಬಹುದು. ಮುಂದಿನೂರಿಗೆ ಹೋಗಿ, ಇರೋ ಆನೆ ನಾದರೂ ಮಾರಿ, ಸಿಕ್ಕಂಥ ಹೆಣ್ಣ ಮದುವೆ ಮಾಡಿಕೊಂಡು ಹೋಗ ಬಹುದು.

(ಹೊರಡುವನು. ಅಷ್ಟರಲ್ಲಿ ಮುದುಕಿ, ಮಗ, ಭಗವಂತ, ಸೂಳೆ ನಾಲ್ವರೂ ಬರುವರು.)

ನಾಲ್ವರು: ಸಿಕ್ಕೆಯೋ ನನ್ನ ಸರದಾರ!

ಮುದುಕಿ: ಎಲ್ಲೋ ನನ್ನ ಟಗರು?

ಮಗ: ಎಲ್ಲೋ ನನ್ನ ದುಡ್ಡು?

ಭಗವಂತ: ಎಲ್ಲೋ ನನ್ನ ಕುದುರೆ?

ಸೂಳೆ: ನನ್ನ ಆನೆ ಇಲ್ಲೇ ಇದೆ.

(ಕಿಟ್ಟಿ ತಬ್ಬಿಬ್ಬಾಗಿ ಅವರಿಗೆಲ್ಲ ಕೂತುಕೊಳ್ಳ ಹೇಳುವನು. ರಾಜಕೀಯ ಮುಖಂಡರ ಧಾಟಿಯಲ್ಲಿ)

ಕಿಟ್ಟಿ: ಮಹನೀಯರೆ ಮತ್ತು ಮಹಿಳೆಯರೆ, ನಾನು ನಿಮಗೆ ಮೋಸ ಮಾಡಿದೆ ಅಂಥ ನಿಮಗೂ ತಿಳಿದದ್ದು ಸಂತೋಷ. ಈಗಲಾದರು ನಿಮಗನಿಸಿರ ಬೇಕು—ನಾನು ಬಹಳ ಪ್ರಾಮಾಣಿಕ ಅಂತ. ಯಾಕೆಂದರೆ ನಾನು ನಿಮಗೆ ತಡವಾಗಿಯಾದರೂ ತಿಳಿಯುವ ಹಾಗೆ ಮೋಸ ಮಾಡಿದೆ. ನಮ್ಮ ಮಂತ್ರಿಗಳ ಹಾಗೆ ಕೊನೇತನಕ ನಿಮಗೆ ತಿಳಿಯದ ಹಾಗೆ ಮೋಸ ಮಾಡಬಹುದಿತ್ತು. ಆದರೆ ನಾನು ಹಾಗೆ ಮಾಡಲಿಲ್ಲ. ಹೌದಾ?

ಎಲ್ಲರೂ: ಹೌದು ಹೌದು.

ಕಿಟ್ಟಿ: ಅಷ್ಟೇ ಅಲ್ಲ, ನಾನು ಮಾಡಿದ ತಪ್ಪನ್ನ ಸರಿಪಡಿಸಬಲ್ಲೆ—ನಿಮಗೆಲ್ಲ ಸಂತೋಷವಾಗುವ ಹಾಗೆ.

ಎಲ್ಲರೂ: ಅದು ಹ್ಯಾಗಪ್ಪಾ?

ಕಿಟ್ಟಿ: ಹೀಗೆ: ಆನೆಯನ್ನು ಈ ಸೂಳೆಗೆ ಕೊಡತೇನೆ. ಅವಳು ಕುದುರೆ ಕೊಡತಾಳೆ. ಕುದುರೆ ಈ ಭಗವಂತನಿಗೆ ಕೊಡತೇನೆ. ಅವನು ದುಡ್ಡು ಕೊಡತಾನೆ. ದುಡ್ಡನ್ನ ಈ ಮಗನಿಗೆ ಕೊಡತೇನೆ. ಅವನು ಟಗರು ಕೊಡತಾನೆ. ಟಗರು ಈ ಮುದುಕಿಗೆ ಕೊಡತೇನೆ. ಆಯ್ತಾ?

ಎಲ್ಲರೂ : ಹೌದಲ್ಲ ?

ಕಿಟ್ಟಿ : ಇಷ್ಟೆ, ಅದು ಇರೋದು ಇಷ್ಟೆ. ನಾ ಹೇಳೋದು ಇಷ್ಟೆ. ನೀವೆಲ್ಲ ದೊಡ್ಡವರು. ಅಂತಃಕರಣ ಇದ್ದವರು, ಆದರೆ ಮುಗ್ಧರು. ನಾನು ಇಷ್ಟೆಲ್ಲಾ ಕೊಟ್ಟರೆ ನಿಮಗೆ ನೆಮ್ಮದಿ ಸಿಕ್ಕೀತ ? ಈ ಮುದುಕಿ ಸಾಯೋ ಕಾಲಕ್ಕೆ ಮಾತಾಡಿಕೊಂಡಿರಲಿಕ್ಕೆ ಸಂಗಾತಿ ಬೇಕು ಅಂದಳು. ಅವಳ ಟಗರು ಅವಳಿಗೆ ಸಿಕ್ಕರೆ ಸಂಗಾತಿ ಸಿಕ್ಕ ಹಾಗಾಯ್ತ ? ಈತನ ತಂದೆ ತೀರಿ ಹೋದ. ದುಡ್ಡು ಸಿಕ್ಕರೆ ತೀರಿಹೋದ ತಂದೆ ಸಿಗ್ತಾನಾ ? ಭಗವಂತಾ, ನಿನ್ನ ಕುದುರೆ ಸಿಕ್ಕರೆ ಹೇಮಮಾಲಿನಿ ಸಿಗತಾಳಾ ? ಸೂಳೆಮ್ಮಾ ನಿನ್ನ ಆನೆ ನಿನಗೆ ಸಿಕ್ಕರೆ ಸಿನಿಮಾದಲ್ಲಿ ನಿನ್ನ ಸೊಂಟ ಮೂಡಿತಾ ?

ಎಲ್ಲರೂ : ಹೌದಲ್ಲ ! ಮುಂದೇನ್ಮಾಡೋಣ ! ಏನಪ್ಪಾ ಮಾಡೋಣ ? ನೀನೇ ಒಂದ ದಾರಿ ಹೇಳು.

ಕಿಟ್ಟಿ : ನೀವೆಲ್ಲ ನಾ ಹೇಳಿದ ಹಾಗ ಕೇಳಿದರೆ ನಿಮ್ಮ ಆಸೆಗಳನ್ನೆಲ್ಲಾ ಪೂರೈಸ ಬಲ್ಲೆ.

ಭಗವಂತ : ಕೇಳ್ತೀವಪ್ಪಾ, ನಾವೆಲ್ಲ ನಿನ್ನ ಕುರಿಗಳು ಅಂತ ತಿಳಕೊ. ಎಲ್ಲಿ ಎಲ್ಲರೂ ಒಂದು ಸಲ ಕುರಿಗಳ ಹಾಗೆ ಕೂಗ್ರಿ ನೋಡೋಣ.

ಎಲ್ಲರೂ : ಬ್ಯಾ ಬ್ಯಾ.

ಕಿಟ್ಟಿ : ನೀವೆಲ್ಲ ನನ್ನ ಶಿಷ್ಯರಾಗಬೇಕು. ನಮ್ಮ ಉಪಾಯ ಫಲಿಸಿ ನಾನು ರಾಜನಾದರೆ ನಿಮ್ಮ ಆಸೆಗಳೆಲ್ಲಾ ಫಲಿಸುತ್ತವೆ.

ಭಗವಂತ : ಹೇಮಮಾಲಿನಿ ಸಿಗತಾಳಾ ?

ಸೂಳೆ : ಸಿನಿಮಾದಲ್ಲಿ ನನ್ನ ಸೊಂಟ ಮೂಡುತ್ತಾ ?

ಕಿಟ್ಟಿ : ಅಗತ್ಯವಾಗಿ. ಭಾಗವತರೇ,

ಭಾಗವತ : ಯಾಕಪ್ಪ ಕರೆದೆ ?

ಕಿಟ್ಟಿ : ನೀವು ಈ ಊರ ರಾಜನ ಬಳಿಗೆ ಹೋಗಿ—ನಾಳೆ ಬೆಳಿಗ್ಗೆ, ಸೂರ್ಯೋದಯಕ್ಕೆ ಮುಂಚೆ ಜಗದ್ಗುರು ಕಿಟ್ಟೊಸ್ವಾಮಿ ಶಿಷ್ಯ ಸಮೇತ ಬಂದು ಬೆಟ್ಟವನ್ನು ಹಿಂದಕ್ಕೆ ಮುಂದಕ್ಕೆ ಓಡಿಸ್ತಾರೆ ಅಂತ ತಿಳಿಸಿ.

ಭಾಗವತ : ಆಗಲಪ್ಪ.

ಕಿಟ್ಟಿ: ನಮ್ಮ ಆನೆ ಎಲ್ಲಿ? ಭಗವಂತ, ಈ ಆನೆಯ ಮೇಲೆ ಗಿಡ, ಮರ, ಬಳ್ಳಿ ಮುಂತಾಗಿ. ಕಾಡಿನ ಚಿತ್ರ ಬಿಡಿಸು, ಬೇಗ. ಮಾಡಬೇಕಾದ ಕೆಲಸ ಬೇಕಾದಷ್ಟಿದೆ!

(ಹೋಗುವರು.)

ಜಗದ್ಗುರು ಕಿಟ್ಟೊ ಮಹಾಸ್ವಾಮಿ

(ಎಲ್ಲರೂ ನರ್ತಿಸುತ್ತ ಬರುತ್ತಾರೆ.)

ಮೇಳ:

ಬಂದಾನೊ ಬಂದಾನೊ
ಎಳಿಸ್ವಾಮಿ ಬಂದಾನೊ
ಕಿಟ್ಟಿ ಸ್ವಾಮಿ ಬಂದಾನೊ
ಮಣ ಮಣ ಮಂತ್ರವ
ಜಪಿಸುತ ನಿಂತಾನೊ
ಮಹಿಮೆಯ ತೋರಿಸುತ ||

ಕಾವಿಯ ಹೊದ್ದಾನೊ
ಜಪಸರ ಹಿಡಿದಾನೊ
ಮಣ ಮಣ ಮಂತ್ರವ
ಗೊಣಗುತ ನಿಂತಾನೊ
ಜಗದೊಳಗೆ।
ಇರದಂಥ।
ಮಹಿಮೆಗಳ।
ಮೆರೆದಾನೊ।
ಮಹಿಮೆಗಳ ಮೆರೆದಾನೊ ||

ನಮೋ ನಮೋ ನಿನಗೆ
ಕಿಟ್ಟೊ ಸ್ವಾಮಿ
ನಮೋ ನಮೋ ನಿನಗೆ
ಕಿಟ್ಟೊ ಸ್ವಾಮಿ ||

ಕಿಟ್ಟೊ ಮಹಾಸ್ವಾಮಿಗೆ ಜೈ ಜೈ ಜೈ ||

(ನರ್ತಿಸುತ್ತ ಈ ಹಾಡಾದ ಮೇಲೆ—ಹಿಂದೆ ಕಿಟ್ಟಿ ಸನ್ಯಾಸಿಯ ವೇಷದಲ್ಲಿ ನಿಂತಿದ್ದಾನೆ. ಒಂದು ಕಡೆ ರಾಜ, ರಾಜಕುಮಾರಿ, ಮತ್ತು ಪರಿವಾರ ಇದೆ. ಜಗದ್ಗುರು ಕಿಟ್ಟೋಗೆ ಜಯಕಾರವಾದ ಮೇಲೆ ಕಿಟ್ಟಿ ನ ನಾ ನಿ ನೀ ನು ನೂ ನೆ ನೇ ನೈ ನೊ ನೋ ನೌ ನಂ ನಃ। ಮ ಮಾ ಮಿ ಮೀ ಮು ಮೂ ಮೆ ಮೇ ಮೈ ಮೊ ಮೋ ಮೌ ಮಂ ಮಃ। ಎ ಬಿ ಸಿ ಡಿ ಇ ಎಫ್ ಜಿ ಎಚ್ ಐ ಜೆ ಕೆ ಎಲ್ ಎಮ್ ಎನ್ ಒ ಪಿ ಕ್ಯೂ ಆರ್ ಎಸ್ ಟೀ ಯೂ ವಿ ಡಬ್ಲ್ಯು ಎಕ್ಸ್ ವಾಯ್ ಜಡ್ಡಃ। ಎಂದು ಮಂತ್ರ ಗುಣುಗಿ ಬೂದಿ ಊದುತ್ತಾನೆ. ಪ್ಕೆ ಮೇಲೆ ಮರಗಿಡಗಳ ಚಿತ್ರ ಗಳನ್ನುಳ್ಳ ಆನೆ ಆಕಡೆ, ಈಕಡೆ ಓಡುತ್ತದೆ. ರಾಜನ ಪರಿವಾರದವರು ಆಶ್ಚರ್ಯ ವ್ಯಕ್ತಪಡಿಸುತ್ತಾರೆ. ಶಿಷ್ಯರ ಜಯಕಾರವಾಗುತ್ತದೆ. ಜನ ಅಡ್ಡ ಬೀಳುತ್ತಾರೆ. ರಾಜ 'ಹೋಗಮ್ಮಾ ಜಗದ್ಗುರು ಕಿಟ್ಟೋ ಸ್ವಾಮಿಗೆ ಮಾಲೆ ಹಾಕೆಂದು' ಹೇಳುತ್ತಾನೆ. ರಾಜಕುಮಾರಿ ಕಿಟ್ಟಿಗೆ ಮಾಲೆ ಹಾಕುತ್ತಾಳೆ. ಮತ್ತೆ ಜಯಕಾರವಾಗುತ್ತದೆ. ಅಷ್ಟರಲ್ಲಿ ಕಿಟ್ಟಿಯ ಅಜ್ಜಿ 'ಎಲ್ಲಿದಿಯೋ ಕಿಟ್ಟೀ'—ಎಂದು ಬರುತ್ತಾಳೆ. 'ನೋಡಜ್ಜಿ, ಹತ್ತ ಪೈಸಾದಲ್ಲೇ ಮದುವೆ ಮಾಡಿಕೊಂಡೆ, ಅದೂ ರಾಜಕುಮಾರೀನ!' ಎನ್ನುತ್ತಾನೆ ಕಿಟ್ಟಿ, ಮತ್ತೆ ಜಯಕಾರವಾಗುವಾಗ.)

— ತೆರೆ —

## ಪಾತ್ರಗಳು

ಮುದುಕ

ಮುದುಕಿ

ಹುಡುಗ

ರಂಗ ಪ್ರಯೋಗದ ಬಗ್ಗೆ ಸೂಚನೆಗಳು:

ಗದ್ಯವೂ ಅಲ್ಲದ ಪದ್ಯವೂ ಅಲ್ಲದ 'ಪಗದ್ಯ' ಶೈಲಿಯಲ್ಲಿ ಬರೆದ ಈ ನಾಟಕದಲ್ಲಿ ಲಯಬದ್ಧವಾಗಿ ಮಾತು ಆಡಬೇಕು. ಸಣ್ಣಗೆ ಹಿನ್ನೆಲೆ ಸಂಗೀತವನ್ನು ಬಳಸಿಕೊಳ್ಳಬಹುದು.

# ಟಿಂಗರ ಬುಡ್ಡಣ್ಣ

(ರಂಗದ ಎಡಬದಿಯಲ್ಲಿ ಒಂದು ಸಾದಾ ಪಲ್ಲಂಗ. ಅದರ ಮೇಲೆ ಮುದುಕ ಕುಳಿತಿದ್ದಾನೆ. ಗಾಳಿಯಲ್ಲಿ ಬಟ್ಟು ಆಡಿಸುತ್ತ ಏನೇನೋ ಧೇನಿಸುತ್ತ ಖುಷಿಯಾಗಿರುವವ. ಅಲ್ಲಿಯೇ ಎಲ್ಲಿಯೋ ಅವನ ಪಟಗಾ ಇದೆ. ರಂಗದ ಬಲ ಬದಿಗೆ ಮುದುಕಿ. ನೆಲದಮೇಲೆ ಕುಳಿತು ಅಡುಗೆ ಮಾಡುವಂತೆ ನಟನೆ. ಊದುಗೊಳವೆ ಊದಿ, ಹೊಗೆಯನ್ನು ಕೈಯಿಂದ ಝಾಡಿಸುವಂತೆ. ಮುದುಕನೊಂದಿಗೆ ಮುದುಕಿಯದು ಬಹಳ ಸರಸ.)

ಮುದುಕ: ಲೇ.

ಮುದುಕಿ: (ಮೌನ).

ಮುದುಕ: ಏ.

ಮುದುಕಿ: (ಮೌನ).

ಮುದುಕ: ಬಂಗಾರೀ.

(ಮುದುಕಿ ಒಲ್ಲದ ಮನಸ್ಸಿನಿಂದ ಏಳುವಳು)

ಸಿಂಗಾರೀ

(ಮುದುಕನ ಕಡೆ ಹೊರಡುವಳು)

ಕಟ್ಟಾಣೀ

(ಸಮೀಪ ಬಂದಿರುವಳು)

(ಲಕ್ಷ್ಯಕ್ಕೆ ಬರದೆ, ಗಟ್ಟಿಯಾಗಿ)

ಲೇ ಮುದುಕೀ......

ಮುದುಕಿ: ಏನ ಏನ ಏನ ಅದೂ ?
ಏನ ಬೇಕ ನಿನಗ ?

ಮುದುಕ: ಲೇ ಮುದುಕೀ
ಏನ ಏನ ಏನ ಅಂತ
ಕೇಳಬ್ಯಾಡ ಕೆದಕಿ
(ಸೆರಗು ಜಗ್ಗಿ)
ಇತತ ಬಾ ಇಲ್ಲೆ.

ಮುದುಕಿ: (ಕೊಸರಿಕೊಂಡು ಹುಸಿ ಮುನಿಸಿನಿಂದ)
ಇಷ್ಟೊತ್ತ್ನ ನೆಟ್ಟಗಿದ್ದಿ
ಈಗೇನಾತs ಕೂಸs ?

ಮುದುಕ: ಏನ ಏನ ಏನ ಅಂತ
ಪಿಟ್ಟೀ ಹಚ್ಚಬ್ಯಾಡ ಮುದುಕೀ.
ತದಕಿ ಬಿಟ್ಟೇನ ನೋಡ ಒಮ್ಮೆ
ಇತತs ಬಾ ಇಲ್ಲೆ.

ಮುದುಕಿ: ಅಯ್ಯs ನೆನ ಕಮರಾಮಾ
ಮಕಾ ತೋರಸು ನೋಡsನು.
(ಮುದುಕ ಮುಖ ಮುಂದೆ ಮಾಡುವನು)
ಅಯ್ಯs ನಿನ ಮಾರ್‍ಯಾಗ
ಮದ್ದ ಅರಿಲಿ
ಮುದುಕೀ ಮುದುಕೀ ಅಂತೀಯಾ ?
ಮುದುಕೀ ಅಂದ್ರ, ನಾನಿನ್ನ
ಏನ ಕರಿಲೀ ?

ಮುದುಕ: ಏನ ಕರಿತೀ ?

ಮುದುಕಿ: ಏನ ಕರಿಲಿ, ಹೇಳ.

ಮುದುಕ: ಏನ ಕರಿತಿ, ಹೇಳ.

ಮುದುಕಿ: ನೀ ಹೇಳ.

ಮುದುಕ: ನೀ ಹೇಳ.

ಮುದುಕಿ: ಮುದುಕಾ ಅಂತsನಿ.

(ಎಂದವಳೇ ಮೊದಲಿನ ಜಾಗೆಗೆ ಹೋಗಿ ಕೂಡ್ರುವಳು. ಮೌನ, ಮತ್ತೆ)

ಮುದುಕ: ಲೇ

...............

ಲೇ ಬಂಗಾರೀ

...............

ಲೇ ಸಿಂಗಾರೀ

...............

ಲೇ ಮುದುಕೀ

(ಸಮೀಪ ಹೋಗುವನು)

ಎಷ್ಟ ಒದರಬೇಕ ನಿನ್ನ ?
ನನ್ನ ಕೂಗು ನನ್ನ ಬಿಡಾಕ
ಒಂದ ತಾಸ ಬೇಕ
ನನ್ನ ಬಿಟ್ಟು ನಿನ್ನ ಮುಟ್ಟಾಕ
ಒಂದು ದಿನ ಬೇಕ
ಮುಟ್ಟಿದ ಮ್ಯಾಲ ನೀ ಏಳಾಕ
ಒಂದ ತಿಂಗಳ ಬೇಕ
ಉಶ್ ಅಂತ ಇಲ್ಲಿ ಬರಾಕ
ಒಂದ ವರಸ ಬೇಕ

ಮುದುಕಿ: ಏನ ಏನ ಏನ ಅಂತ

ಮುದುಕ: ನನ್ನ ಸ್ವಾಟೀ ತಿವ್ಯಾಕ ನಿನಗ

ಮುದುಕಿ: ಒಂದ ಮಿನಿಟ ಸಾಕ.

(ತಿವಿಯುವಳು. ಮುದುಕ ಗಸಕ್ಕನೆ ಕೈ ಹಿಡಿಯುವನು. ಸಣ್ಣ ಹುಡುಗರಂತೆ ಚೇಷ್ಟೆಯ ದನಿಯಲ್ಲಿ)

ಮುದುಕ: ಸಿಕ್ಕೆಲೆ ಮುದುಕೀ। ಎಲ್ಲಿ
ಹೊಕ್ಕಿಲೇ ಮುದುಕೀ

(ಕುಣಿಯುತ್ತ ಅವಳನ್ನು ಸುತ್ತುವನು. ಪಲ್ಲಂಗದ ಮೇಲೆ ಕೂಡ್ರುವರು.)

ಮುದುಕಿ: ಏನ ಆಗೇತಿ ಧಾಡಿ ನಿನಗ?
ಏನ ದೆಸೀ ತಿರಗೇತಿ ನಿನಗ?
ಗಾಳಿ-ಪಾಳಿ ಹೊಕ್ಕತೇನ
ಮೈಯಾಗ?

ಮುದುಕ: ಗಾಳಿಯಿಲ್ಲ ಗೂಳಿಯಿಲ್ಲ
ಮೈಯಾಗ। ಮುದಕೀ.
ಹುಳಾ ಏನ ಹೊಕ್ಕಂಡಾವ
ಮನದಾಗ.

ಮುದುಕಿ: ಹುಳಾನs? ಅವ್ವಯ್ಯಾ,
ನಾ ಹೊಕ್ಕನಿ. (ಏಳುವಳು)

ಮುದುಕ: ಕುಂಡ್ರು ನನ ಜೋಕುಮಾರಿ
ಎಲ್ಲಿ ಹೊಕ್ಕೀದಿ.

(ಕೂಡ್ರುವಳು)

ಮುದಕೀ, ಕೈಯಾಗ ಕಡ್ಡೀ ಕೊಟ್ಟು
ನಾ ಹೇಳ್ತನಿ
ಬೀಳ ಅನ್ನು ಈಗs ನಿನಗ
ಕಾಲ ಬೀಳ್ತನಿ.
ನನಗ ಮುದಕಾ ಅನಬ್ಯಾಡ.

ಮುದುಕಿ: ಹಂಗಾರ ನನಗ ನೀ
ಯಾಕ ಮುದುಕೀ ಅಂತೀ?

ಮುದುಕ: ನಿನಗ ಮುದಕೀ ಅನ್ನಾಕ ಹತ್ತಿ
ಸಾವಿರ ವರಸ ಆತು.

(ಕನಸಿನ ಮೂಡಿನಲ್ಲಿ)

ನೆನಪೈತೇನು ಮುದಕೀ?

ನೀ ಒಂದ ಚೋಟಿ ಇದ್ದಿ.
ಬಂಗಾರದ ತೊಟ್ಟಿಲದಾಗ
ಬೆಳ್ಳೀ ಬಟ್ಟ ಚೀಪಿಗೆಂತ
ಬಟ್ಟಲಗಣ್ಣು ಬಿಟಗಂಡು
ಬಿದಕಂತಿದ್ದೀ.

ಮುದುಕಿ: (ಅದೇ ಮೂಡಿನಲ್ಲಿ)
ಬಣ್ಣದ ಪಾಟೀಚೀಲಾ ಹೊತ್ತು
ಸಾಲಿ ಬಿಡ್ವದಕಿಂತ ಮುಂಚೇ
ಚೊಣ್ಣಾ ಮ್ಯಾಲೆ ಏರಿಸಿಕೆಂತ
ನೀ ಬರತದ್ದೀ.

ಮುದುಕ: ನಿನ್ನ ಸನೇಕ ಓಡಿ ಬಂದು
ಬಗಲಾಗ ನಿನ್ನ ಎತಿಗೆಂಡು
ಸಿಕ್ ಸಿಕ್ ಸಿಕ್ಕೆಲೆ ಸಿಕ್ಕೆಲೆ ಮುದುಕೀ
ಅಂತ ಮ್ಯಾಲ ತೂರತಿದ್ದೆ.

ಮುದುಕಿ: ಹೌದ ಹೌದು.

ಮುದುಕ: ಬಣ್ಣದ ಪರಕಾರ ಏರಿಸಿಗೆಂಡು
ಬಣವೀ ಸಂದ್ಯಾಗ ನೀನು
ಬಟ್ಟಲಗಣ್ಣ ಬಿಟಗಂಡು
ನಿಂತಿರತಿದ್ದೀ.

ಮುದುಕಿ: ಶಿಸ್ತ ಕರಾಪ್ ಮಾಡಿಸಿಗೆಂಡು
ಚಿಗರಮೀಸಿ ಸವರಿಕೆಂತ
ಹಾವಿನ ಬುಟ್ಟಿನ ಹಾವಿನಂಗ
ನೀ ಬರತಿದ್ದೀ.

ಮುದುಕ: ಬಂದ ನಿನ್ನ ಹಿಡೀತಿದ್ದೆ.

ಮುದುಕಿ: ತಪ್ಪಿಸಿಗೆಂಡು ಓಡತಿದ್ದೆ.
ಓಡಿ ಕ್ಯಾಕೀ ಹೊಡೀತಿದ್ದೆ.

ಮುದುಕ: ಏನ ಕ್ಯಾಕೀ ಹೊಡೀತಿದ್ದಿ
ನೆನಪೈತೇನು ?

ಮುದುಕಿ: ಏನ ಕ್ಯಾಕಿ ಹೊಡೀತಿದ್ದೆ?

ಮುದುಕ: ಏನ ಹಾಡ ಹಾಡತಿದ್ದಿ?

ಮುದುಕಿ: ಏನ ಹಾಡ ಹಾಡತಿದ್ದೆ?

ಮುದುಕ: (ರಾಗವಾಗಿ)
ಮಾವಾ ಮಾವಾ ಮಾತಾಡು.

ಮುದುಕಿ: ಹ್ಞಾ ನೆನಪಾತು
ಮಾವಾ ಮಾವಾ ಮಾತಾಡು
ಮಾವಿನ ಗಿಡದಾಗ ಜೋತಾಡು

ಮುದುಕ: ಹಂಗ ಹಾದಿಗೆ ಬಾರs
ನನ ಮುದಕೀ
ಮುದಕಾ ಮುದಕಾ ಅನಬ್ಯಾಡ
ಮಾವಾ ಅನ್ನು
ಮುದಕೀ ಮುದಕೀ.

ಮುದುಕಿ: ಮಾವಾ ಮಾವಾ.

ಮುದುಕ: ಮುದಕೀ ಮುದಕೀ ನಿನಗೊಂದು
ಕಳ್ಳಿನ ಮಾತು ಹೇಳsದೈತಿ.

ಮುದುಕಿ: ಹೇಳ ಹೇಳ ಮಾವಾ.

ಮುದುಕ: ಹೇಳಿದ ಮ್ಯಾಲ ನಗಬಾರದೂ.

ಮುದುಕಿ: ನಗsದಿಲ್ಲ ಹೇಳ ಮಾವಾ.

ಮುದುಕ: ಬಾಯಾಗ ಸೀರೀ ಸೆರಗ ಕಚಿಗೆಂಡು
ಅಡಿಗೀ ಮನಿಗೆ ಓಡಬಾರದೂ.

ಮುದುಕಿ: ಓಡsದಿಲ್ಲ ಹೇಳ ಮಾವಾ

ಮುದುಕ: ನಾಚಿ ನಾಚಿ ನೀರಾಗಿ .........

ಮುದುಕಿ: ಹರೀದಿಲ್ಲ ಹೇಳ ಮಾವಾ.

ಮುದುಕ: ಇದಕೇನ ಬಂತ ಮುಪ್ಪಿನಾಗ
ಇಲ್ಲದ್ದಂತ—ನನ್ನ ಸ್ವಾಟೀ.

ಮುದುಕಿ: ತಿವೇದಿಲ್ಲ ಹೇಳ ಮಾವಾ.

ಮುದುಕ: ಹೇಳಲ್ಯಾ ಹಂಗಾರ?

ಮುದುಕಿ: ಹ್ಯಾಂಗರ ಹೇಳ ಮಾವಾ.

ಮುದುಕ: ಕೇಳಿಲ್ಲೆ. ಕೇಳತೀಯಾ?

ಮುದುಕಿ: ಹೇಳ ಹೇಳ ಹೇಳ ಮಾವಾ.

ಮುದುಕ: ನನಗ್ಯಾಕೋ ಮುಂಜೇನಿಂದ

ಮುದುಕಿ: ಮುಂಜೇನಿಂದ?

ಮುದುಕ: ಕೇಳಿದ ಮ್ಯಾಲ ಇಷ್ಟಗಲ
ಬೋಡಬಾಯಿ ಕಿಸೀಬಾರದೂ.

ಮುದುಕಿ: ಕಿಸೇದಿಲ್ಲ ಹೇಳ ಮಾವಾ.

ಮುದುಕ: ನನಗ್ಯಾಕೋ .........

ಮುದುಕಿ: ಯಾಕೋ .........

ಮುದುಕ: ಮುಂಜೇನಿಂದ .........

ಮುದುಕಿ: ಮುಂಜೇನಿಂದ ಏನ ಮಾವಾ?

ಮುದುಕ: ಬಯಕಿ ಹತ್ಯಾವು

(ಮುದುಕಿ ಸ್ತಬ್ಧ. ನಂತರ ಸಾವರಿಸಿಕೊಳ್ಳುತ್ತ)

ಮುದುಕಿ: ಬಯಕಿ ಹತ್ಯಾವ?
ನಿನಗ ಬಯಕಿ ಹತ್ಯಾವ?

ಮುದುಕ: (ಗೋಣು ಹಾಕುವನು)

ಮುದುಕಿ: ಬಯಕೀ ಬುತ್ತಿ ಯಾವಾಗ ತರಲಿ
ಯಾವಾಗ ತರಲಿ ಅನಕಂತs
ಮಣ್ಣು ಆದ್ಲು ನಮ್ಮವ್ವ.
ಗಿಡಾ ಹುಟ್ಟಿಸಿ ಗಿಡಾ ಸತ್ತು.
ಹೊಳೀ ತುಂಬಿಸಿ ಹಳ್ಳ ಬತ್ತು.
ನನಗ ಬಯಕಿ ಹತ್ತಲಿಲ್ಲ
ನಿನಗ ಹತ್ತಿದವ?

ಮುದುಕ: (ಗೋಣು ಹಾಕುವನು)

ಮುದುಕಿ: ಸ್ವಾವಮಾರ ದಿನ ಬಸವಣ್ಣಾತು
ಮಂಗಳಾರ ದಿನ ದೇವಿ ಆತು
ಬೇಸ್ತ್ಯಾರ ದಿನ ದ್ಯಾಮವ್ವಾದ್ಲು
ಶನಿವಾರ ದಿನ ಶನೇಶ್ವಾದ
ಮಸೀತಿ ಆತು ಮುಲ್ಲಾಸಾಬಾ
ಪುಟ್ಟಪರತೀ ಸಾಯೀಬಾಬಾ
ಮಂತ್ರಾ ತಂತ್ರಾ ಎಲ್ಲಾ ಆತು .........
ನನಗ ಬಯಕಿ ಹತ್ತಲಿಲ್ಲ
ನಿನಗ ಹತ್ತಿದವs ?

ಮುದುಕ: (ಗೋಣು ಹಾಕುವನು)

ಮುದುಕಿ: (ಕನಸಿನ ದನಿಯಲ್ಲಿ)
ಅತ್ತsರ ಅಳಲೆವ್ವ ನಸಕೊಸು ನನಗಿರಲಿ.
ಕೆಟ್ಟsರ ಕೆಡಲಿ ಮನಿಗೆಲಸ ..........

ಮುದುಕ: ಲೇ ಲೇ ಮುದುಕೀ

ಮುದುಕಿ: ಏನ ಮಾವಾ

ಮುದುಕ: ನನಗ ಬಯಕಿ ಹತ್ಯಾವಂದರ
ನೀ ತೊಟ್ಟಲಾನs ಕಟ್ಟಿದೆಲ್ಲ.

ಮುದುಕಿ: (ಕುಗ್ಗಿದ ದನಿಯಲ್ಲಿ)
ಹೋಗಲಿ ಬಿಡು ಮಾವಾ

ಮುದುಕ: ನನಗ ಅದರ ಬಯಕಿ ಹತ್ತಿಲ್ಲಾ
ಇದರ ಬಯಕಿ ಹತ್ತೇತಿ.

ಮುದುಕಿ: ಇದರ ಬಯಕಿ ಅಂದರ ?

ಮುದುಕ: ಅಂದರs......ಮತ್ತ ನಗಬಾರದೂ......

ಮುದುಕಿ: ನಗsದಿಲ್ಲ ಹೇಳ ಮಾವಾ.

ಮುದುಕ: ನನಗ ಇದನ್ನ ತಿನ್ನಂಗ ಆಗೇತಿ

ಮುದುಕಿ: ಹುಣಸೀ ಹಣ್ಣಿನ ಚಿಗಳಿ ?

ಮುದುಕ: ಅಲ್ಲಾ

ಮುದುಕಿ: ಎರೀ ಮಣ್ಣಿನ ಹಳ್ಳು?

ಮುದುಕ: ಅಲ್ಲಾ

ಮುದುಕಿ: ಕಟಿಗು? ಬೆಂಡು?

ಮುದುಕ: ಅಲ್ಲಾ

ಮುದುಕಿ: ಇಬತ್ತಿ ತುಂಡು?

ಮುದುಕ: ಅಲ್ಲಾ

ಮುದುಕಿ: ಅಂಗಾರ

ಮುದುಕ: ಅಲ್ಲ ನನ ಬಂಗಾರಾ

ಮುದುಕಿ: ಮತ್ತೇನ ನನ ಸಿಂಗಾರಾ?

ಮುದುಕ: ನನಗ ಉಪ್ಪಿಟ್ಟು ತಿನ್ನಂಗಾಗೇತಿ

(ಒಂದು ನಿಮಿಷ ಸ್ತಬ್ಧತೆ)

ಮುದುಕಿ: ಅಯ್ ನನ ಶಿವನs!
ನನ್ನ ಮಗ, ಮರತುಗಿರತು
ಮಾವನ ಹೊಟ್ಯಾಗ ಮೂಡ್ಯಾನೇನ
ಅಂತ ಮಾಡಿ, ಬಚ್ಚ ಬಾಯಿ
ತಕ್ಕಂಡು ನಾ ಕುಂತsನಿ.. ...
ಉಪ್ಪಿಟ್ಟು ತಿನ್ನಂಗಾಗೇತೆಂತ.
ಈ ನಮ್ಮ ಮಾವಗ!

ಮುದುಕ: ಉಪ್ಪಿಟ್ಟು ಮಾಡಿಕೊಡತೀಯಲ್ಲ
ಹೇಳ ಮುದುಕೀ...

ಮುದುಕಿ: (ಏಳುತ್ತ)
ಏಳ ಏಳ ಮಾವಾ
ಎಲ್ಲಾ ಸಜ್ಜ ಐತಿ.
ನಾಗಂದಗೀ ಮ್ಯಾಲ ಡಬ್ಯಾಗ
ಸಜ್ಜಕ ಐತಿ.

ಹಂಡೇದ ಹಿಂದ ತೊಂಗಲರಬ್ಯಾಗ
ಕೋತಂಬ್ರಿ ಸಿವುದ್ವೈತಿ.
ಅಡಕಲ ಗಡಿಗ್ಯಾಗ ಉಪ್ಪೈತಿ, ಕಾರೈತಿ.
ಒಲೀ ಸಂದ್ಯಾಗ ಒಡಕಲ ಐತಿ.
ಒಲೀ ತೋಳವ್ಯಾಲ ಕಡ್ಡಿಪೆಟಗಿ
ಊದಗೊಳವಿ ಎಲ್ಲಾ ಐತಿ.
ಈಳಿಗಿ ಐತಿ. ಕೈ ಐತಿ.
ತಿನ್ನಾಕ ಬಾಯಿ ಐತಿ......
ಅಯ್ಯ ಮಾವಾ ?

ಮುದುಕ: ಏನ ಏನ ಏನ ಮುದುಕೀ ?

ಮುದುಕಿ: ಇದು ಇಲ್ಲಲ್ಲ

ಮುದುಕ: ಏನ ಇಲ್ಲ ? ಹೇಳ ಬುಡ್ಡಿ

ಮುದುಕಿ: ಇಲ್ಲs ಇಲ್ಲ ಉಳ್ಳಾಗಡ್ಡಿ.

ಮುದುಕ: ಹ್ಞಾ ನನಗ ಗೊತ್ತಿತ್ತು
ಕೇಳಲೆಂತ ಸುಮ್ಮನಿದ್ದೆ.

ಮುದುಕಿ: ಕೇಳಿದ್ನೆಲ್ಲ ಹೇಳ ಈಗ.

ಮುದುಕ: ಇಲ್ನೋಡು, ಹೋದ ವರಸ......

ಮುದುಕಿ: ಹೋದ ವರಸ ?

ಮುದುಕ: ಹೋದವರಸಲ್ಲ ಆಚೀ ವರಸ......

ಮುದುಕಿ: ಅಂದರ?

ಮುದುಕ: ಹತ್ತ-ಹದಿನೈದು ವರಸದ ಮುಂದ......

ಮುದುಕಿ: ಅ್ಞಾ ?

ಮುದುಕ: ಮೂವತ್ತ-ನಾಲತ್ತ ವರಸದ ಹಿಂದ......

ಮುದುಕಿ: ಏನಾಗ ಮಾವಾ ಏನಾತು ?

ಮುದುಕ: ಉಳ್ಳಾಗಡ್ಡಿ ತಂದಿದ್ದೆ ಒಂದು

ಪಾಚಿ–ದರಶೀಲಿ
ಹಿತ್ತಲದಾಗ ಹುಗದಿದ್ದೆ
ಪಾಚಿ–ದರಶೀಲಿ.

ಮುದುಕಿ: ಅದನ್ನ ಹೋಗಿ ನೋಡ ಮಾವಾ
ಉಪ್ಪಿಟ್ಟು ಮಾಡ್ತನು

ಮುದುಕ: ಹೋಗಿ ನೋಡೇಬಿಡ್ತ್ರನಿ ಮುದಕಿ
ಉಪ್ಪಿಟ್ಟು ಮಾಡ್ತನು.

(ಹೋಗುವನು)

(ಮುದುಕಿ ಸಡಗರದಿಂದ ಅಡುಗೆಗೆ ಸಜ್ಜು ಮಾಡುವಂತೆ ನಟಿಸುವಳು. ಹಾಡು ಗುಣುಗುಣಿಸುವಳು.)

(ಮುದುಕ ಹೊರಗಿನಿಂದ ಹೆಗಲಮ್ಯಾಲೆ ದೊಡ್ಡ ಉಳ್ಳಾಗಡ್ಡಿ ಯೊಂದನ್ನು ಹೊತ್ತುಕೊಂಡು ಬರುವನು.)

ಮುದುಕ: ಅಬಾಬಾಬಾ
ಏನ ದೆವ್ವ ಆಗೇತಿದೂ!

(ಮುದುಕಿ ಅದನ್ನು ಇಳಿಸುವಳು)

ನೋಡ ಮುದಕೀ ಇಟ್ಟೆಟ್ಟಲ್ಲೀ
ದೆವ್ವ ಬೆಳದಂಗ ಬೆಳದೈತಿ ನೋಡು
ಈಳಗಿ ತಾ, ಒಲೀ ಊಬು
ಡಬರೀ ತುಂಬ ಉಪ್ಪಿಟ್ಟು ಮಾಡು
ಸಾಯ್ತನಕ ತಿನ್ನತನಂತ
ತಿಂದ ತಿಂದ ಸಾಯ್ತನಂತ.

(ಮುದುಕಿ ಈಳಗಿ ಕೊಟ್ಟಂತೆ ನಟಿಸುವಳು. ಇದರಾ ಬದರಾ ಕುಳಿತು ಉಳ್ಳಾಗಡ್ಡಿ ಹೆಚ್ಚ ತೊಡಗುವರು. ಎಲ್ಲೋ ದೂರದಿಂದೆಂ ಬಂತೆ 'ಎಮ್ಮಾ' ಎಂಬ ದನಿ)

ಮುದುಕಿ: (ಸುತ್ತಲೂ ನೋಡಿ)
ಎಮ್ಮಾ ಅಂತ ನೀನು
ಕರದ್ಯೇನು ಮಾವಾ?

ಮುದುಕ: ನಾ ನಿನಗ ಮುದಕೀ
ಅಂತsನೆಲ್ಲ ಮುದಕೀ

(ಮತ್ತೆ ಹೆಚ್ಚುತೊಡಗಿದಾಗ ಈಸಲ 'ಎಜ್ಜಾ' ಎಂಬ ದನಿ.)

ಮುದುಕ: ನೀ ನನಗ ಎಜ್ಜಾ ಅಂತ
ಕರದ್ಯೇನು ಮುದುಕೀ ?

ಮುದುಕಿ: ನಾ ನಿನಗ ಮಾವಾ ಮಾವಾ
ಅಂತsನೆಲ್ಲ ಮಾವಾ.

(ಮತ್ತೆ ಹೆಚ್ಚು ತೊಡಗಿದಾಗ ಮೊದಲಿಗಿಂತ ಗಟ್ಟಿಯಾಗಿ 'ಎಮ್ಮಾ' 'ಎಜ್ಜಾ' ಎಂಬ ದನಿ. ಮುದುಕ, ಮುದುಕಿ ಇಬ್ಬರೂ ರಂಗದ ತುಂಬ ಓಡಾಡಿ ಮೂಲೆ ಮೂಲೆಯಲ್ಲಿ ಹಣಿಕಿ ಹಾಕುವರು.)

ಮುದುಕ: ಯಾರವರೂ ?

ಧ್ವನಿ: ನಾನಬೇ ಎಮ್ಮಾ......

ಮುದುಕಿ: ಎಲ್ಲಿ ಅದೀ ?

ಧ್ವನಿ: ಇಲ್ಲೇ ಅದsನ್ಯೋ ಎಜ್ಜಾ...

ಇಬ್ಬರೂ: ಇಲ್ಲೇ ಅಂದರ ಎಲ್ಲೇ ?

ಧ್ವನಿ: ಇಲ್ಲೇ...ಉಳ್ಳಾಗಡ್ಡೀ ಒಳಗs...

(ಇಬ್ಬರೂ ಉಳ್ಳಾಗಡ್ಡಿಯ ಕಡೆ ಧಾವಿಸಿ, ಕೂಡ್ರುವರು.)

ಮುದುಕ: ಒಳಗs ?

ಧ್ವನಿ: ಹೌ್ದು ಒಳಗs
ಮೆಲ್ಲಕ ಹೆಚ್ರೊ
ನಾಹೊರಗ ಬರತsನಿ......

ಮುದುಕ: ಹ್ದಾ ಹಂಗs ಆಗಲೀ

(ಎನ್ನುತ್ತ ಉಳ್ಳಾಗಡ್ಡಿಯ ಪರೆಗಳನ್ನು ಒಂದೊಂದೇ ಉಚ್ಚುವಂತೆ ನಟಿಸುವನು. ರಂಗದಮೇಲೆ ಕ್ರಮೇಣ ಕತ್ತಲೆ.)

ಧ್ವನಿ: ಎಜ್ಜಾ ಬರಾಕ ಹತ್ತೇನೀ
ಎಮ್ಮಾ ಬರಾಕ ಹತ್ತೇನೀ
ಎಮ್ಮಾs...ಎಜ್ಜಾs...

(ರಂಗದಮೇಲೆ ಸಂಪೂರ್ಣ ಕತ್ತಲೆ)

(ಎರಡು ನಿಮಿಷದ ನಂತರ ರಂಗದಮೇಲೆ ಬೆಳಕಾದಾಗ ಮೊದಲಿನದೇ ದೃಶ್ಯ. ಮುದುಕ ಹೊರಗಿನಿಂದ ಬಂದು ಪಟಗಾ ತೆಗೆದಿಡುವನು. ಮೆಲ್ಲಗೆ ಪಲ್ಲಂಗದ ಮೇಲೆ ಕೂಡ್ರುತ್ತ)

ಮುದುಕ: ಇನ್ನೂ ಬರಲಿಲ್ಲೇನು ಮಗಾ
ಸಾಲೀ ಬಿಟ್ಟು?

ಮುದುಕಿ: ಇನ್ನೂ ಬರಲಿಲ್ಲ ನೋಡ ಮಾವಾ
ನಮ್ಮ ಕೂಸು.

ಮುದುಕ: ಲೇಲೇ ಮುದುಕಿ
ಕೂಸು ಕುನ್ನಿ ಅನಬ್ಯಾಡ ಅಂವಗ.
ಮಗಾ ಅನ್ನು.

ಮುದುಕಿ: ಮಗಾ ಮಗಾ ಅಂದರ ನಕ್ಯಾರು ಮಂದಿ
ಅನ್ನು ಮೊಮ್ಮಗಾ.

ಮುದುಕ: ಮಗಾ ಬ್ಯಾಡ ಮೊಮ್ಮಗ ಬ್ಯಾಡ
ಎಪ್ಪಾ ಅಂದರ ಹೆಂಗ?

ಮುದುಕಿ: ಎಪ್ಪಾ ಬ್ಯಾಡ ಎವ್ವಾ ಬ್ಯಾಡ
ಎಜ್ಜಾ ಅಂದರ ಹೆಂಗ?

ಮುದುಕ: ಅಂವಾ ಬೆಳೇದು ನೋಡಿದ ಮಂದಿ
ಹೆಂಗs ಅಂತsತಿ.

ಮುದುಕಿ: ಅದೊ, ಮಂದಿ ಅಂತಾರಂತ
ಹೆಂಗs ಹೇಚೇತಿ.

ಮುದುಕ: ಏನ ಮಜಾ ಬೆಳದಾನಂದಿ
ನಮ್ಮ ಹುಡುಗಾ!

ಮುದುಕಿ: ದೊಡ್ಡsಂವಾದಿ ಚೆಡ್ಡಿ ಬ್ಯಾಡ,
ಚೊಣ್ಣಾ ಹಾಕ್ಯಾ ಕೂಸs,
ಅಂತ ಚೊಣ್ಣಾ ಕೊಟ್ಟರ,

—ಚೊಣ್ಣಾ ಬ್ಯಾಡ, ಗಿಣ್ಣಾ ಬ್ಯಾಡ.
ಪಂಜೀ ಕೊಡ ಎವ್ವಾ—
ಅಂತ ಅನಬೇಕ ?

ಮುದುಕ: ಎಷ್ಟ ಮಜಾ ಬೆಳದಾನಂದಿ......

ಮುದುಕಿ: ನಮ್ಮ ಹುಡುಗಾ !

ಮುದುಕ: ತಲೀಮ್ಯಾಲಿನ ಎಳೀಮಾಸ
ಇನ್ನೂ ಹಾರಿಲ್ಲಲೇ ತಮ್ಮಾ,
ಟೊಪಗಿ ಹಾಕ್ಕೊಂಡು ತಿರಗ್ಯಾಡು
ಅಂತ ಟೊಪಗಿ ಕೊಟ್ಟರ,
—ಟೊಪಗಿ ಬ್ಯಾಡ ಗಿಪಗಿ ಬ್ಯಾಡ—
ಪಟಗಾ ಕೊಡ ಎಜ್ಜಾ—
ಅಂತ ಅನಬೇಕ ?

ಮುದುಕಿ: ಎಂತ ಮಜಾ ಬೆಳದಾನಂದಿ......

ಮುದುಕ: ನಮ್ಮ ಹುಡುಗಾ !
ಪೆಪರಮಂಟು ಕಡಿ ಅಂದರ
ಕರಗಿಸಿಕೊಂಡು ನೀರಾಗದನ—
ಅಂತಾನ.

ಮುದುಕಿ: ರೊಟ್ಟಿ ತಿನ್ನಾs ಕೂಸ ಅಂದರ
ಮುದ್ದಿ ಬೇಸಿ ಕೊಡ ಎವ್ವಾ—
ಅಂತಾನ.

ಮುದುಕ: ಎಷ್ಟ ಸೂಕ್ಷ್ಮ ಬೆಳದಾನಂದಿ
ನಮ್ಮ ಅಪ್ಪಾ !

ಮುದುಕಿ: ಎಷ್ಟು ಚೆಂದ ಬೆಳದಾನಂದಿ
ನಮ್ಮ ಅಜ್ಜಾ !

(ಇಷ್ಟೊತ್ತಿಗೆ ಹೊರಗಿನಿಂದ ಎವ್ವಾ, ಎಜ್ಜಾ ಎಂದು ಗಟ್ಟಿಯಾಗಿ ಅಳುತ್ತ ಹುಡುಗನ ಪ್ರವೇಶ. ಗಿಡ್ಡ ಆಳು. ಡ್ರೆಸ್ಸು ಮಾತ್ರ ಮುದುಕನ ಹಾಗೆ: ಧೋತರ, ಬಗಲಗಸಿ ಅಂಗಿ, ಪಟಗಾ. ಬಗಲಲ್ಲಿ ಪಾಟಿಯ ಚೀಲ. ಮುದುಕ, ಮುದುಕಿ ಅವನನ್ನು ಕಕ್ಕುಲತೆಯಿಂದ ರಮಿಸತೊಡಗುವರು.)

ಮುದುಕಿ: ಯಾಕ ನಮ್ಮಪ್ಪಾ
ಯಾಕ ನನ ಸರದಾರಾ
ಏನಾತ ಹೇಳs ನನ ಮಗನs.........

ಮುದುಕ: ಏನಾತ ಏನಾತ ಹೇಳರ ಹೇಳೋ.

ಮುದುಕಿ: ಯಾರೇನ ಅಂದರೂ
ಯಾರೇನ ಮಾಡಿದ್ರೊ
ಹೇಳ ನನ ಪುಟ್ಟಾ.

ಮುದುಕ: ಏನಾತ ಏನಾತ ಹೇಳರ ಹೇಳೋ.

ಹುಡುಗ: ಎವ್ವಾ ಎವ್ವಾ ನಾ ನಾಳಿಂದ
ಸಾಲಿಗೆ ಹೋಗ್ಯಾಕ ಒಲ್ಯಾ......

ಮುದುಕ: ಯಾಕೋ ?

ಮುದುಕಿ: ಯಾಕs ರಾಜಾ ?

ಹುಡುಗ : ಒಲ್ಯಾ ಅಂದರ ಒಲ್ಯಾ.

ಮುದುಕ: ಏನಾತ ಏನಾತ.

ಮುದುಕಿ: ...ಏನಾತ ಹೇಳs ಕಟ್ಟ್ಯಾಣೀ

ಹುಡುಗ : (ಮತ್ತ ಬಿಕ್ಕಿ ಬಿಕ್ಕಿ ಅಳುತ್ತ)
ನಾ ಸಾಲಿಗೆ ಹೋಗs ಮುಂದ
ಎಲ್ಲಾವೂ ನನಗ
ಏನೇನs ಅಂತಾವಬೇ.

ಮುದುಕಿ: ಅವರ ಬಾಯಾಗ ರೊಟ್ಟೀ ಇಡಲಿ

ಮುದುಕ: ಅವರ ಹೆಣ ಅಡ್ಡ ಒಯ್ಯಲಿ

ಮುದುಕಿ: ಅವರ ವಂಸ ನಿರ್ವಂಸ ಆಗಲಿ

ಮುದುಕ: ಅವರ ಎಮ್ಮಿ ಒದಕಳ್ಳಲಿ

ಹುಡುಗ : ಸಾಲಿಗೆ ಹೋಗs ದಾರ್‍ಯಾಗ
ಜಾಲೀಕಂಟೀ ಬೇಲೀವ್ಯಾಗ

ಒಂದ ಇಣಚಿ ನೆನ್ನ ನೋಡಿ
ಬುಡ್ಡಾ ಬುಡ್ಡಾ ಬಂದಾ
ಅಂತಸತ್ಯಬೇ.

ಮುದುಕಿ: ಮತ್ತ?

ಹುಡುಗ: ಅಲ್ಲೇ ಒಂದು ಸಾತರಗಿತ್ತಿ
ಕುಣಕಾಲಗಿತ್ತಿ ಹಾರಿ ಬಂದು
ಎಂತಾ ಬುಡ್ಡಾ ಬಂದಾ
ಅಂತಸತ್ಯಬೇ.

ಮುದುಕ: ಮತ್ತ?

ಹುಡುಗ: ಪಾತರಗಿತ್ತೀ ಇಣಚೀ ಕೂಡಿ
ಟೊಂಗಿ ಟೊಂಗಿ ಜಿಕ್ಕಂತ
ಹೂವು ಹೂವು ಹಾರಿಕೆಂತ
ಬುಡ್ಡಾ ಬುಡ್ಡಾ ಬಂದಾ
ಉಳ್ಳಾಗಡ್ಡೀ ಬುಡ್ಡಾ
ಅಂತಾವಬೇ.

ಮುದುಕ: ಬುಡ್ಡಾ ಬುಡ್ಡಾ ಬಂದಾ

ಹುಡುಗ: ಅಂತಾವಬೇ

ಮುದುಕಿ: ಉಳ್ಳಾಗಡ್ಡಿ ಬುಡ್ಡಾ

ಹುಡುಗ: ಅಂತಾವಬೇ

ಮುದುಕ: ಮತ್ತ?

ಹುಡುಗ: ಸಾಲೀ ಒಳಗ ಹೋದ್ರ ತೀರ್‍ತು
ಎಲ್ಲಾ ಹುಡುಗ್ರು ಕ್ಯಾಕಿ ಹೊಡದು
ಉಳ್ಳಾಗಡ್ಡೀ ಬುಡ್ಡಾ
ಅಂತಾರಬೇ.

ಮುದುಕ: ಮಾಸ್ತರ ಮುಂದ......

ಹುಡುಗ: ಮಾಸ್ತರ ಮುಂದ ಹೇಳಿದ್ರ
ಲೊಚ್ ಲೊಚ್ ಅನಕಂತ

ಅಳಬ್ಯಾಡ ಬುಡ್ಡಾ
ಅಂತಾರಬೇ

(ದುಃಖ ಹೆಚ್ಚಾಗಿ ಚೀರ್‍ಯಾಡಿ ಅಳುವನು. ಅವರು ರಮಿಸುವರು.)

ಮುದುಕಿ: ಮಾವಾ ಮಾವಾ ಸಾವೇನರ
ಮಾಡಾಕಬೇಕಿದಕ.

ಮುದುಕ: ಸಾಲೀ ಗೀಲಿ ಬಿಡಿಸಿಬಿಟ್ಟರ
ಹ್ಯಾಂಗಂತೀ ಮುದುಕಿ?

ಮುದುಕಿ: ಸಾಲಿ ಬಿಡಸೇ ಬಿಡ್ತಾನಂತ
ಮಡಸಾ, ಹಳೇ ಮಡಸಾ.
ಎಷ್ಟ ಶ್ಯಾಣ್ಯಾ ಅದಾನಂದೀ
ನನ್ನ ಕುಮಾರ!
ಒನ್ನೇ ಎತ್ತಾ ಒಂದs ವರ್ಸದಾಗ
ಪಾಸಾಗಿಲ್ಲ?

ಮುದುಕ: ಯ್ಯಾಳ್ಡನೇ ಎತ್ತಾ?

ಮುದುಕಿ: ಯಾಳ್ಡನೇ ಎತ್ತಾ ಯಾಳ್ಡ ವರ್ಸದಾಗ
ದಾಟಿದನಲ್ಲs.

ಮುದುಕ: ಮೂರನೇ ಎತ್ತಾ ಮೂರ ವರ್ಸದಾಗ
ಮುಗಸೇ ಬಿಟ್ಟಾ.

ಮುದುಕಿ: ನಾಕನೇ ಎತ್ತಾ ಐದನೇ ಎತ್ತಾ
ನಾಕ ನಾಕ ಐದೈದ ವರ್ಸದಾಗ
ಜಿಗದs ಬಿಟ್ಟಾ.

ಮುದುಕ: ಎಷ್ಟ ಶ್ಯಾಣ್ಯಾ ಅದಾನಂದೀ
ನಿನ್ನ ಕುಮಾರಾ?

ಮುದುಕಿ: ಮತ್ತ ಸಾಲೀ ಬಿಡಸು ಅಂತೀಯಲ್ಲ
ಜೋಕುಮಾರಾ!
ಹೋಗ ಹೋಗು. ಕೂಸಿಗೆ ನಾನು
ಮಂತ್ರಾ ಹೇಳ್ತೇನಿ,

ಮುದುಕ: ಮಂತ್ರಾ ಹೇಳ್ತೀಯಾ ?

ಮುದುಕಿ: ಹ್ಞೂ......ಮಂತ್ರಾ ಹೇಳ್ತೇನಿ.
ಅಂವಗ್ಯಾರ ಬುಡ್ಡ ಅಂತಾರ
ಅವರ ತಲೀ ತಿರಗಬೇಕು—
ಅಂತಾ ಮಂತ್ರಾ ಹೇಳ್ತನಿ.
ಹೋಗ ಹೋಗು ಹೊರಗ ನಡಿ.
ನನ್ನ ಕೂಸಿಗೊಂದು ನಾನು
ಮಂತ್ರಾ ಹೇಳ್ತನಿ.
(ಮುದುಕ ಅರೆಮನಸ್ಸಿನಿಂದ ಹೊರಗೆ ಹೋಗುವನು.)

ಮುದುಕಿ: ಬಾ ಎಪ್ಪಾ ನನ ಮಗನs
ಮಂತ್ರಾ ಹೇಳ್ತನಿ.
(ಮೊಮ್ಮಗನನ್ನು ಪ್ರೀತಿಯಿಂದ ಪಲ್ಲಂಗದ ಮೇಲೆ ಕೂಡ್ರಿಸಿಕೊಂಡು)
ಹ್ರಾಂ...ಹ್ರೀಂ...ಹ್ರೂಂ...ಹ್ರೋಂ
ಹಿಂಗ ಅನಬೇಕು.

ಹುಡುಗ: ಹ್ರಾಂ...ಹ್ರೀಂ...ಹ್ರೂಂ...ಹ್ರೋಂ
ಹೆಂಗs ಅಂತನಿಬೇ ಎಮ್ಮಾ
ಹೆಂಗs ಅಂತುನಿ

ಮುದುಕಿ: ನಿನಗ ಬುಡ್ಡಾ ಬುಡ್ಡಾ ಅನ್ನsರು
ಹೆಣ್ಣ—ಗಿಣ್ಣ ಆಗಿದ್ರ
ಹ್ರಾಂ... ಹ್ರೀಂ... ಹ್ರೂಂ...ಅಂದು
ಟೆಂಗರಬುಡ್ಡೀ
ಅನಬೇಕು.

ಹುಡುಗ: ಗಂಡ—ಪಂಡು ಆಗಿದ್ರ?

ಮುದುಕಿ: ಗಂಡ—ಪಂಡು ಆಗಿದ್ರ
ಹ್ರಾಂ...ಹ್ರೀಂ...ಹ್ರೂಂ...ಅಂದು
ಟೆಂಗರ ಬುಡ್ಡಾ
ಅನಬೇಕು.

ಹುಡುಗ : ಮತ್ತ
ಹೂವಿನ ಬಗಲಾಗ ಪಾತರಗಿತ್ತಿ
ಬೇಲೀ ಹೆಗಲಮ್ಯಾಲ ಇಣಚಿ ಕುಂತು,
ಓಣೀ ಸಂದ್ಯಾಗ ನಾಯಿ ನಿಂತು,
ಬುಡ್ಡ ಅಂದರ?

ಮುದುಕಿ: ನೆದರಿಗೆ ಯಾರ ಬೀಳsದಿಲ್ಲ,
ಅವರು ಬುಡ್ಡಾ ಬುಡ್ಡಾ ಅಂದರ,
ಹ್ರಾಂ...ಹ್ರೀಂ...ಹ್ರೂಂ...ಅಂದು
ಟಿಂಗರ ಬುಡ್ಡಣ್ಣಾ
ಅಂತ ಅನಬೇಕು.

ಹುಡುಗ : (ಹುರುಪಿನಿಂದ ಕುಣಿಯುತ್ತ.)
ಹಂಗs ಅಂತನಿಬೇ ಎವ್ವಾ
ಹಂಗs ಅಂತsನಿ......
ಹಂಗs ಅಂತsನಿ......

ಮುದುಕಿ: ಎಲ್ಲಾ ನೆಪ್ಪ ಐತಿಲ್ಲ?

ಹುಡುಗ : ತಪ್ಪಿದರ ಕೇಳಬೇ.

ಮುದುಕಿ: ನಿನಗಷ್ಟ ರುಡೀ ಮಾಡಸ್ತsನಿ.

ಹುಡುಗ : ಹಂಗs ಆಗಲೇಳಬೇ.

ಮುದುಕಿ: (ತಿಳಿಸಿ ಹೇಳುವಂತೆ)
ಇಕಾ ಇದs ಸಾಲೀ ರಸ್ತಿ
ಅಂತs ತಿಳಕಾ.

ಹುಡುಗ : (ಗೋಣು ಹಾಕುತ್ತಾ)
ಹ್ಞೂ.

ಮುದುಕಿ: ನಾನs ನಿನಗ ಬೊಗಳs ನಾಯಿ
ಅಂತ ತಿಳಕಾ.

ಹುಡುಗ : (ಹುರುಪಿನಿಂದ)
ಹ್ಞೂ ಹ್ಞೂ

(ಮುದುಕಿ ನಾಯಿಯ ಹಾಗೆ ಕೈಯೂರಿ ಮಂಡಿಯೂರುವಳು. ರಂಗದ ತುಂಬ ಸುಳಿದಾಡುವಳು. ಹುಡುಗ ಪಾಟೀಚೀಲ ಬಗಲಿಗೇರಿಸಿ ಒಂದು ತುದಿಯಿಂದ ಹೊರಡುವನು. ಮುದುಕಿ ಬೊಗಳಿದಂತೆ ನಟಿಸುವಳು.)

ಮುದುಕಿ: ಬುಡ್ಡಾ ಬುಡ್ಡಾ ಬಂದಾ
ಗೌ ಗೌ ಗೌ

ಹುಡುಗ : ಹಚ್ಯಾ.

ಮುದುಕಿ: ಉಳ್ಳಾಗಡ್ಡೀ ಬುಡ್ಡಾ
ಗೌ ಗೌ ಗೌ

ಹುಡುಗ : ಹಚ್ಯಾ ಹಚ್ಯಾ......

ಮುದುಕಿ: (ಸಾದಾ ದನಿಯಲ್ಲಿ ಗೋಣಿತ್ತಿ)
ಅಲ್ಲs ತಮ್ಮಾ, ಹೇಳ ಮಂತ್ರಾ.

ಹುಡುಗ : ಅಲ್ಲs ಎಮ್ಮ, ಒಂದ ಮಾತು.

ಮುದುಕಿ: ಏನ ಮಾತs ಮಗನ?

ಹುಡುಗ : ಎಮ್ಮಾ ಎಮ್ಮಾ, ನೀನು
ಗಂಡ ನಾಯಿs ಹೆಣ್ಣ ನಾಯಿs?

ಮುದುಕಿ: (ಎದ್ದವಳೇ ಲಟಿಕೆ ಮುರಿದು)
ಎಷ್ಟ ಬೆರಕಿ ಆಗೇತಿದು
ನನ್ನ ಕೂಸು!

ಹುಡುಗ : ಹೇಳಬೇ ಎಮ್ಮಾ.

ಮುದುಕಿ: (ಮತ್ತೆ ನಾಯಿಯಾಗಿ)
ಹೆಣ್ಣ ನಾಯಿs ತಮ್ಮಾ.

ಹುಡುಗ : ಹಂಗಾರ ಬೊಗಳು.

ಮುದುಕಿ: ಬುಡ್ಡಾ ಬಂದಾ ಬುಡ್ಡಾ.
ಗೌ ಗೌ ಗೌ
ಉಳ್ಳಾಗಡ್ಡೀ ಬುಡ್ಡಾ
ಗೌ ಗೌ ಗೌ

ಹುಡುಗ : (ಕೈಯಲ್ಲೊಂದು ಫ್ಲೂಟು ಪಟ್ಟಿ ಹಿಡಿದು ಗಾಳಿಯಲ್ಲಿ ತಿರುಗಿಸುತ್ತ ಮಂತ್ರವಾದಿಯಂತೆ.)
ಹ್ರಾಂ......ಹ್ರೀಂ......
ಬುಡ್ಡಾ ಬುಡ್ಡಾ ಅಂತೀಯಾ ?
ಹ್ರೂಂ......ಹ್ರೋಂ......
ಟಿಂಗರ ಬುಡ್ಡೀ !

(ಮುದುಕಿ ತಲೆತಿರುಗಿ ಬೀಳುವಂತೆ ನಟನೆ ಮಾಡುವಳು. ಮೇಲೆದ್ದು ಮುದ್ದು ಮಾಡುತ್ತ.)

ಮುದುಕಿ : ಬಾಳ ಜಾಣ ಆಗೇತಿದು
ನನ್ನ ಕಳ್ಳು !

(ಮುದುಕ ಹೊರಗಿನಿಂದ ಬರುವನು.)

ಮುದುಕ : ಏನ ಏನ ಏನ ಮುದುಕೀ ?
ಗುದಮುರಗೀ ಏನ ಹಾಕೀದಿ ?

ಮುದುಕಿ : ಮಾವಾ ಮಾವಾ ಬಾರ ಇಲ್ಲೆ
ಕೂಸಿನ ಬುದ್ದೀ ಆಟ ನೋಡ.
ಸಾಲಿ ಬಿಡಸಾಕ ಹೊಂಟಿದ್ದೆಲ್ಲs.
ಮಾವನ ಮಗನs !

(ಹುಡುಗ ಈಗಾಗಲೇ ರಂಗದ ತುಂಬ ಹ್ರಾಂ ಹ್ರೀಂ ಅನ್ನುತ್ತ ಜಿಗಿದಾಡುತ್ತಿದ್ದಾನೆ. ಮುದುಕ ಮುದುಕಿ ಇಬ್ಬರಿಗೂ ಅವನ ಕಡೆಗೇ ಲಕ್ಷ್ಯ)

ಹುಡುಗ : (ಮೂಲೆಯೊಂದರಲ್ಲಿ ಏನೋ ದಿಟ್ಟಿಸಿದಂತೆ ಮಾಡಿ)
ಸಿಕ್ಕೆಲೆ ಮಗನs ಬಾ
ಗುಂಗಾಡ ನನ ಮಗನs ಬಾ.
ರಾತ್ರಿ ನಾ ಕಮ್ಮಗs
ನನ್ನ ಹಾರಕ ಮಕ್ಕಂಡಾಗ
ಕಿವೀಹತ್ರ ಬರ್ತೀಯಾ ?
ಬುಡ್ಡಾ ಬುಡ್ಡಾ ಅಂತೀಯಾ ?
ಬಾ ನನ ಮಗನs ಬಾ

ಹ್ರಾಂ ಹ್ರೀಂ ಟಿಂಗರ ಬುಡ್ಡಾ
ಹ್ರೂಂ ಹ್ರೋಂ ಟಿಂಗರ ಬುಡ್ಡಾ

(ಏನೂ ಆಗುವುದಿಲ್ಲ. ತಕರಾರಿನ ದನಿಯಲ್ಲಿ)

ಎವ್ವಾ ಈ ಗುಂಗಾಡಕ
ಏನೂ ಆಗವಲ್ದು.
ಇದ ಹೆಣ್ಣ ಗುಂಗಾಡs ಏನ
ಗಂಡ ಗುಂಗಾಡs ?

ಮುದುಕ: (ತುಂಟ ದನಿಯಲ್ಲಿ)
ಹೆಣ್ಣs ಇರಬೇಕ ನೋಡಲೇ
ಶ್ಯಾಣ್ಯಾ ಮಗನs
ಗುಂಗಾಡ ಬಾಳ ಮಾಡಿ
ಹೆಣ್ಣs ಇರತಾವು !

(ಮುದುಕಿಯ ಮುಖದಮೇಲೆ ಹುಸಿಮುನಿಸಿನ ಮುರುಕ. ಹುಡುಗ ಮತ್ತೆ ಗಾಳಿಯಲ್ಲಿ ಕುಣಿದಾಡುತ್ತ ಹ್ರಾಂ ಹ್ರೀಂ ಅನ್ನುತ್ತ 'ಟಿಂಗರ ಬುಡ್ಡೀ' ಅನ್ನುತ್ತ ಗುಂಗಾಡು ಬೆನ್ನತ್ತಿದವನಂತೆ ರಂಗದ ತುಂಬ ಓಡಾಡುವನು. ಮಂತ್ರೋಚ್ಚಾರಣೆ ಬೇಗ ಬೇಗ ಆದಂತೆ ರಂಗದಮೇಲೆ ಕ್ರಮೇಣ ಕತ್ತಲೆ.)

(ರಂಗದಮೇಲೆ ಮತ್ತೆ ಕ್ರಮೇಣ ಬೆಳಕಾದಾಗ, ಹುಡುಗ, ಶಾಲೆಯಿಂದ ಆದೇ ಆಗ ಬಂದಿರುತ್ತಾನೆ. ಪಾಟೀ ಚೀಲವನ್ನು ಅಲ್ಲಿಯೇ ಒಗೆದು ಪ್ಲೇಟು ಪಟ್ಟೆಯನ್ನು ತಿರುವ್ಯಾಡುತ್ತ ರಂಗದ ತುಂಬಾ ಹ್ರಾಂ ಹ್ರೀಂ ಅನ್ನುತ್ತ ಹಾರಾಡುತ್ತಾನೆ. ಮುದುಕಿ ಮೊದಲನೆಯ ದೃಶ್ಯದ ಪ್ರಾರಂಭದಲ್ಲಿಯಂತೆ ಅಡುಗೆ ಮಾಡುತ್ತಿರುವಂತೆ ನಟಿಸುತ್ತಾಳೆ. ಮುದುಕ ರಂಗದ ಮೇಲಿಲ್ಲ.)

ಹುಡುಗ : ಎವ್ವಾ ಎವ್ವಾ ಬಂದೆ
ಹ್ರಾಂ ಹ್ರೀಂ.
ಸಾಲಿ ಬಿಟ್ಟು ಬಂದೇ
ಹ್ರೂಂ ಹ್ರೋಂ

(ವಿಲಕ್ಷಣವಾಗಿ ಗಟ್ಟಿಯಾಗಿ ನಗುವನು. ಪಲ್ಲಂಗದ ಮೇಲೆ ಬೀಳುವನು. ಏಳುವನು.)

ಮುದುಕಿ : ಅಯ್ಯ ನನ ಬಂಗಾರ
ಏನಾತs ?
ಗಾಳಿ ಗೀಳಿ ಹೊಕ್ಕsರಂಗ
ಯಾಕ ನಗತಿ ?
ಅಯ್ಯ ನನ ಸರದಾರ
ಏನಾತs ?

ಹುಡುಗ : ಎಮ್ಮಾ ಸಾಲಿಗೆ ಹೋಗs ಮುಂದ
ಏನಾತೂ
ಹೇಳಲೇನಬೇ ಎಮ್ಮಾ ಹೇಳಲನಬೇ ?

ಮುದುಕಿ : ಹೇಳ ನನ್ನ ಮಾಮಲೇದಾರ
ಏನಾತು ?

ಹುಡುಗ : ಎಮ್ಮ ಸಾಲಿಗೆ ಹೋದ ವ್ಯಾಲ
ಏನಾತೂ.
ಹೇಳಲೇನಬೇ......

ಮುದುಕಿ : ...ತಮ್ಮಾ, ಹೇಳಿ ಬಿಡಪಾ.

ಹುಡುಗ : ಎಮ್ಮಾ ಸಾಲೀ ಬಿಟ್ಟ ಬರs ಮುಂದ

ಮುದುಕಿ : ಹೇಳ ನನ ಕಲೇಕಟರ
ಏನಾತು ?

ಹುಡುಗ : ಬೇಲಿ ವ್ಯಾಲ ಒಂದ ಇಣಚಿ
ಅದರ ಕೂಡ ಪಾತರಗಿತ್ತಿ.
ದಿನಾ ನನಗ ಅಣಗಸ್ತಾವು
ಅಂದಿದ್ನೆಲಬೇ.

ಮುದುಕಿ : ಹೌದs ಎಪ್ಪ ಅಂದಿದ್ದಿ.

ಹುಡುಗ : ಎಮ್ಮಾ ಸಾಲಿಗೆ ಹೋಗs ಮುಂದ
ಇಣಚಿ, ಪಾತರಗಿತ್ತಿ ಕೂಡಿ
ಬುಡ್ಡಾ ಬುಡ್ಡಾ ಅಂದವು.
ಟಿಂಗರ ಬುಡ್ಡಾ—ಅಂದ ಕೂಡ್ಲೆ......

ಮುದುಕಿ: ಅಂದ ಕೂಡ್ಲೆ ?

ಹುಡುಗ : ಅಂದಕೂಡ್ಲೆ ಎಳ್ಳೂ ಖಲಾಸ್.

ಮುದುಕಿ: (ಖುಷಿಯಿಂದ ಲಟಿಕೆ ಮುರಿದು)
ಎಷ್ಟು ಕಂಬೀರ ಆಗೇತಿದೂ
ನನ್ನ ರಾಜಾ !

ಹುಡುಗ : ಎವ್ವಾ ಎವ್ವಾ ಸಾಲಿಗೆ ಹೋದೆ.

ಮುದುಕಿ: ಹೋದಿ. ಮುಂದ ?

ಹುಡುಗ : ಎಲ್ಲಾ ಖಲಾಸ್ !

ಮುದುಕಿ: ಯಾರ್ಯಾರ್ ಖಲಾಸ್ ?

ಹುಡುಗ : ಹ್ಯಾಟಿಗಾಲ ಹನಮಾ ಒಡ್ಡರ ಭರಮ್ಯಾ
ಸುಂಬಳ ಶೀನ್ಯಾ ಗೌಡರ ಪರಮ್ಯಾ
ಹ್ರಾಂ ಹ್ರೀಂ ಟಂಗರ ಬುಡ್ಡಾ.

ಮುದುಕಿ: ಖಲಾಸ್ ಖಲಾಸ್

(ಹುಡುಗನ ಹುರುಪಿನ ಕುಣಿತಕ್ಕೆ ಮುದುಕಿಯೂ ತಾಳ ಹಾಕುವಳು.)

ಹುಡುಗ : ಚಿಟರದೆಲಿ ಚೆನ್ನೀ ಗುಲಾಗಂಗೀ
ಕುರುಬರ ಕಲ್ಲೀ ಸಂದಿಮನೀ ನಿಂಗೀ
ಹ್ರೂಂ ಹ್ರೋಂ ಟಂಗರ ಬುಡ್ಡೀ

ಮುದುಕಿ: ಖಲಾಸ್ ಖಲಾಸ್
ಎಲ್ಲಾ ಖಲಾಸ್.

ಹುಡುಗ : ಮಸೂತಿ ಮುಲ್ಲಾ ತಳವಾರ ಎಲ್ಲಾ
ಟಂಗರ ಬುಡ್ಡಾ.

ಮುದುಕಿ: ಖಲಾಸ್ ಖಲಾಸ್

ಹುಡುಗ : ಕಳ್ಳೀ ಮನಿ ಕುಡ್ಡಿ ಜಾಲೀ ಬಡ್ಡಿ
ಟಂಗರ ಬುಡ್ಡಿ.

ಮುದುಕಿ: ಖಲಾಸ್ ಖಲಾಸ್

ಹುಡುಗ : (ದನಿ ಬದಲಿಸಿ, ಮೆಲ್ಲಗೆ)
ಮಾಸ್ತರು ಬಂದ್ರು!

ಮುದುಕಿ: ಅವರೇನಂದ್ರು?

ಹುಡುಗ : ಎಲ್ಲಾ ನೋಡಿ...

ಮುದುಕಿ: ಎಲ್ಲಾ ನೋಡಿ?

ಹುಡುಗ : ರೂಲ ಕಟಿಗಿ ತಂದ್ರು.

ಮುದುಕಿ: ತಂದು?

ಹುಡುಗ : 'ಕೈಚಾಚ' ಅಂದ್ರು.

ಮುದುಕಿ: "ಅಂದ್ರು"?

ಹುಡುಗ : 'ಕೈಚಾಚ' ಅಂದ್ರು.
ನಾ ಯಾಕ ಚಾಚಲಿ?
'ಚಾಚಲೆ ಬುಡ್ಡಾ'

ಮುದುಕಿ: ಅಂದ್ರ ಬಿಟ್ರ?

ಹುಡುಗ : (ಮತ್ತೆ ಮಂತ್ರವಾದಿಯ ಮಾಡಿನಲ್ಲಿ)
ಹ್ರಾಂ ಹ್ರೀಂ ಟಿಂಗರ ಬುಡ್ಡಾ......

ಮುದುಕಿ: ಖಲಾಸ್ ಖಲಾಸ್
ಮಾಸ್ತರ ಖಲಾಸ್

ಹುಡುಗ : ಖಲಾಸ್ ಖಲಾಸ್ ಎಲ್ಲಾ ಖಲಾಸ್
(ಗಹಗಹಿಸಿ ನಗುತ್ತ ಕುಣಿದಾಟ. ನಂತರ ಮತ್ತೆ)
ಎವ್ವಾ ನೋಡು ಅಷ್ಟರಾಗ
ಹೊಟ್ಯಾಗ ದೆವ್ವ ಹೊಕ್ಕ್ಯ ರಂಗ
ಹೊಟ್ಟೆ ಹಸೀತಬೇ.

ಮುದುಕಿ: ಅಯ್ ನನ ನೆಪ್ಪಿಗೆ
ಬೆಂಕೀ ಹಾಕಲಿ.
ಏನ ಮಾಡಿ ಕೊಡ್ಲಿ ಹೇಳ
ನನ ಮಗನs?

ಹುಡುಗ : ಎವ್ವಾ ನೋಡು ಅಷ್ಟರಾಗ
ದಾರ್ಯಾಗ ಬಾಳೀಹಣ್ಣಿಂದೊಂದು
ಅಂಗಡಿ ಹತ್ಯಬೇ.
ನಾ ಏನ ಮಾಡಿದೆ......

ಮುದುಕಿ: ಹೇಳ ಎಪ್ಪ.

ಹುಡುಗ : ಒಂದೆ ಗೊನೀ ಬಾಳಿ ಹಣ್ಣಾ
ತಿನ್ನಾಕ ಕೊಡೊ ಅಂದೆ.
ರೊಕ್ಕ ಇಲ್ದ ಕೆಮ್ಮ ಬ್ಯಾಡ
ಅಂದನಬೇ.

ಮುದುಕಿ: ಯಾ ಊರ ಬಾಡ್ಯಾ ಅಂವ
ಹಂಗ ಅಂದ್ಯಂವ?

ಹುಡುಗ : ರೊಕ್ಕ ಇಲ್ಲ ಪಿಕ್ಕ ಇಲ್ಲ
ಹಂಗs ಕೊಡೋ ಅಂದೆ.
ಮುಂದ ಹೋಗಲೇ ಬಿಟ್ಟ ಬುಡ್ಡಾ
ಅಂದs ಬಿಟ್ನಬೇ.

ಮುದುಕಿ: ಯಾ ಊರ ಹಾಟಗಳ್ಳ ಅಂವ
ಹಂಗ ಅಂದ್ಯಂವ?

ಹುಡುಗ : ಬುಡ್ಡಾ ಅಂದರ ಬಿಟ್ಟೇನೇನು?
ಹ್ರಾಂ ಹ್ರೀಂ ಟಿಂಗರ ಬುಡ್ಡಾ

ಮುದುಕಿ: ಖಲಾಸ್ ಖಲಾಸ್ ಅಂಗಡೀ ಬಾಡ್ಯಾ

ಹುಡುಗ : ಗೊನಿಗೆ ಗೊನೀನ ತಿಂದ ಬಿಟ್ಟೆ.

ಮುದುಕಿ: ಬಾಳೀಹಣ್ಣು ಖಲಾಸ್ ಖಲಾಸ್

ಹುಡುಗ : ಎಲ್ಲಾ ತಿಂದು, ಒಂದs ಹಣ್ಣಾ
ತಂದ ಬಿಟ್ಟsನಿಬೇ.

(ಕಿಸೆಯೊಳಗಿಂದ ಒಂದು ಬಾಳೆಹಣ್ಣು ತೆಗೆದು ತೋರಿಸುವನು. ಆಮೇಲೆ ಹಸಿದವರಂತೆ ಹೊಟ್ಟೆ ತಿಕ್ಕಿಕೊಳ್ಳುತ್ತ)

ಎವ್ವಾ ಎವ್ವಾ ಮತ್ತೀಗ
ಹೊಟ್ಟೆ ಹಸ್ತ್ವತಿಬೇ.

ಮುದುಕಿ : (ಅವಸರ ಮಾಡುತ್ತ)
ತಡೀ ತಮ್ಮ ಬತ್ತ ಕುಟ್ಟಿ
ಅಕ್ಕೀ ಮಾಡ್ತನಿ
(ಕುಟ್ಟುವಂತೆ ನಟಿಸುವಳು.)

ಹುಡುಗ : ಎವ್ವಾ ಎವ್ವಾ ಹೊಟ್ಯಾಗ ಏನ್ಹ
ಗುರ್ ಅಂತsತಿಬೇ.

ಮುದುಕಿ : ತಡೀ ಕೂಸ ಅಕ್ಕಿನ ಹಳ್ಳು
ಆರಿಸಿ ಬೆಡ್ತsನಿ.

(ಅಕ್ಕಿ ಆರಿಸುವಂತೆ ನಟಿಸುವಳು. ಇನ್ನೂ ಮುಂದೆಯೂ ಹಾಗೆಯೇ)

ಹುಡುಗ : ಎವ್ವಾ ಎವ್ವಾ ಹೊಟ್ಯಾಗ ಇಲಿ
ಓಡ್ಯಾಡ್ತಾವಬೇ.

ಮುದುಕಿ : ತಡೀ ರಾಜಾ ಅಕ್ಕಿ ತೊಳೆದು
ಎಸರು ಇಡ್ತsನಿ.

ಹುಡುಗ : ಎವ್ವಾ ಎವ್ವಾ ಹೊಟ್ಯಾಗ ಕಾಮಿ
ಗೆಬರಾಕ ಹತ್ತೇತಿಬೇ.

ಮುದುಕಿ : ತಡೀ ಪುಟ್ಟಾ ಒಲ್ಯಾಗ ಒಂದಿಷ್ಟು
ಒಡಕಲಾ ಇಡ್ತsನಿ.

ಹುಡುಗ : ಎವ್ವಾ ಎವ್ವಾ ಹೊಟ್ಯಾಗ ಹುಲೀ
ಹರದಾಡ್ತಾವಬೇ.

ಮುದುಕಿ : ಉಕ್ಕು ಬಂತು, ಬೆಂದsತಿಲ್ಲ
ನೋಡ್ತೇನಿ ತಡೀಪಾ.

ಹುಡುಗ : ಎವ್ವಾ ಎವ್ವಾ ಹೊಟ್ಟೆ......

ಮುದುಕಿ : ಹಂಗs ಉಂಡ್ರ ಬಾಯಿ ಸುಟಗಂಡಿ
ಆರಲಿ ತಡೀಪಾ......

ಹುಡುಗ : (ತಡೀಲಾರದೆ ಚೀರುತ್ತಾ)
ಎವ್ಮಾ ಎವ್ಮಾ ಹೊಟ್ಟೀ—

ಮುದುಕಿ : (ವ್ಯೈ ಮರೆತ ಸಿಟ್ಟಿನಿಂದ)
ತಡೀಲಾ ಬುಡ್ಡ್ಯಾ......

(ಒಮ್ಮೆಲೆ ವಾತಾವರಣ ಬದಲಾವಣೆ. ಮುದುಕಿಯ ಮುಖದ ಮೇಲೆ ಸಾವಕಾಶವಾಗಿ ಭಯ ಮೂಡುವುದು. ಹುಡುಗ ಸಾವಕಾಶ ಪ್ರೂಟುಪಟ್ಟಿ ಹೊರತೆಗೆದು ಗಾಳಿಯಲ್ಲಿ ತಿರುಗಿಸುತ್ತ ಮುದುಕಿಗೆ ಸುತ್ತು ಹಾಕುವನು. ಹ್ರಾಂ ಹ್ರೀಂ ಎನ್ನುತ್ತ 'ಟಂಗರ ಬುಡ್ಡೀ' ಎನ್ನುವನು.)

(ಮುದುಕಿ ತಲೆ ತಿರುಗಿ ವಿಲಿ ವಿಲಿ ಒದ್ದಾಡಿ ಹೆಣವಾಗಿ ಬೀಳುವಳು —'ಮಾವಾ ಮಾವಾ' ಎಂಬ ಕೊನೆಯ ಕೂಗಿನೊಂದಿಗೆ.

ಹುಡುಗ ಗಹಗಹಿಸಿ ನಗುವನು. ನಕ್ಕೀ ನಗುವನು. ಹೆಣದ ಸುತ್ತ ಕುಣಿಯುವನು. ಆಮೇಲೆ ಕಿಸೆಯಲ್ಲಿಯ ಬಾಳೆಹಣ್ಣು ತೆಗೆದು ಸುಲಿದು ತಿಂದು ಸಿಪ್ಪೆಯನ್ನು ಅಲ್ಲಿಯೇ ಎಸೆಯುವನು).

ಹುಡುಗ : ಮಾವ ಅಂತ ಮಾವ!
ಬರ್ರ್ಯಾನ ತಡಿ ಮಾವ!
ಹ ಹ್ಹ ಹ್ಹಾ......

(ಆಮೇಲೆ ಒಮ್ಮೆಲೇ ಏನೋ ಹೊಳೆದಂತಾಗಿ ಮುದುಕಿಯ ಹೆಣವನ್ನು ದರದರ ಎಳೆದು ಪಲ್ಲಂಗದ ಕೆಳಗೆ ಇರಿಸುವನು. ಅದು ಕಾಣದಂತೆ ಅರಿವೆಯಿಂದ ಮರೆ ಮಾಡುವನು.)

(ಇಷ್ಟಾದ ಮೇಲೆ ರಂಗದ ಬಲಬದಿಯಿಂದ ಮುದುಕ ಮೆಲ್ಲಗೆ ಬರುವನು.)

ಮುದುಕ : ಬಂಗಾರೀ...ಸಿಂಗಾರೀ...ಏ ಮುದಕೀ...ಲೇ...

(ಯಾವ ಉತ್ತರವೂ ಬರದಿದ್ದಾಗ ಸಂಶಯದಿಂದ ಸುತ್ತಲೂ ನೋಡುವನು. ಹುಡುಗನ ಕಡೆ ಲಕ್ಷ್ಯ ಹೋಗಿ......)

ಏನ ಮಾಡಾಕ ಹತ್ತಿಲೇ ತಮ್ಮಾ.
ಎಲ್ಲಿ ಹೋಗೇತಿ ಹೇಳಲೇ ನಿಮ್ಮ ಅವ್ವಾ?

(ಹುಡುಗ ರಾವುಗಣ್ಣಿನಿಂದ ಮುದುಕನನ್ನು ನೋಡುವನು. ಮುದುಕನಿಗೆ ಪರಿಸ್ಥಿತಿಯ ಸ್ವಲ್ಪ ಸ್ವಲ್ಪ ಅರಿವಾಗಿ ದನಿ ನಡಗುತ್ತದೆ.)

ಹೇಳ ಎಲ್ಲಿ ಹೋಗೇತೆಲೇ ?
ನನ ಮುದಕೀ ?
ಬಾ ಮಾವಾ ಹೋಗ ಮಾವಾ
ಮಲಗ ಮಾವಾ ಏಳ ಮಾವಾ
ಮಾವಾ ಮಾವಾ ಅಂತಿತ್ತಲ್ಲ
ನನ ಮುದಕೀ.
ಹೇಳ ಎಲ್ಲಿ ಹೋಗೆತೆಲೇ
ನನ ಮುದಕೀ ?
ತೊಟ್ಟಿಲ ಸಂದ್ಯಾಗ ನೋಡಿಕೆಂತ
ಬಣವೀ ಸಂದ್ಯಾಗ ಅಡಿಕೆಂತ
ಮಾವಾ ಮಾವಾ ಅಂತಿತ್ತಲ್ಲ
ನನ ಮುದಕೀ.
ಬಯಕೀ ಬುತ್ತಿ ಬಯಸಿ ಬಯಸಿ
ನನಗs ಬಯಕೀ ಬುತ್ತಿ ತಿನಿಸಿ
ತಿನ್ನs ಮಾವಾ ಅಂತಿತ್ತಲ್ಲ
ನನ ಮುದಕೀ.
ಹೇಳ. ಎಲ್ಲಿ ಹೋಗೆತೆಲೇ
ನನ ಮುದಕೀ ?

(ಈ ಹೊತ್ತಿಗೆ ಪಲ್ಲಂಗದ ಬುಡದಲ್ಲಿದ್ದ ಹೆಣದ ಪತ್ತೆಯಾಗುತ್ತದೆ. ಒಮ್ಮೆಲೆ 'ಮುದಕೀ' ಎಂದು ಕುಸಿದು ಕುಳಿತು, ನಂತರ ಒಮ್ಮೆಲೆ ಸಿಟ್ಟಿಗೆದ್ದು, ಹುಡುಗನ ಕಡೆ ಆರಬಡಿಸಿ ಬರುತ್ತಾನೆ)

ಏನ ಮಾಡಿ ಬಿಟ್ಟಿಲೇ ಲೇ ಬುಡ್ಡಾ ?

(ಕೊಡಲಿ ತಪ್ಪಿನ ಅರಿವಾಗಿ ಗಾಬರಿಯಾಗುತ್ತಾನೆ. ಮುದುಕಿಗೆ ಮಾಡಿದಂತೆಯೇ ಇವನಿಗೂ ಹುಡುಗನು 'ಹ್ರಾಂ ಹ್ರೀಂ ಟಿಂಗರ ಬುಡ್ಡಾ' ಎಂದು ಮಂತ್ರ ಹಾಕುತ್ತಾನೆ. ಮುದುಕ 'ಮುದಕೀ ಮುದಕೀ' ಎನ್ನುತ್ತ ಸಾಯುತ್ತಾನೆ. ಅವನ ಹೆಣವೂ ಪಲ್ಲಂಗದ ಬುಡ ಸೇರುತ್ತದೆ.)

ಹುಡುಗ : (ರಂಗದಮೇಲೆ ಒಬ್ಬನೇ, ಮಂತ್ರ ಪಠಿಸುತ್ತ ಕುಣಿದಾಟ)
ಟಿಂಗರ ಬುಡ್ಡಾ
ಹ್ರಾಂ ಹ್ರೀಂ

ಟಿಂಗರ ಬುಡ್ಡೀ
ಹ್ರೂಂ ಹ್ರೋಂ
ಬುಡ್ಡಾ ಖಲಾಸ್ ಬುಡ್ಡೀ ಖಲಾಸ್
ಖಲಾಸ್ ಖಲಾಸ್ ಎಲ್ಲಾ ಖಲಾಸ್.
ಹ್ರಾಂ ಹ್ರೀಂ ಹ್ರೂಂ
ಮಾವಾ ಮಾವಾ ಮಾತಾಡು
ಹ್ರಾಂ ಹ್ರೀಂ
ಮಾವಿನ ಗಿಡದಾಗ ಜೋತಾಡು
ಹ್ರೂಂ ಹ್ರೋಂ
ಹಿತ್ತಲ ತುಂಬ ಹೇತಾಡು! ಹಹ್ಹಹ್ಹಾ
ಹಿತ್ತಲ ತುಂಬ ಹೇತಾಡು.

(ಕುಣಿತದ ಭರದಲ್ಲಿ ಬಾಳೆಯ ಹಣ್ಣಿನ ಸಿಪ್ಪೆಯ ಮೇಲೆ ಕಾಲಿಟ್ಟು ಜಾರಿ ಧೊಪ್ಪನೆ ಬೀಳುವನು. ಮೇಲೆ ಎದ್ದು ಝಾಡಿಸಿಕೊಂಡು ಸಿಪ್ಪೆಯನ್ನು ಕೆಕ್ಕರಗಣ್ಣಿಂದ ನೋಡುವನು)

ಯಾಂವಾ ಒಗದಾನ ಅವನವ್ವನ,
ಈ ಸಿಪ್ಪೀನ?
ಯಾಂವಾ ತೂರ್ಯಾನ ಅವನಜ್ಜನ,
ಈ ಸಿಪ್ಪೀನ?
ಬೇಲೀ ಮ್ಯಾಲಿನ ಇಣಚಿ?
ಅಲ್ಲ ಅಲ್ಲ.
ಹಾದರಗಿತ್ತಿ ಪಾತರಗಿತ್ತಿ?
ಅಲ್ಲ ಅಲ್ಲ.
ಗಂಗೀ ಗೌರಿ ಕಲ್ಲಿ ಮಲ್ಲಿ?
ಅಲ್ಲ ಅಲ್ಲ.
ಪರಮ್ಯಾ ಗಿರಮ್ಯಾ ಮಾಸ್ತರು ಎಲ್ಲಾ?
ಅಲ್ಲ ಅಲ್ಲ.
ಮುದಕಾ? ಅಲ್ಲ. ಮುದಕೀ? ಅಲ್ಲ.
ತಡಿ ತಡಿ ಹಂಗಾರ.

(ಸ್ವಲ್ಪ ವಿಚಾರ ಮಾಡಿ, ಕೈಯಲ್ಲಿ ಫೂಟುಪಟ್ಟಿ ಹಿಡಿಯುವನು. ಮಂತ್ರಕ್ಕೆ ಅಣಿಯಾಗುವನು.)

ಯಾಂವಾ ಒಗದಾನ ಅವನೌನ
ಈ ಸಿಪ್ಪೀನ್ಸ?

(ಬಗ್ಗಿ ಒಂದು ಹಿಡಿ ಮಣ್ಣು ಹಿಡಿದು ಗಾಳಿಯಲ್ಲಿ ತೂರಿ)

ಹ್ರಾಂ ಹ್ರೀಂ ಹ್ರೊಂ ಹ್ರೋಂ
ಯಾಂವಾ ಸಿಪ್ಪೀ ಒಗದಾನಂವ
ಟೆಂಗರ ಬುಡ್ಡಣ್ಣಾ......
ಟೆಂಗರ ಬುಡ್ಡಣ್ಣಾ......

(ಗಕ್ಕನೆ ನಿಲ್ಲುವನು. ಕೈಯಲ್ಲಿಯ ಫೂಟುಪಟ್ಟಿ ಕೆಳಗೆ ಬೀಳುವದು. ಮುಖ ಭಯದಿಂದ ತತ್ತರಿಸಿ, ನಿಂತಲ್ಲಿಯೇ ಕುಸಿದು, ವಿಲಿವಿಲಿ ಒದ್ದಾಡಿ ಅಂಗಾತ ಬಿದ್ದು ಸಾಯುವನು. ಆಗ......)

(ತೆರೆ ಬೀಳುವುದು)

## ಪಾತ್ರಗಳು

ದೇವಿ

ಮಗು

ಕಾಳ

ಸೂತ್ರಧಾರ

ದೊಡ್ಡ

ತಿಮ್ಮ

ಮುನಿಯ

ಧ್ವನಿ

ಮೇಸ್ತ್ರಿ

ಪುಟ್ಟ

ಕೂಲಿಗಳು

ಗುಂಪು ಇತ್ಯಾದಿ, ಇತ್ಯಾದಿ—

# ಉಳ್ಳವರ ನೆರಳು

ರಂಗದ ಮಧ್ಯದಲ್ಲಿ ದೊಡ್ಡ ಮುಖವಾಡ ಧರಿಸಿರುವ ಮೂರು ವ್ಯಕ್ತಿಗಳು. ಅವರ ಸುತ್ತ ಒಂದು ಹಿಂಡು ಕೂಲಿಗಳು ಕತ್ತು ತಗ್ಗಿಸಿದ ಕುರಿಗಳಂತೆ ನಡೆಯುತ್ತಿದ್ದಾರೆ. ಕತ್ತುಗಳು ಬಗ್ಗಿವೆ—ನೀಳವಾದ ಕೈಗಳು ಇಳಿಬಿದ್ದಿವೆ—ಮುಖ ನಿಸ್ತೇಜ. ಕ್ರಮೇಣ ಅವರಿಗೆ ಬೆಳಕು ಬೀಳುವುದು. ಸುತ್ತುತ್ತಿದ್ದಾಗ ಹಿನ್ನೆಲೆಯಿಂದ ಹಾಡು ಕೇಳಿಬರುವುದು. ಹಾಡು ಪೂರ್ಣವಾಗುವವರೆಗೂ ಸುತ್ತುವರು.

ಹಾಡು : ಕಪ್ಪು ಲೋಕದಲಿ ಮುಪ್ಪುರಿಗೊಂಡ—ಹೇ
ಕುಳಿಯ ಕಣ್ಣುಗಳೆ ಹೇಳಿ
ಸಾಹುಕಾರರ ಮನೆಯ ಕಮಾನಿನಂತೆ
ಬಾಗಿರುವ ಬೆನ್ನುಗಳೇ ಹೇಳಿ
ಹಣ್ಣು ಹಣೆಯಲಿ ಮೂಡಿರುವ ನೇಗಿಲಿನ
ಗೆರೆಗಳೆ ನೀವೂ ಹೇಳಿ
ನೀವು ತುಳಿಯುವ ದಾರಿ
ಒಯ್ಯುವುದೇ ಗುರಿಗೆ?

(ದೀಪ ಕರಗಿದಾಗ ಎಲ್ಲ ಒಳಗೆ ಹೋಗುವರು. ಕಾಳಯ್ಯನ ಮನೆ)

ದೇವಿ: (ಒಳಗಿನಿಂದ ಭರ ಭರ ಬರುತ್ತ) ಒಸಿ ಬೇಗ್ಬಾ ಮಗಾ......ಇಸ್ಕೂಲಿಗೆ ಒತ್ತಾಗಕಿಲ್ವ?

ಮಗು: ಅಕ್ಕೋ......ನಾನಿವತ್ತು ಸ್ಕೂಲ್‌ಗೆ ಓಗಾಕಿಲ್ಲ.

ದೇವಿ: ಯಾಕ್ಮಗಾ?

ಮಗು: ಚೀಲ ಪುಸ್ತಕ ಒಂದೂ ತಕ್ಕೊಟ್ಟಿಲ್ಲ.

ದೇವಿ: ನೋಡ್ದಾ......ಮಗಾ ಆಗ್ಲೇ ಪುಸ್ತಕ ಕೇಳ್ತಾ ಐತೆ. (ಮಗುವಿಗೆ) ಇವತ್ತೊಂದು ದಿನ ಸುಮ್ಕಿರು, ಸಂಜೀಕೆ ಎಂಗಿದ್ರೂ ಬಟವಾಡೆ ಆಯ್ತೈತೆ......ಎಲ್ಲಾ ಕೊಂಡ್ಕೊಂಡು ಬಂದ್ಬಿಡಾವಾ?

ಕಾಳ: ದ್ಯಾವಿ, ಇಸ್ಟ್ಯ ಏಳಾದೆ ಮರ್ತಿದ್ದೆ. ಇವತ್ತು ನಮ್ಮ ಮಗೀನ ಸೇರಿಸ್ತಿವಲ್ಲ ಆ ಇಸ್ಕೂಲಿಗೆ ಫೀಸು ಕೊಡೋಗೋಜಿಲ್ಲಂತೆ, ಆದರೆ ಸೇರ್ಕೊಣಾವಾಗ ಮಾತ್ರ ಫಾರಂಗೆ ಅದ್ಕೆ ಇದ್ಕೆ ಅಂತ ಅತ್ತು ರೂಪಾಯಿ ಕೊಡ ಬೇಕಂತೆ......ಅದ್ಕೇ ಮಾಡಾದೇನು ಅಂತ ತಲೆಕೆರ್ಕೊಳೊ ಅಂಗಾಗೈತೆ.

ದೇವಿ: ಉಡ್ಗನ್ನ ಇಸ್ಕೋಲಿಗೆ ಸೇರಿಸ್ಬೇಕು ಅಂದವ್ರ್ಯಾಗೆ ಸೇರಿಸಬೇಕು...... ದುಡ್ಡು ತಾನೆ..... ಇರು ನೋಡಾವ (ಹುಡುಗನಿಗೆ ಶರ್ಟ್ ಹಾಕುತ್ತ) ಮಗಾ......ಈ ಯೂನಿಫಾರಂ ಭಾಳ ಕಷ್ಟ ಬಿದ್ದು ತಂದಿವ್ನಿ......... ಮಣ್ಣಾಗಾಡಿ ಕೊಳೆ ಮಾಡ್ಕಂಬ್ಯಾಡ.

ಕಾಳ: (ಮಗುವನ್ನೇ ದಿಟ್ಟಿಸಿ) ದ್ಯಾವಿ......ಇದು ಯಾವಾಗ ತಕಂಬಂದೆ? ಎಲ್ಲಿಂದ ತಕಂಬಂದೆ?

ದೇವಿ: ನಿನ್ನೆ ಸಿದ್ದಕ್ಕನ ಕೂಟ ಮಾರ್ಕೆಟಂತಾವ ಓಗಿದ್ದೆ......ಅದೆಂತದೋ ಗುಜರೀನಂತೆ..... ಅಲ್ಲಿ ಜನಗಳು ಕಷ್ಟ ಆದಾಗ ಬಟ್ಟೆ ಬರೆ ಅಡ ಮಡ ಗಿರ್ತಾರೆ ಅಂತ ತಿಳೀತು......ನಮ್ಮ ಉಡುಗಂಗೆ ಆಗೋ ಅಂತಾ ಸಲ್ಟು ಇದ್ರೆ ಯಾಕೆ ಬುಡಾವ ಅಂತ.. ...ಇದು ತಕಂಡೆ.

ಕಾಳ: ಎಷ್ಟು ಕೊಟ್ಟೆ ಇದ್ಕೆ?

ದೇವಿ: ಐದು ರೂಪಾಯಿಗೆ ಕಮ್ಮಿ ಕೊಡಾಕಿಲ್ಲ ಅಂದ......ನಾನಾ ಬುಟ್ಟೇ? ಚೌಕಾಸಿ ಮಾಡಿ ಎಲ್ಡು ರೂಪಾಯಿ ಕೊಟ್ಟು ತಕಂಬಂದೆ......... ಈ ಊರಾಗಿನ್ ಇಸ್ಕೂಲಿಗೆ ಇಂತಾದೇ ಬಟ್ಟೆ ಆಕ್ಕಂಡು ಓಗಬೇಕಂತೆ ......ಅದೇನೊ ಯೂನಿಫಾರಂ ಅಂತೆ.

ಕಾಳ: ಅಂಗಾ!

ದೇವಿ: ಊ ಮತ್ತೆ.. ಅಲ್ಲ...ನಮ್ಮಂತೋರು ಮಾನ ಮುಚ್ಚಾಕ್ಕೆ ಬಟ್ಟೆ ಆಕ್ಕಣಾದೇ ತಾಪತ್ರಯ ಆಗಿರೋವಾಗ......ಅಕ್ಸರ ಕಲಿಸಾಕೆ ಇಂತಾದೇ ಬಟ್ಟೆ ಆಕ್ಕಂಬೇಕು--ಇಂಗೇ ಇರಬೇಕು ಅಂತಾರಲ್ಲ.

ಕಾಳ: ಅದೆ—ಅದೆ—ಏನೇನೊ ಮಾಡವ್ರೆ

(ಮಗು ಸಂಭ್ರಮದಿಂದ ಕಾಳನ ಬಳಿ ಬಂದು ನಿಂತು)

ಮಗು: ಎಂಗೆ ಐತೆ? (ಕಾಳನಿಗೆ ಕೇಳುತ್ತಾನೆ)

ಕಾಳ: (ಮಗುವನ್ನು ಮುದ್ದಿಸಿ) ನೀಟಾಗಿ ಬಟ್ಟೆ ಆಕ್ಕಂಬುಟ್ರೆ ನಮ್ಮ ಉಡ್ಗ ಯಾವ ಮಾರಾಜನ ಮೊಮ್ಮಗನಿಗೆ ಕಮ್ಮಿ ಇಂತಿ......ನೋಡು ಪುಟ್ಟಾ ......ನೀನು ಚೆಂದಾಕೋದಿ ಕಲಿತು ದೊರೆ—ದೊರೆ ಆದಂಗಾಗಬೇಕು ......ಏನಂತೀ?

ಮಗು: ಓ.........ಎಲ್ಲಾ ಓದಿ ನಮ್ಮೂರಿಗೆ ಬತ್ತಿದ್ರಲ್ಲ ಬಸ್ ಓಡಿಸ್ಕಂಡು "ಡ್ರೈವರ್ರು" ಅಂಗಾಗ್ ಬುಡ್ತೀನಿ......

(ಎಂದು ಬಸ್ ಓಡಿಸುವವನಂತೆ ರಂಗದಲ್ಲಿ ಆಡ್ತಾಡುವ. ಕಾಳ-ದೇವಿ ನಗುವರು. ಎಲ್ಲ ಸಂಭ್ರಮದಲ್ಲಿದ್ದಾಗ ಜೋರಾಗಿ ಸೈರನ್ ಕೂಗು ಕೇಳಿ ಬರುವುದು)

ದೇವಿ: (ಬೆಚ್ಚಿ) ಓ......ಫ್ಯಾಕ್ಟ್ರಿ ಸೈರನ್ನಾಗೋ ಒತ್ತಾಯ್ತು.

ಕಾಳ: ಮಾಡಾದೇನು......ಒತ್ತಾಯ್ತೇ

ದೇವಿ: ಮತ್ತೆ— ಪುಟ್ಟನ್ನ ಇಸ್ಕೂಲಿಗೆ ಸೇರಿಸಬೇಕೆ?

ಕಾಳ: (ಯೋಚಿಸಿ) ಹಾ......ನೀನಿವತ್ತು ಫ್ಯಾಕ್ಟರೀಗೆ ಬರ್ಲೇ ಬ್ಯಾಡ...... ರಜಾ ಆಕು—ಮಗೀನ ನೀನೇ ಕರ್ಕೊಂಡೋಗಿ ಇಸ್ಕೂಲಿಗೆ ಸೇರಿಸ್ ಬುಡು..... ಏನಂತೀ?

(ದೇವಿ ಯೋಚಿಸುತ್ತಿರುವಳು)

ಕಾಳ: ಯಾಕೆ? ಏನು ಯೋಸ್ನೆ ಮಾಡ್ತಾ ನಿಂತ್ಕಂಡೆ?

ಮಗು: (ತುಂಡು ಸ್ಲೇಟು ಹಿಡಿದು) ನಡೀ ಮತ್ತೆ.........ಇಸ್ಕೂಲ್ಗೆ ಓಗಾವ......ಉ.

(ಆ ಹೊತ್ತಿಗೆ ಆಚೆನಿಂದ ಸೂತ್ರಧಾರ ಬರುವ)

ಸೂತ್ರಧಾರ: ಭಲೆ ಭಲೆ ಪುಟ್ಟ...ಏನಿವತ್ತು ಭಾರಿ ಸಂಭ್ರಮ...ಏನೋ ಪುಟ್ಟ (ಸ್ಲೇಟು ನೋಡಿ) ಓಹೊಹೊ......ಅಕ್ಷರ ಕಲೀತಿದೀಯಾ?...ಹುಂ ಬಟ್ಟೆ–ಬರೆ ಜೋರಾಗಿ ಹಾಕ್ಕೊಂಡಿದೀ......ಏನು ವಿಷಯ?

ಮಗು: ಮಾವ–ಮಾವ, ನಾನಿವತ್ತು ಇಸ್ಕೂಲ್ಗೆ ಸೇರ್ತೀನಿ......ಊರ್ನಾಗೆ ಐನೋರು ಕಲ್ಸಿದ್ದೂ ಮುಗ್ದಿಲ್ಲ......ಇವತ್ತು ಈ ಊರಿನ ಸ್ಕೂಲಾಗೆ ಭಾರಿ ಭಾರಿ ಪುಸ್ತಕ ಓದಾಕೋಯ್ತೀನಿ ಗೊತ್ತಾ?

ಸೂತ್ರಧಾರ: ಹೌದಾ......ಜಾಣಮರಿ......ಹಾಗ್ಮಾಡು (ದೇವಿ, ಕಾಳ ಸಪ್ಪಗೆ ನಿಂತಿದ್ದಾರೆ) ಅರೆ!! ಮಗು ಶಾಲೆಗೆ ಹೋಗುತ್ತೆ ಅಂದ್ರೆ ಸಂತೋಷ ಪಡೋದು ಬಿಟ್ಟು ಯಾಕೆ ಹೀಗೆ ಹರಳೆಣ್ಣೆ ಕುಡಿದೋರ ತರಾ ನಿಂತಿದೀರಿ.......ಹಾಂ........ಏನಮ್ಮಾ.......ಅರೆ........ಏನಯ್ಯೋ ಏನಾಯ್ತು ಇಬ್ಬರಿಗೂ.......ಹಾಂ.......ಮಾತಾಡಲ್ವ....... ಫ್ಯಾಕ್ಟರೀಗೆ ಹೋಗಲ್ವ......ಏನು?

ಕಾಳ: ಅದೂ......ಊ

ದೇವಿ: ಅಲ್ಲ, ಈ ಅಣ್ಣಯ್ಯ ಏಳ್ತಾ ಅವ್ನೆ.........ಪುಟ್ಟನ್ನ ಇಸ್ಕೂಲಿಗೆ ಸೇರಿಸಾಕೆ ನಾನು ಓಗಬೇಕಂತೆ.......ಇವ್ನು ಕೂಲಿಗೋಯ್ತಾನಂತೆ.

ಸೂತ್ರಧಾರ: ಯಾಕಯ್ಯೋ......ಏನಾಯ್ತು?

ಕಾಳ: ಮತ್ತೆ ಬೇರೆ ದಾರೀನೆ ಇಲ್ಲವೆ? ಕೂಲೀನೇ ನೆಚ್ಕೊಂಡು ಬಾಳೋ ಮಂದಿ ಇಬ್ರೂ......ಅಂತಾದ್ರಾಗೆ ಕೂಲಿ ಕಳ್ಕಳಾಕಾಯ್ತದ...... ಅದಕ್ಕೆ ಅವಳನ್ನೇ ಇಸ್ಕೂಲ್ ತಾವ ಓಗು ಅಂದೆ.

ಸೂತ್ರಧಾರ: ಹಾಗಾ

ದೇವಿ: ನನ್ನ ಕೂಲಿಗೆ ಚಕ್ಕರ್ ಆದ್ರೂ ಕಷ್ಟ ಅಲ್ಲವಾ? ಮಗೀಗೆ ಸ್ಲೇಟು—ಪುಸ್ತಕ ತೆಕ್ಕೊಡಾಕೂ ಕಾಸು ಬೇಕಾಗಾಕಿಲ್ವ......ಸ್ಕೂಲಿಗೆ ಸೇರ್ಸಾಕೆ ಅತ್ರುಪಾಯಿ ಬೇಕಂತೆ...ಅಬ್ಬಕ್ಕೇಂತ ಕೊಡಿಟ್ಟ ಕಾಸೇನೊ ಕೊಡಬೋದು......ಆದ್ರೆ ದಿನಗೂಲಿ ತಪ್ಪಿದರೆ ನಾಳೆ ಗತಿ ಏನು?

ಕಾಳ: ಮಾಡಾದೇನು ಯೋಳು ಮತ್ತೆ......ಕೊನೇಗೆ ಅಲ್ಲೂ ಇಲ್ಲ-ಇಲ್ಲೂ ಇಲ್ಲ ಅನ್ನೋ ಅಂಗಾದ್ರೆ ಕಷ್ಟ—ದೇವಿ ಏಳೊ ಮಾತೂ ದಿಟ...... ಆದ್ರೆ ನಂಗೇ ಈ ಕ್ಷಣಕ್ಕೆ ಏನು ತೋಸ್ತಾ ಇಲ್ವೆ?

ಸೂತ್ರಧಾರ: ಇಷ್ಟೇತಾನೆ...ಇದಕ್ಕೆ ನೀವಿಬ್ರೂ ಯಾಕೆ ಇಷ್ಟು ಯೋಚನೆ ಮಾಡ ಬೇಕೂಂತ......ಅಲ್ಲ ಕಾಳಣ್ಣ ಸ್ನೇಹಿತ ಅಂತ ನಾನಿರುವಾಗ ಅಷ್ಟು ಮಾಡಕ್ಕೆ ಆಗುಲ್ವೆ......ನಾನು ಮಗೂನ ಸ್ಕೂಲಿಗೆ ಸೇರಿಸ್ತೀನಿ....

ದೇವಿ: ಪುಣ್ಯ ಕಟ್ಕಂಟ್ರೀಯಪ್ಪ ಇಕಾ ಅತ್ರುಪಾಯಿ
(ದೇವಿ ಒಂದು ಬಟ್ಟೆ ಗಂಟು ತಂದು ಚಿಲ್ರೆ ಸುರಿಯುವಳು. ಸೂತ್ರಧಾರ ಕುಳಿತು ಹುಡುಗನೊಂದಿಗೆ ಚಿಲ್ಲರೆ ಎಣಿಸುವ)

ಸೂತ್ರಧಾರ: ಹಾಂಂ......ಅಂಗೆ ಕೊಡು......ಕೊಡೋದು ಯಾವಾಗ್ಲೂ ಕಷ್ಟ .........ಈವಯುಸ್ಸಿನಾಗೆ ಕೊಡೋದು ಕಲ್ತರೆ—ದೊಡ್ಡೋರಾದ ಮೇಲೆ ಕಳಿಯೋದು ಇದ್ದೇ ಇದೆ......ಹಾಂ......50 ಪೈಸಾ ಜಾಸ್ತಿ ಇದೆ......ಕೊಡು ದೇವಮ್ಮಂಗೆ.

(ಮಗು ಓಡುವುದು—ಚಿಲ್ಲರೆ ಕೊಡುವುದು)

ದೇವಿ: ಓಗಪ್ಪ ಪುಟ್ಟ......ಚೆಂದಾಕೋದಿ ಪಾಠ ಕಲಿತುಕೋ ನನ್ನ ಸರದಾರ.

(ಕಾಳನೊಂದಿಗೆ ಹೊರಡುವಳು)

ಸೂತ್ರಧಾರ: (ಮಗನನ್ನು ಹಿಡಿದು) ಪುಟ್ಟಣ್ಣೋ, ನೋಡ್ಡಾ ನಿಮ್ಮಕ್ಕ ನಿಮ್ಮಣ್ಣ ನಿನ್ನ ಓದಿಸ್ಬೇಕು ಅಂತ ಎಷ್ಟು ಕಷ್ಟ ಪಡ್ತಾರೆ ಸಾಲ ಬೆಳೀತಾ... ಭೂಮಿ ಹೋಯಿತು. ದಿವಾಳಿ ಎದ್ದ ಸಂಸಾರ, ಮೈಯಲ್ಲಿ ಕಸುವಿದೆ —ಎಲ್ಲಿದ್ರೂ ದುಡಿದು ತಿಂತೀವಿ—ಸುಖವಾಗಿರ್ತೀವಿ ಅಂತ ಬಂದ್ರು... ಇಲ್ಲಿ ಯಂತ್ರಗಳ ನಡುವೆ ಸಿಕ್ಕಿ ನಲುಗಿ ಹೋಗುತಿದಾರೆ. ಅಂಥವರನ್ನ ತಾತ್ಸಾರ ಮಾಡ್ತಾರೆ ಜನ. ಅವರು, ಮುಗ್ಧರು, ಪೆದ್ದರು ಅಂದ್ಕೊಂಡು ಸ್ವಂತಕ್ಕೆ ಲಾಭ ಮಾಡ್ಕೋತಾರೆ ಶ್ರೀಮಂತ ಮಾಲೀಕರು.

ಇದು ಇವತ್ತಿನ ಕಥೆ.

ನೂರಾರು ಜನದ ಕಥೆ.

ನಿಮ್ಮ ಹಾಗೆ—ನಮ್ಮ ಹಾಗೆ ಅನೇಕ ಬುದ್ಧಿವಂತರು—ಶ್ರೀಮಂತರು ಅಂತ ಮೆರೆಯೋ ಜನದ ಹಾಗೆ ಕೈ—ಕಾಲು—ತಲೆ ಇರೋ ದೇವಿ—ಕಾಳ ನಂಥ ಅನೇಕ ಮನುಷ್ಯರು ಹೀಗೆ ಬದುಕಿರ್‍ತಾರೆ, ಯಾಕೆಸ್ವಾಮಿ ಮನುಷ್ಯ ಮನುಷ್ಯರಲ್ಲಿ ಇಂಥ ಅಂತರ?

ನಾನೀಗ ಈ ಮಗೂನ ಶಾಲೆಗೆ ಸೇರಿಸಕ್ಕೆ ಹೋಗ್ತೀನಿ.

ಇವ್ನಾದ್ರು ನಾಳೆ ಈ ವಿಚಾರ ಮಾಡ್ತಾನೋ ಅಥವಾ ಎಲ್ಲರ ಹಾಗೆ (ಮಗುವನ್ನು ನೋಡಿ) ಏನೋ! ಹೇಳಕ್ಕಾಗಲ್ಲ ಸ್ವಾಮಿ......ಇವತ್ತಿನ ವಿದ್ಯಾಭ್ಯಾಸ......ಅದೇನು ಕಲಿಸ್ತಾರೋ...ಅದೇನು ಹೇಳ್ತಾರೋ... ......(ಹುಡುಗನೊಂದಿಗೆ ಹೋಗುವ)

(ಅವರು ಒಳಗೆ ಹೋಗುತ್ತಿದ್ದಂತೆ ಇನ್ನೊಂದು ಪಕ್ಕದಿಂದ ಧ್ವನಿಗಳು ......ಅನಂತರ ಎಲ್ಲ ಗುಂಪಾಗಿ ಬರುವರು)

ಅಬ್ಬಿ ಜರ್‍ರಿ......ಐಸಾ
ಇನ್ನೂ ಕೊಂಚ......ಐಸಾ
ಮೈಸೂರು ಹುಡ್ಗಿ......ಐಸಾ
ಬಂದೇ ಬಂತು......ಐಸಾ
ಇಟ್ಟಿಗೆ ಮಣ್ಣು......ಐಸಾ

(ಬಂದ ಎಲ್ಲ ಮಂದಿ ಕೆಲಸ ಕಾರ್ಯದಲ್ಲಿ ಮಗ್ನರಾಗಿದ್ದಾರೆ. ಅದೇ ಗುಂಪಿನಲ್ಲಿ ದೇವಿ, ಕಾಳ ಸಹ ಕೆಲಸ ಮಾಡುತ್ತಿರುವರು.)

ದೇವಿ: ಅಲ್ಲ ಒಳ್ಗಡೆ ಕೆಲ್ಸ ಬುಡ್ಸಿ......ಈ ಮನೆ ಕಟ್ಟೋ ಕೆಲ್ಸಕ್ಕೆ ಯಾಕೆ ಆಕಿದ್ರೊಂತ?

ಕಾಳ: ಇದು ಮನೆ ಅಲ್ಲಕಣವ್ವೊ......factory ದೇ ದೊಡ್ಡ ಬಿಲ್ಡಿಂಗು.

ದೇವಿ: ಓ......ಅಂಗಾ......ಅಂದ್ರೆ?

(ಭಾರವಾದ ಕಲ್ಲು ಸಾಗಿಸಿ ಸುಸ್ತಾಗಿ ಬಂದ ದೊಡ್ಡ)

ದೊಡ್ಡ: ದೇವವ್ವೊ......ಅಷ್ಟೂ ಗೊತ್ತಾಗ್ನಿಲ್ಲಾಂದ್ರೆ ಏನೇಳಾವ? ಲಾಭ ಎಚ್ಚೆಚ್ಗೆ ಬಂದ್ ಬಂದಂಗೆ ಆ ಸಾವುಕಾರ ಫ್ಯಾಕ್ಟ್ರೀನೂ ದೊಡ್ ದೊಡ್ದು ಮಾಡ್ತಾ ಅವ್ನೆ.

ಕಾಳ: ಏನೋ......ಪುಣ್ಯಾತ್ಮರು......ದುಡ್ಡಿದೆ, ಖರ್ಚುಮಾಡ್ತಾರೆ.

ತಿಮ್ಮ: ಏನು ಕಾಳಣ್ಣೋ......ನೀನೂ ಪುಣ್ಯಾತ್ಮರು ಅಂದ್ಬುಟ್ಟೆ......... ನಾವಲ್ವ ದುಡ್ಯಾದು......ಬೆಳಗಿಂದ ಸಂಜೀಗಂಟ ನಾವು ಬೆವರು ಸುರಿ ಸಾದು......ಅವರು ಮಾಡೀಮೇಲ್ಮಾಡಿ ಕಟ್ಕಳ್ಳಾದು......... (ವ್ಯಂಗ್ಯವಾಗಿ) ಪುಣ್ಯಾತ್ಮರಂತೆ ಪುಣ್ಯಾತ್ಮರು.

ದೇವಿ: ಈ ಒಸಾ ಬಂಗ್ಲೆ ಆದ್ಮೇಕೆ ಬೋಮುಂದಿ ಕೆಲ್ಸಕ್ಕೆ ಬತ್ತಾರಲ್ವ ?

ತಿಮ್ಮ : ಬರೋದಾ..........ಯಾಕಾ ದೇವಿ ಅಂಗೆ ಕೇಳ್ತಿ ?

ದೇವಿ: ಯಾಕೇಂತೀಯೊ........ಅಟ್ಟೇತಾವ ಬೋಮುಂದಿ ಕೆಲ್ಸಿಲ್ದೆ ಕುಂತವ್ರಲ್ಲ ಅವ್ರಿಗೂ ಕೆಲ್ಸ ಕೊಟ್ಟಾರಂತ?

ದೊಡ್ಡ : ಹುಂ......ಕೊಟ್ಟಾರು . .ಕೊಟ್ಟಾರು.....ಯಾರುಸ್ಕಾರಕ್ಕೊಟ್ಟಾರು ......ಈ ಮುಂದಿ ಕೊಬ್ಬು ಬೆಳ್ಸಾಕತ್ತಾನೆ ಬಡವ್ರು ಮುಂಚಿಂದ ದುಡ್ಕಂ ಬತ್ತಿರೋದು.........ಇನ್ನು ಮುಂದಕ್ಕೂ

(ದೂರದಲ್ಲಿ ಕೆಲಸ ಮಾಡುತ್ತಿದ್ದ ಒಬ್ಬಾತ ನಿಧಾನವಾಗಿ ಇವರ ಬಳಿಗೆ ಬರುವ)

ದೊಡ್ಡ : (ಮಾತು ನಿಲ್ಲಿಸಿ, ಇವನತ್ತ ತಿರುಗಿ) ಯಾಕ್ಲೇ ಮುನಿಯ ಉಸಾರಿಲ್ಲ ಏನಾಗೈತೆ ?

ಮುನಿಯ : (ನರಳುತ್ತ) ಇಲ್ಲ ಕಣಣ್ಣಾ ಒಸಿ ದಣಿವಾಗೈತೆ...

(ಎನ್ನುತ್ತ ಹೆಜ್ಜೆ ಇಡುವಾಗ ತಡವರಿಸಿ ಕೆಳಗೆ ಬೀಳುವನು. ದೊಡ್ಡನೂ ಇತರರೂ ಅವನಿಗೆ ಪೆಟ್ಟಾಗದಂತೆ ಹಿಡಿದು ಅರ್ಧ ಎಬ್ಬಿಸಿ, ಒರಗಿಸಿ ಕೂರಿಸಿ ಉಪಚರಿಸುವರು)

ಕಾಳ : ಈಟಾಕೊಂದು ವೈನಾಗಿಲ್ಲ ಅಂದ್ಮ್ಯಾಲೆ ಯಾಕ್ಲಾ ಕೂಲೀ ಮಾಡಾಕ್ ಬಂದೆ–ಗುಡ್ಲಾಗೇ ಇದ್ದು ಒಸಿ ಮಾದ್ದಾನಾ ತಗಾನಾಕಿಲ್ವ ?

(ಮುನಿಯ ಮಾತಾಡಲಾಗದೆ ಕಣ್ಣು ಕಣ್ಣು ಬಿಡುವ. ಏನೋ ಹೇಳಲು ಎತ್ತಿದ ಕೈ ಸೋತು ಕೆಳಗೆ ಬೀಳುತ್ತದೆ. ಹೊಟ್ಟೆ, ಹಣೆ ಮುಟ್ಟಿ ನೋಡಿದ ತಿಮ್ಮ ಬೆಚ್ಚಿ)

ತಿಮ್ಮ : ಐ—ಕೆಂಡಾ ಮಂಡಲ ಜರಾ ಬಂದೈತೆ ಕಣ್ಲಾ

ದೇವಿ: (ಹತ್ತಿರಬಂದು) ......ಏ......ತೆಗಿ...ತೆಗಿ......ಆಯಪ್ಪ ನಾಕ್ ದಿನ್ದಿಂದ ಉಂಡಿಲ್ಲ. ನಂಗೊತ್ತೈತೆ ಇವತ್ ಬಟವಾಡೆ ಆದ್ರೆ ರೇಸನ್ ತಂದೇನೂಂತ ಕೂಲೀಗೂ ಬಂದಾನೆ. ಒಟ್ಯಾಗೇಸಿಲ್ಲಿದ್ರೆ ಇನ್ನೆ ನಾದಾತು—

ದೊಡ್ಡ : ಹೌದೇನ್ಲಾ...ಮುನಿಯಾ...ಯಾಕ್ಲಾ ಹಿಂಗಾದೇ ——ನಮ್‌ನಾರಾ ಕೇಳಾಕಿಲ್ವಾ ಇದ್ದುದ್ದೆ ಓಟೋಟು ಅಂಚಿಕಾಭೋದಾಗಿತ್ತು.

ತಿಮ್ಮ : ಏ...ಬಿಡು, ಈ ಕೂಲೀ ಕಂಬಳೀ ಮಾಡೋ ನಮ್ಮಂಥಾ ಜನಕ್ಕೆ ತಿನ್ನ ಕಿಲ್ದಿದ್ರೂ ಅಭಿಮಾನ ಜಾಸ್ತಿ. ಅದ್ರಾಗೂ ಈ ಮುನಿಯ ಎಂದಾನಾ ಬಾಯ್ಬಿಟ್ ಇಂಗೇ ಅಂದವ್ನಾ ?

(ಎನ್ನುತ್ತಾ ತಾನು ತಂದಿದ್ದ ತಿಂಡಿ ಗಂಟನ್ನು ಬಿಚ್ಚಿ ಅವನ ಕೈಯಲ್ಲಿ ಕೊಡುತ್ತಾ) ಒಂದ್ ಗುಕ್ಕು ಬಾಯಿಗೆ ಆಕ್ಕೊ ಮುನಿಯಾ...
(ಮುನಿಯ ನಿಧಾನವಾಗಿ ಚೇತರಿಸಿಕೊಂಡು ತಿಂಡಿ ತಿನ್ನ ತೊಡಗುವ)

ಧ್ವನಿ: ......ಏ......ಮೇಸ್ತ್ರಿ ಬಂದ

(ಒಂದು ಎರಡು ನಾಲ್ಕು ಹೆಚ್ಚುತ್ತ ಹೋಗುವ ಧ್ವನಿಗಳು ಇದೇ ಸಾಲನ್ನು ಹೇಳುತ್ತವೆ. ಎಲ್ಲರೂ ಗಾಭರಿಯಿಂದ ಅವರವರ ಕೆಲಸದಲ್ಲಿ ತೊಡಗುವರು. ದಾಪುಗಾಲು ಹಾಕಿಕೊಂಡು ಮೇಸ್ತ್ರಿ ಬರುತ್ತಾನೆ. ಸುತ್ತ ನೋಡುತ್ತಾನೆ—ಎಲ್ಲರೂ ತಲೆ ತಗ್ಗಿಸಿ ಕೆಲಸ ಮಾಡುತ್ತಿದ್ದಾರೆ. ಮುನಿಯನನ್ನು ಹಿಡಿದುಕೊಂಡು ಕೂತ ದೊಡ್ಡನನ್ನ ಗಮನಿಸಿದಾಗ ಕಣ್ಣು ಕೆಂಪಗಾಗುತ್ತದೆ.........ಸರ ಸರ ಬಂದು ಕೈಯಲ್ಲಿದ್ದ ತಿಂಡಿ ಯನ್ನು ಕಾಲಲ್ಲಿ ಒದ್ದು ದೂರಕ್ಕೆ ಸಿಡಿಸುವ. ಮುನಿಯ ರಭಸಕ್ಕೆ ಹಿಂದೆ ಬೀಳುತ್ತಾನೆ.)

ಮೇಸ್ತ್ರಿ: ಹಡಬೆ ನನ್ನ ಮಗನೇ.........ಯಾಕೋ.........ತಿಂದ್ ಕೊಬ್ಬು? ಬದುಕು ಮಾಡ್ರೋ ನನ್ ಮಕ್ಳಾ ಅಂದ್ರೆ ಕಳ್‌ಬೀಳ್ತೀರಾ? ಚವ್ಡಾ ಸುಲ್ದೇನು.........

ದೊಡ್ಡ: ಇಲ್ಲ ಮೇಸ್ತ್ರಿ...ಅವ ಜರಬಂದ್ ಸೋತವ್ನೆ...ಬಿದ್ದೋಗ್ತಿದ್ದ...ಅದಕ್ಕೇ ...ಏನೂ ತಿಳ್ಕಂಬ್ಯಾಡ...ಒಸಿ ಸುದಾರಿಸಿಕೊಂಡು ಕೆಲ್ಸಕ್ಕೋಯ್ತಾನೆ

ಮೇಸ್ತ್ರಿ: (ಅಣಕಿಸುತ್ತಾ) ಬಂದ ಭಾರೀ ಯಜಮಾನ...ಕೂಲಿ ಮಾತ್ರ ನ್ಯಾಯ ವಾಗಿ ಕೊಡಬೇಕೊ? ದುಡ್ಡು ಹುಣಸೇ ಬಿತ್ತಾನೇನ್ರಯ್ಯ...ಸೋಮಾರಿ ನನ್‌ಮಕ್ಳಿಗೆ ಕೊಡಾಕೆ? ಕೆಲ್ಸದೊತ್‌ನಾಗೆ ಊಟ ಮಾಡ್ತಿದ್ದ ಅಂತ ಕಂಪ್ಲೇಂಟು ಬರ್ದು ವಾರದ್ ಕೂಲಿ ವಜಾ ಮಾಡುಸ್‌ತೀನಿ...ನಿಂಗೂ ಅಷ್ಟೇ...ಬಾಂಚೋತ್ ನನ್ಮಕ್ಳಾ...ನಿಯತ್ತಿಲ್ದೋರಾ...ಕೂಲಿನನ್ ಮಕ್ಳಿಗೇ ಇಸ್ಟ್ ತಿಕಾಕೊಬ್ಬೇನ್ರಲೇ

ತಿಮ್ಮ: (ಕೋಪ) ಇಕಾ ಮೇಸ್ತ್ರಿ......ನಾಲ್ಗೆ ಒಸಿ ಉಸಾರು......ಅದನ್ನ ಎಂಗೆ ಅಂದ್ರಂಗೆ ಬಳಸ್ಬೆ...ನಿನ್ನ ಗಾಚಾರ. ಗೇಯ್ತೀವಿ...ಉಣ್ತೀವಿ. ನೀಏನು ಪುಗಸಟ್ಟೆ ಕೊಡ್ತೀಯಾ ಅಣವಾ? ನಿನ್ನಂಗೆ ನಾವೂ ಮನ್ಸರು ಅನ್ನಾದು ನೆಪ್ಪಿರ್ಲಿ...ಕೂಲಿ ಅಂತೇನೋ ತಾತ್ಸಾರ ಮಾಡ್ತಿಯಾ?... ಹೌದಯ್ಯೋ......ನಾವು ಕೂಲಿಮಾಡ್ತೀವಿ......ದೇಸಕ್ಕೆ ನಮ್ಮಿಂದ ಸಆಯ ಆಯ್ತದೆ......ನೀನೇನಯ್ಯೋ ಮಾಡ್ತಿ?......ಜಬರದಸ್ತಿ ಮಾಡಿಕೊಂಡು, ಸ್ವಾಬರ ಮುಂದೆ ಅಲ್ಕಿರ್‌ಕೊಂಡು...ನಮ್ಮಂಥ ಬಡವರ ಪ್ರಾಣ ಇಂಡ್ಕಂಡು ಸುತ್ತಿದ್ದೂ ಸುತ್ತಿದ್ದೆ.........ಯೋ ನಂಗೊತ್ತಿಲ್ವೇನಯ್ಯೋ ನಿನ್ನಥೆ.

ಮೇಸ್ತ್ರಿ : ಹಾ!! (ಎಂದು ಹೌ ಹಾರಿದಾಗ)

ತಿಮ್ಮ : ಓಗಯ್ಯೋ... : ಓಗೋಗ್......(ಎಂದು ಎಲ್ಲ ನುಗ್ಗುವರು)

(ಸೈರನ್ ಶಬ್ದ. 'ಬಟವಾಡೆಗೆ ಬರ್ರಿ,' ಎಂದು ಒಬ್ಬ ಕೂಗುವ. ಗೊಂದಲವಾದಾಗ ಒಬ್ಬಾತ ಎತ್ತರದ stool ಮೇಲೆ ನಿಂತು ಹೆಸರಿನ ಪಟ್ಟಿ ಓದ ತೊಡಗುವ, ಹಾಗೆ ಓದುತ್ತಿದ್ದಾಗ ಇಬ್ಬರು ಟೇಬಲ್, ಕುರ್ಚಿ ತಂದು ಹಾಕುವರು. ಮಂದಿ ಸರಸರ ಕೈ ವರಸಿಕೊಂಡು Q ನಲ್ಲಿ ನಿಲ್ಲುವರು. ಹಾಗೆ ನಿಲ್ಲುವಾಗ ಗಲಿಬಿಲಿಯಾಗಿ ಮೇಸ್ತ್ರಿ ಗದರುವ)

ಮೇಲೆ ನಿಂತವ : (ಜೋರಾಗಿ ಕೂಗುವ) ತಮ್ಮಣ್ಣ, ಲಿಂಗಣ್ಣ, ಬೊಮ್ಮ, ರಂಗ, ವೆಂಕ, ಅನಂತ, ತಿಮ್ಮ, ಎಂಕ, ದೊಡ್ಡ, ಕಾಳ, ಸತ್ಯಣ್ಣ, ದೇವಮ್ಮ, ಬೀರಣ್ಣ ನಿಂಗಿ, ಗೌರಮ್ಮ, ಲಚ್ಮಕ್ಕ, ನಾರಾಯಣ, ಅನುಮಪ್ಪ-ಸೀನಪ್ಪ

ಮೇಸ್ತ್ರಿ : (ಟೇಬಲ್ ಬಳಿ ನಿಂತು) ಲೈನಲ್ಲಿ ಬಂದು ನಿಲ್ರೋ ಬೇಗ.

(ಹೆಬ್ಬೆಟ್ಟಿನ ಗುರುತು ಹಾಕಿಸಿಕೊಂಡು ಮೇಸ್ತ್ರಿ ಹಣ ಕೊಡಿಸುವ. ಪಕ್ಕಕ್ಕೆ ಬಂದಾಗ ಕೈ ಸನ್ನೆಮಾಡಿ ಕಮಿಷನ್ ವಸೂಲು ಮಾಡುವ, ಎಲ್ಲರ ಬಳಿಯೂ ಹೀಗೇ. ಕಾಳ ಬಂದು ಹಣ ತೆಗೆದುಕೊಳ್ಳುವ.)

ದೇವಮ್ಮ : ಈ ದಪ ಏನು ಇಡ್ಕಂಬೇಡ ಬಟವಾಡೇನಾಗೆ......ತಮ್ಮನ್ನ ಈ ದಪ ಇಸ್ಕೂಲ್ಗೆ ಸೇರಿಸಿವ್ನಿ......ಸಂಸಾರಕ್ಕೆ ದುಡ್ಡು ಸಾಕಾಗ್ದೇ ತೊಂದರೆ ಆಗದೆ.........

ಕಾಳ : (ಹಿಂತಿರುಗಿ) ದೇವಿ, ಮಾಮೂಲಿ ಅಂದ್ಮೇಗೆ ಮುಗಿದ್ಹೋಯ್ತು......ಅಲ್ಲುಗಿಂಜೋದ್ಯಾಕೆ ಅವಂತಾವ...ಎಂಗೋ ಅಯ್ತದೆ......ಬಾ ಬಾ

ದೊಡ್ಡ : (ಪ್ರವೇಶಿಸಿ) ಏನ್ಲಾ ಕಾಳ ಇದು ?

ಮೇಸ್ತ್ರಿ : (ಹೇಳಬೇಡವೆಂದು ಸೂಚನೆ ಮಾಡುವ)

ದೊಡ್ಡ : ಏ ಮೇಸ್ತ್ರಿ......ಏನದು ?

ಕಾಳ : ಏನಿಲ್ಲ ದೊಡ್ಡಯ್ಯ......ಮೇಸ್ತ್ರೀಗೆ ಮಾಮೂಲು ಕೊಡೋವಾಗೆಲ್ಲ ದೇವಿ ತಕರಾರು ಇಡ್ತದ್ದೆ

ದೇವಿ : ತಕರಾರು ಎಂಥದು ?...ಈ ವಾರ ಬುಟ್ರೆ ಮುಂದಿನವಾರ ತಕಂತಾನೆ

ದೊಡ್ಡ : ಓ......ಅಂಗೋ......ಮೇಸ್ತ್ರಿ......ಈ ಮಾಮೂಲು ಕಥೆ ಇನ್ನೂ ಬಿಟ್ಟಿಲ್ವೊ

ಮೇಸ್ತ್ರಿ : ಹಹ......ನಂದೇನೈತೆ ದೊಡ್ಡಯ್ಯ........,ಅವ್ರೇ ಪ್ರೀತಿಯಿಂದ ಕೊಡೋವಾಗ......

ಕಾಳ: ದೊಡ್ಡಣ್ಣೋ......ಕೆಲ್ಸ ಇಲ್ಲದೆ ಮಾಡಾದೇನು ಅಂತ ತಲೇಮ್ಯಾಗೆ ಕೈ ಮಡಿಕ್ಕಂಡು ಓ ಲಕ್ಸ್ಮಣಾಂತ ಕುಂತಿದ್ದೋನ್ಗೆ ಈ ಎಪ್ಪ ದೇವ್ರಂಗೆ ಬಂದು ಈ ಕೆಲಸ ಕೊಟ್ಟವ್ನೆ......ಅದ್ಕೆ ಕರಾರಿನಂಗೆ ಎಲ್ಡು ತಿಂಗಳ ಸಂಬಳಾನ ವಾರವಾರ ಸ್ವಲ್ಪಿ ಕೊಟ್ಟು ತೀರ್ಸಿ ಬುಂಡಾವಾಂತ...... ಕೊಟ್ಕಂಬಂದ್ರೆ ತಪ್ಪೇನು? ಮಾತ್ನಂಗೆ ನಡ್ಕಬೇಕೋ-ಬೇಡ್ವೋ ನೀನೇ ಏಳು? ಇಲ್ಲಾಂದ್ರೆ ಸಿವಾಮೆಚ್ತಾನಾ?

ದೊಡ್ಡ: ಅಲ್ಕಣಯ್ಯೋ...ದುಡಿಯಾನು ನೀನು-ಸಂಬಳ ತಕ್ಯಾಳಾನು ನೀನು ......ಇವನಿಗ್ಯಾಕಂತೆ ಮಾಮೂಲಿ......ಇದ್ರಾಗೆ ಸಿವಾ ಮೆಚ್ಚೋ ಕೆಲ್ಸ ಏನೈತೆ ಅಂದ್‌ಬುಟ್ಟು

ಕಾಳ: ಏ......ಅಂಗಂತ ನಾನು ಮಾತು ಕೊಟ್ಟಿರ್ನಿಲ್ವಾ?

ದೊಡ್ಡ: ಕೂಲಿಗಳ್ನ ಕರ್ಕಂಬರ್ತೀನಿ ಅಂತ ಸಾಏಬ್ರತಾವಾನೂ ಇಂಗೇ ಹೇಳಿ ಕಮಿಷನ್ ಒಡ್ಕಂತಾನೆ......ಈ ಮಾತು ಒಪ್ಪಾಕಿಲ್ಲಾನು...... ನೀನ್ಗೋಳು ದುಡ್ಡು ಕೊಟ್ಗೊಕೊಟ್ಟು ಈವಯ್ಯನ ಬೊಜ್ಜು ಬೆಳಸ್ಬೇಕಾ? (ಕೂಲಿಗಳ ಕಡೆ ತಿರುಗಿ) ನೀವೇಳ್ರಯ್ಯೋ-ಬೆವರುಸುರ್ಸಿ ದುಡಿಯಾರು ನೀವು. ಆದಕ್ಕೆ ಸಂಬಳ ತಕಳಾರು ನೀವು. ಅಂತಾದ್ರಾಗೆ ಇವ್ನಿಗೆಂತ ಮಾಮೂಲು?

ತಿಮ್ಮ: ಮಾಮೂಲಿ ಅಂತಾನೆ-ಒಂದ್ನಿಮಿಸ ಲೇಟಾದ್ರೂ ಸಂಬಳಕಟ್‌ಮಾಡ್ತಾನೆ

ಮೇಸ್ತ್ರಿ: ನೀನು ಲೇಟ್ ಮಾಡಿದ್ರೆ ಸಂಬಳ ಕಡಿಮೆ ಮಾಡದೆ ಸರಿಯಾಗಿ ಕೊಡ ಬೇಕಾ?

ತಿಮ್ಮ: ಯಾಕ? ಒಂದೈದು ಮಂಕ್ರಿ ಜಾಸ್ತಿ ಮಣ್ಣು ಎತ್ತಿ ಆಕಿದ್ರೆ ಜಾಸ್ತಿ ದುಡ್ಡು ಕೊಡ್ತೀಯಾ?

ಮೇಸ್ತ್ರಿ: ನಿನ್ನ ಕೂಲಿ ನಾವು ಕೊಡ್ತಿರೋದು ಟೇಮ್‌ಗೇನಯ್ಯೋ?

ದೊಡ್ಡ: ಹೌದಾದು......8 ಘಂಟೆ ಕೂಲಿಲೆಕ್ಕೆ ಹಾಕ್ತೀರಿ...8 ಘಂ. ಲಿ ಅವನು ಎಷ್ಟು ಕೆಲಸ ಮಾಡಿದಾನೆ ಅನ್ನೋದು–ನೀವು ಎಷ್ಟು ಕೆಲ್ಸ ಅವನಿಂದ ತೆಗೀತೀರಿ ಅನ್ನೋದು ನಿಮ್ಮ ಗಮನಕ್ಕೇ ಬರೋದಿಲ್ಲ.

ಕೂಲಿ: ಗಿರಿಣಿ ತಾವ ಕೂಲಿ ಮಾಡೋವಾಗ ದಿನಕ್ಕೆ ಏಟೊಂದು ಲಡಿ ದಾರ ತೆಗೆದಿದ್ವಿ ಏನ್ಕತೆ?

ತಿಮ್ಮ: ಆದ್ರೆ......ಕೂಲಿ ಮಾತ್ರ ಅಷ್ಟೇ ಕೊಡ್ತಾರಲ್ಲ.

ಮೇಸ್ತ್ರಿ: ನೀವೇನ್ರಲೇ ಮಾಡಿದೀರಿ–ಯಂತ್ರಗೋಳ್ ಮಾಡ್ತವೆ.

ತಿಮ್ಮ: ಐ......ನಾವಿಲ್ದೇನೇ ನಿನ್ನ ಯಂತ್ರ 'ಟೋ' ಅಂತಾದ......ತಗಿ-ತಗಿ

ದೊಡ್ಡ : ಮಕ್ಕಳಿಗೆ, ಹೆಂಗಸರಿಗೆ ಬೇರೆ ಬೇರೆ ಅಂತ ಕಾನೂನಿನಲ್ಲಿ ಬದಲಾವಣೆ ಆಗಿದ್ದರೂ ನಿಮ್ಮಲ್ಲಿ ಮಾತ್ರ ನಿಗದಿ ಮಾಡಿರೋ ಕೂಲಿ, ಓದೋ ಮಕ್ಕಳು ಬಸರಿ ಹೆಂಗಸರೂ ಸಹಾ ಹೊಟ್ಟೆಗಿಲ್ಲದ್ದಕ್ಕೆ ದುಡೀತಾರೆ. 8 ಘಂ. ಈ ಕೆಟ್ಟ ಹವೆ ಕುಡಿತಾ, ದುಡಿಯೋ ಜನಕ್ಕೆ ಭಿಕ್ಷದವರ ಥರಾ ಕೂಲಿ ಬಿಸಾಕ್ತಿರೋ ನೀವು ಮರ್ಯಾದೇನೂ ಇಲ್ದೇ ನಡಸ್ಕೊಳ್ತಿದೀರಿ . . . . ಸಾಲದ್ದಕ್ಕೆ ಕಮಿಷನ್ ಬೇರೆ ತಕಂತೀರಲ್ಲ—ನಾಚ್ಕೆ ಆಗಲ್ಲ ನಿಮ್ಗೆ

ಕಾಳ : ದೊಡ್ಡಣ್ಣೊ......ಕ್ವಾಪ ಮಾಡ್ಕಂಬೇಡ—ಸಾಂತವಾಗಿರು

ದೊಡ್ಡ : (ಕೂಲಿಗಳಿಗೆ) ನೀವೆ ಹೇಳಿ...ಕಮಿಷನ್ ಕೊಡಬೇಕಾ ಅವನಿಗೆ......

ಎಲ್ಲ : (ಗುಂಪು ಅವನ ಸುತ್ತ ಸುತ್ತುತ್ತ)

ಏನಪ್ಪೊ—ಮೇಸ್ತ್ರಪ್ಪೋ
ಬೇಕಾನಿಂಗೆ—ಕಮಿಸನ್ನು
ತಕ್ಕಾಂತೀಯಾ—ಕಮಿಸನ್ನು
ಮೇಸ್ತ್ರಪ್ಪೊ—ಕಮಿಸನ್ನು
ಕೊಡಾವ—ಕಮಿಸನ್ನು

(ಮೇಸ್ತ್ರಿ ಸಿಡಿ ಸಿಡಿ ಎನ್ನುವ. ಎಲ್ಲಾ ಅವನ ಸುತ್ತ ಕೂಗುತ್ತ ಕುಣಿಯುತ್ತಿದ್ದಾಗ ಹಿಂದಿನಿಂದ ಎತ್ತರದ ಧ್ವನಿಯಲ್ಲಿ ಪರಾಕು ಕೇಳಿಬರುವುದು. ತಕ್ಷಣ ಎಲ್ಲ ಚದುರುವರು.)

ಮೇಸ್ತ್ರಿ : ಶ್......ನ ಡೀರ್ರಿಲೇೕ

(ಒಂದು ಪಕ್ಕದಿಂದ ಸಾಹುಕಾರನ ಆಗಮನ. ಅದಕ್ಕೆ ಮುನ್ನ ಒಂದಿಬ್ಬರು ಅಲಂಕೃತ ಕುರ್ಚಿ ಹೊತ್ತು ತರುವರು. ಈರುಳ್ಳಿ-ಬೆಳ್ಳುಳ್ಳಿ ಮೆಣಸಿನಕಾಯಿ ಇತ್ಯಾದಿಗಳಿಂದ ಅಲಂಕೃತವಾದ ತೇಪೆ ಹಾಕಿದ ಛತ್ರಿ ಹಿಡಿದು ಹಿಂದೆ ಒಬ್ಬ ಬರುವ. ಇನ್ನೂ ಕೆಲವರು ಕಮಾನು ತರುವರು. ಮಗದೊಬ್ಬ ದೊಡ್ಡ ತಟ್ಟೆಯಲ್ಲಿ ಹಂಟರ್ ಹಿಡಿದು ತರುವ. ಪರಾಕು ಹೇಳುವವ ಮುಂಚೆ ಬರುವ. ದೃಶ್ಯ ಎಷ್ಟು Rich ಹಾಗೂ ವ್ಯಂಗ್ಯ ಆಗುವುದು ಸಾಧ್ಯವೋ ಅಷ್ಟು ಮಾಡಬಹುದು. ಬ್ಯಾಂಡ್ ಜೋರಾಗಿ ಬಂದಂತೆ ಇಬ್ಬರು ಅಲಂಕೃತ ಚಾಮರ ಹಿಡಿದು—ತಾಳಕ್ಕೆ ತಕ್ಕಂತೆ ಹೆಜ್ಜೆ ಹಾಕಿ ಮುಂದೆ ಬಂದು ಅತ್ತಿತ್ತ ನಿಲ್ಲುವರು)

(ಒಬ್ಬಾತ ಜೋರಿನಿಂದ ಹೇಳುತ್ತ ಬರುವ)

ಪರಾಕು : ಉಘೇ—ಉಘೇ—ಉಘೇ

ಶ್ರೀ ಶ್ರೀ ಶ್ರೀ – ಶ್ರೀಮಂತ ಸಾಮ್ರಾಟ–ನಾಲ್ಕು ಬಟ್ಟೆ ಮಿಲ್ಲಿನ ಮಾಲೀಕ, ಐದು ಹಿಟ್ಟಿನ ಗಿರಣಿಯ ಯಜಮಾನರು-ಉಘೋ-ಉಘೋ ಎಂಟು ಎಣ್ಣೆಮಿಲ್ಲಿನ ಒಡೆಯ

ಎರಡು ಸಕ್ಕರೆ ಮಿಲ್ಲು–ನಾಲ್ಕು ಆಲೆ ಮನೆಯ ಅಧಿಕಾರಿ

ಎಂಟು ಅಂತಸ್ತಿನ ಮನೆಯ ಮಹಾರಾಜ–ಉಘೋ–ಉಘೋ

ಸಹಾಸ್ರಾರು ಶ್ರಮಜೀವಿಗಳ ರಕ್ತದಾನದಿಂದ ಬೊಜ್ಜು ಬೆಳೆಸಿರುವ

ಕೃಪಾಸಾಗರ–ಭೋಪರಾಕ್–ಭೋಪರಾಕ್

ಸಾವಧಾನ–ಸಾವಧಾನ

ಈಗ ಬರುತ್ತಿದ್ದಾರೆ......

ಷಾನವಾಭ್–ಮಿಸ್ತ್ರೀಮಲ್ ಧೊಂಡೂಸಾ–ಭವಾಯತ್ ಸೀನಪ್ಪಸೆಟ್ಟಿ ಭಲ್ಲಾಳ್ ಸೇಟೂ ಬಾಬ್ ಚಂದ್ ಬನೀಕಾಂತ್

ಶ್ರೀ ರಾಮ ನೆರೀ ರಾಯರು

ಅವಧರಿಸಿ–ಅಧರಿಸಿ–ಬರುತ್ತಿದ್ದಾರೆ–ಉಘೋ–ಉಘೋ–ಪರಾಕ್

ಜಾಗಬಿಡಿ...(ಸಂಭ್ರಮ, ಕೂಲಿಗಳು ಬೆಪ್ಪಾಗಿ ನಿಲ್ಲುವರು. ಸದ್ದು–ಗಲಾಟೆ ಇಬ್ಬರು ಕುರ್ಚಿ ಹಾಕುವರು. ಪಕ್ಕದಲ್ಲಿಬ್ಬರು ಕಮಾನು ಹಿಡಿದಿದ್ದಾರೆ ಮಾಲಿಕ ಕೈ ಚಾಚಿದಾಗ ಒಬ್ಬ ಸಿಗರೇಟು ಕೊಡುವ. ಮಾಲೀಕ ರೋಫಿನಿಂದ ಎಲ್ಲರ ಕಡೆನೋಡಿ ನಂತರ ಮಾತಿಗಾರಂಭಿಸುವ ಯೋಚನೆ ಮಾಡುವ–ಎಲ್ಲ ನಿಶ್ಶಬ್ದ)

ಮಾಲೀಕ : ಏಯ್......ಏನದು ಸಮಾಚಾರ?

(ಒಬ್ಬರ ಮುಖ ಒಬ್ಬರು ನೋಡುವರು. 'ಹೇಳಬೇಡಿ' ಎಂಬಂತೆ ಮೇಸ್ತ್ರಿ ಕೈ ಸನ್ನೆ ಮಾಡುವ)

ತಿಮ್ಮ : ಸ್ವಾಮಿ......

ಮಾಲೀಕ : ಹೇಳು ಏನದು?

(ತಿಮ್ಮ ಅದು ಮಾಮೂಲಿ ಎಂಬಂತೆ ಯಜಮಾನರ ಬಳಿ ಷರಟು ಬಿಚ್ಚಿ ಬೆನ್ನು ಬಾಗಿಸಿದ)

(ತಟ್ಟೆಯಲ್ಲಿದ್ದ ಹಂಟರ್ ಹಿಡಿದು ಹೊಡೆಯುವವನಂತೆ ಎದ್ದು, ನಂತರ ವಾಪಸ್ಸು ಕೊಟ್ಟು)

ಹೇಳು?

ತಿಮ್ಮ : ಇಸಾರ ಇಂಗೆ ಸ್ವಾಮಿ...ನಾವೆಲ್ಲ ಅಳ್ಳಿ ಮಕ್ಳು...ಭೂಮಿತಾಯಿ ಫಲಕೊಟ್ಟಿಲ್ಲ–ಸರಿ...ಆರಂಬ ಬುಟ್ಟು ಇಲ್ಲೀಗೆ ಬಂದೋ, ಕೂಲಿ-ನಾಲಿ

ಮಾಡಾವಾಂತ. ಈ ಎಪ್ಪು ಕೆಲ್ಸ ಕೊಡಿಸ್ತೀನೀಂತ ಹೇಳಿ ಕರ್ಕಂ ಬಂದ–ಕೆಲ್ಸ ಮಾಡ್ತೀವಿ ಸ್ವಾಮಿ...ನಾವು ಗೇಯ್ಮೆ ಮಾಡ್ತೀವಿ–ನೀವು ಅಣ ಕೊಡ್ತೀರಾ....

ದೊಡ್ಡ : (ತಕ್ಷಣ ಮುಂದೆ ಬಂದು) ಆದ್ರೆ ಕೆಲ್ಸ ಕೊಡಿಸಿದ್ದಕ್ಕೆ ಕಮಿಷನ್ ಅಂತ ವಾರಾ್ವರ ಎಲ್ಡೆಲ್ಡು ರೂಪಾಯಿ ಇಡ್ಕಂತಾನೆ. ನೀವು ಕೊಡೋ ಹಣ ಎರಡು ಹೊತ್ತಿನ ಗಂಜಿಗೆ ಸಾಲದಿರೋವಾಗ ಬೆಲೇವಾಸಿ ಮೇಲ್ ಮೇಲ್ಕೆ ಓಯ್ತಿರೋವಾಗ ಈ ವಯ್ಯಂಗೆ ಕಮಿಷನ್ ಕೊಟ್ಟು ನಾವು ಬಾಳ್ವೆ ಮಾಡಾದು ಎಂಗೆ?

ಮಾಲೀಕ : (Shock) ಹಾಂ...ಇವನು ಹೇಳಿದ ಮಾತು ನಿಜ ಏನು?... ಮಾತಾಡಿ...(ಎಲ್ಲ ಸುಮ್ಮನಿರುವರು) ನಿಮ್ಮನ್ನೆ ಕೇಳ್ತಾ ಇರೋದು ...ಯಾಕೆ ಹಾಗೆ ನಿಂತಿದೀರಿ...(ಜೋರಾಗಿ) ಮಾತಾಡಿ (ಹೌದು ಎಂಬಂತೆ ಎಲ್ಲ ತಲೆ ಆಡಿಸುವರು) ಮೇಸ್ತ್ರಿ...ಏನಿದು ಅನ್ಯಾಯ... ನಾಚಿಕೆ ಆಗುಲ್ಲ...ಅವರ ಸಂಪಾದ್ನೇಲಿ ಪಾಲು ಕೇಳಕ್ಕೆ...Non-sense.. ಮೇಸ್ತ್ರಿ...ಇದು Final warning ಇನ್ನೊಂದು ಸಲ ಇಂಥ Complaint ಬಂದರೆ...

ಮೇಸ್ತ್ರಿ : ಹಹ ..ಇಲ್ಲ ಸಾರ್...Sorry

ಮಾಲೀಕ : ಅಲ್ಲಯ್ಯ ನಾವು ಅವರಿಗೆ ಇನ್ನೂ ಹೆಚ್ಚು ಅನುಕೂಲ ಮಾಡಿಕೊಡ ಬೇಕು. Factory ಅಂದ್ರೆ ಒಂದು ಸಂಸಾರ ಇದ್ದಹಾಗೆ...ಅವರನ್ನು ನಮ್ಮ ಮಕ್ಕಳು ನೋಡಿಕೊಂಡ ಹಾಗೆ ನೋಡ್ಕೊಬೇಕು...ದೊಡ್ಡ, ಕಾಳ, ದೇವಿ, ತಿಮ್ಮ ಎಲ್ಲ ಒಳ್ಳೆ ಕೆಲಸಗಾರರು...ಇವ್ರಿಗೆ ಈವಾರದಿಂದ ಒಂದು ರೂಪಾಯಿ ಕೂಲಿ ಜಾಸ್ತಿ ಮಾಡು (ದೇವಿ–ಕಾಳ ಖುಷಿ ಯಾಗುವರು. ದೊಡ್ಡ ಸೆಟೆದು ನಿಲ್ಲುವ) ಕಾರ್ಮಿಕ ಮಿತ್ರರೆ, ಇನ್ನು ಮೇಲೆ ಯಾರ ಮಧ್ಯಸ್ತಿಕೆಯೂ ಬೇಡ...ನಿಮಗೆ ಏನೇ ಕಷ್ಟ ಇದ್ದರೂ ನೇರವಾಗಿ ನನ್ನ ಹತ್ತಿರ ಬನ್ನಿ...ಆಯ್ತು ತಾನೆ? (ಜೋರಿನಿಂದ) ಏಯ್ ಮೇಸ್ತ್ರಿ

ಮೇಸ್ತ್ರಿ : ಸ್ವಾಮಿ

ಮಾಲೀಕ : ನೀನು ಆ ಮೇಲೆ ಬಂದು ನನ್ನ ನೋಡು

(ಮಾಲೀಕ ಹೊರಡುವ. ಎಲ್ಲಚದುರುವ ಸೂಚನೆ. ಮೇಸ್ತ್ರಿಯೂ ಸಿಟ್ಟನಿಂದ ಹೊರಡುವ)

ಕಾಳ : ಕಂಪನಿಯ ಯಜಮಾನ ದೇವ್ರಂಥಾ ಮನ್ಸ ಅಲ್ವಾ?...ನಿಜವಾಗೂ ಪುಣ್ಯ ಮಾಡಿದ್ದೋ ಇಂಥಾ ಮನ್ಸನ ತಾವ ದುಡಿಯಾಕೆ?...ಸುಖ ವಾಗಿರ್ಲಿ ನಮ್ಮಪ್ಪ.

ದೇವಿ: ನಿಜಾ ನೀ ಏಳಾದು ? ಇನ್ನು ನನ್ನ ತಮ್ಮಂಗೆ ಬೇಕಾದ್ದು ತೆಕ್ಕಡಬೈದು (ಸಂಭ್ರಮ)

ದೊಡ್ಡ : ದೇವಮ್ಮ...ಇಷ್ಟಕ್ಕೆ ಖುಸಿ ಬೀಳ್ಬೇಡಾ...ಈ ಮಾತಿನ ಹಿಂದೆ ಏನೋ ಕರಾಮತ್ ಇದೆ

ಕಾಳ: ಸರಿಬಿಡು...ನೀನು ಎಲ್ಲಾದ್ರಾಗೂ ತಪ್ಪು ಉಡಿಕ್ಕಂಡೇ ಕುಂತ್ಕಂತೀ ...ಈ ಪರಪಂಚದಾಗೆ ಏನೂ ಒಳ್ಳೇದು ಇಲ್ಲಾ ಅಂತ ನಿನ್ನ ಲೆಕ್ಕಾನ

ತಿಮ್ಮ : ಹಹಹ...ಈ ಜನಕ್ಕೆ ಎಲ್ಲಿ ಗೊತ್ತೈತೆ ಒಳ್ಳೆ ಮಾತು–ಒಳ್ಳೆ ವಿಚಾರ ಉಚ್ಚಪ್ಪಗಳ್ರಾ

ದೊಡ್ಡ : ಇವ್ರೆಲ್ಲ ನರಿಗಳಿದ್ದಂಗೆ...ಉಸಾರಾಗಿದ್ರೆ ಸಮ...ಇಲ್ಲಾಂದ್ರೆ ಆಸೆ ಮಡಗಿ ಮಾತ್ನಾಗೆ ನಮ್ಮನ್ನ ಮುಗಿಸ್ ಬುಡತಾರೆ

(ಆಹೊತ್ತಿಗೆ ಸೂತ್ರಧಾರ ಬರುವ, ಅವನನ್ನು ಕಂಡೊಡನೆ ಓಡಿ ಬಂದು)

ದೇವಿ: ಏನಣ್ಣ...ಪುಟ್ಟಣ್ಣ ಶಾಲೇಗೋದ್ನ...ಎಂಗದಂತೆ ಇಸ್ಕೂಲು...ಏನ್ಮಾಡ್ತಾನಂತೆ...ಏನೋರು ಕಲ್ಸಿದ್ರಾ? ಮಧ್ಯಾಹ್ನದಾಗೆ ಅಸಿವಾಯ್ತಂತಾ? ನಿದ್ದೆ ಮಾಡಬುಟ್ನಂತಾ ?

(ಹೀಗೆ ಒಂದೇ ಸಮನೆ ಪ್ರಶ್ನೆಗಳನ್ನು ಎಸೆವಳು. ಎಲ್ಲ ನಗುವರು)

ದೊಡ್ಡ : ದೇವಿ, ಆವಯ್ಯ ಉಸಿರಾಡಾಕಾನ ಅವಕಾಸ ಕೊಡ್ತೀಯೋ ಇಲ್ಲಾ ಇಂಗೇ ಕೊಚ್ಚನ್‌ಗಳ ಮೇಲೆ ಕೊಚ್ಚನ್ ಆಕ್ತಾ ಇರ್ತೀಯೋ...ಅಲ್ಲ... ಮನೇಗೋಗಿ ಮಗೀನೇ ನಿಧಾನವಾಗಿ ಕೇಳಿ ತಿಳ್ಕಳಾದಲ್ವ ?

(ಎಂದಾಗ ದೇವಿ ನಾಚಿ ಹೊರಡುವಳು)

ಸೂತ್ರಧಾರ: ಕೇಳಲಿಬುಡು...ಸೇರಿಸಿದೀನಿ ಕಣವ್ವೋ ಇಸ್ಕೂಲಿಗೇ

ಕಾಳ: ಬತ್ತೀನಿ ದೊಡ್ಡಯ್ಯೋ (ಹೊರಡುವ)

ದೊಡ್ಡ : (ಸೂತ್ರಧಾರನನ್ನು ಕರೆದು) ಅಣ್ಣಯ್ಯೋ...ಇವತ್ತೊಂದು ತಮಾಸಿ ನಡೀತು ಗೊತ್ತಾ

ಸೂತ್ರಧಾರ: ತಮಾಷೆ !...ನೀವು ಕೆಲ್ಸ ಮಾಡೋಕಡೆ ತಮಾಷೆ ಬೇರೆ ಇರುತ್ತಾ... ಅದೂ ಕೆಲ್ಸದ ಟೈಂನಲ್ಲಿ !

ದೊಡ್ಡ : ಅದೂ ನಿಜಾ ಅನ್ನು–ದಿನಾ ದುಡಿಯೋದೊಂದೇ ಗೊತ್ತಿರೋ ನಮ್ಗೆ ನೆಗಾಡಕೆ ಬಿಡು ಎಲ್ಲಿ? ಅದೆಲ್ಲಿ ತಾನೆ ಸಾಧ್ಯ? ಆದ್ರೂ ಇವತ್ತು ಏನಾಯ್ತು ಅಂತೀಯೋ...ಮಾಲೀಕರು ಬಂದಿದ್ರು (ಕಿವಿಯಲ್ಲಿ ಎಲ್ಲ ಹೇಳಿ) ಇದ್ರಲ್ಲಿ ಏನೋ ಮುಸಲತ್ತು ಐತೆ ಅಲ್ವ ?

ಸೂತ್ರಧಾರ: (ಯೋಚಿಸಿ) ಹೌದೌದು......ಖಂಡಿತಾ ಕುತಂತ್ರ ಇದೆ......ನೋಡು Factory ಶುರು ಆಗಿ ಮೂರನೇ ವರ್ಷಕ್ಕೆ ಬಂತು...ಇದುವರೆಗೂ ಇಲ್ಲದ ಭಯ ಈಗ ಶುರು ಆಗಿರಬೇಕು. ಅದೆಷ್ಟೇ ಚಿಕ್ಕ Factory ಆದ್ರೂ Factory Rules apply ಮಾಡಬೇಕಾಗುತ್ತೆ...ಸರಿ... Labour Law ಭಯವಿರಬಹುದು.

ದೊಡ್ಡ : ಹಾಂ...ಹೌದೌದು...

ಸೂತ್ರಧಾರ: ಈಗ ಕೆಲಸಗಾರರೆಲ್ಲ ಒಟ್ಟಾಗಿ ನ್ಯಾಯಕ್ಕಾಗಿ ಹೋರಾಡಿದರೆ ಅವನ ಆಟ ಏನು ನಡೆಯಲ್ಲ–ಎಲ್ಲರಿಗೂ ಲೆಕ್ಕಾಚಾರವಾಗಿ ಸಂಬಳ–ಸಾರಿಗೆ Bonus ಇತ್ಯಾದಿ ಕೊಡಲೇ ಬೇಕಾಗುತ್ತೆ.

ದೊಡ್ಡ : ಈಗ ಮುಂದೆ ಹ್ಯಾಗೆ ಅಂತ ನಿಮ್ಮ ಲೆಕ್ಕ ?

ಸೂತ್ರಧಾರ: ಮುಂಚೆ ಎಲ್ಲ ಒಂದಾಗಬೇಕು, ನಿಮ್ಮ ನಿಮ್ಮ ಹಕ್ಕುಗಳನ್ನು ಕೇಳೋದು ಕಲೀಬೇಕು

ದೊಡ್ಡ : ಅವೆಲ್ಲ ಇವರಿಗೆ ಸುಲಭವಾಗಿ ಅರ್ಥ ಮಾಡಿಕೊಡೋದು ಹ್ಯಾಗೆ. ಇವರ ರಕ್ತದಲ್ಲಿ ಒಂದು ಥರಾ ವಿಚಿತ್ರ ಸ್ವಾಮಿ ಭಕ್ತಿ ಇದೆ. ಅನ್ನ ಇಟ್ಟ ಧಣೀ ಅಂತಿರ್ತಾರೆ. ಇವರಿಗೆ ತಾವು ದುಡೀತಿರೋದರ ಪರಿವೇನೇ ಇಲ್ಲ. ಇದು ಪ್ರಜಾಪ್ರಭುತ್ವ ಕಣ್ರೋ ಅಂದ್ರೂ ಅರ್ಥವಾಗಲ್ಲ... ಮಹಾರಾಜರ ಫೋಟೋ ನೋಡಿದ್ರೂ ಸಾಕು 'ಧುಡುಂ' ಅಂತ ಅಡ್ಡಬೀಳೋ ಜನ ಹೊಸವಿಚಾರ–ಹೊಸ ನಂಬಿಕೆಗಳು ಅಷ್ಟು ಸುಲಭ ದಲ್ಲಿ ಅರ್ಥ ಆಗಲ್ಲ.

ಸೂತ್ರಧಾರ: ಹೌದು ದೊಡ್ಡಯ್ಯ...ಸತ್ಯ ಹೂತು ಹೋಗಿದೆ ಅನ್ನತ್ತೆ...ಅದನ್ನ ಈಗ ಹೊರಗೆ ತೆಗೀಬೇಕು.

ದೊಡ್ಡ : ಅಂದಹಾಗೆ ಆಟ್ಟಿತಾವ ಜನ, ಬತ್ತಾ ಅವ್ರೆ. ಜನ ವಸಿ ಗುಡ್ಡೆ ಹಾಕಿ, ವಸಿಮಾತಾಡೋದದೆ, ಭಾಷಣಮಾಡೋದದೆ ಅಂದವ್ರೆ ಎಂಗಾನ ಆಗ್ಲಿ ಒಂದಪ ಎಲ್ರನ್ನೂ ಕೂಡ್ಸಾನ–ಎಂಗೆ ?

ಸೂತ್ರಧಾರ: ನೀ ಏಳ್ಬಿ ಅಂದ್ರೆ ಜನ ಸೇರ್ಕಂತಾರೆ...ಸೇರ್ಲಿಬಿಡು...ಯಾರ್ಯಾರು ಏನೇನು ಏಳ್ತಾರೆ ಕಿವೀಗೆ ಅಕ್ಕಾಳ್ಲಿ...ಆಮ್ಯಾಕೆ ಮುಂದಿನ್ಮಾತು.

ದೊಡ್ಡ : ಅದೂ ನಿಜಾ

ಸೂತ್ರಧಾರ: ಇವತ್ತಿಂದ ಏಳಿದ್ರೆ ಭಾಷಣ ಇರೋ ದಿನಕ್ಕೆ ಇವರೂ ತಯಾರಾದಾರು. ಬಾ...ಹೋಗಾವ (ಪಕ್ಕಕ್ಕೆ ಹೋಗುವರು)
(ರಂಗ ಖಾಲಿ ಆದಕೂಡಲೆ ಮಗು ಪುಸ್ತಕ ಹಿಡಿದು ಗಟ್ಟಿಮಾಡುತ್ತ ಅತ್ತಿಂದಿತ್ತ ಅಡ್ಡಾಡಿ ನಂತರ ಒಂದು ಜಾಗದಲ್ಲಿ ಕೂರುವ. ದೇವಮ್ಮ ತರಕಾರಿ ಹೆಚ್ಚಲು ಬಂದು ಮಗುವಿನ ಮಾತು ಕೇಳುತ್ತಿರುವಳು)

ಮಗು: ಆ...ಆಲದ ಮರ
ಬ...ಬಸವ
ನ...ನರಿ
ವಿ...ವಿಧಾನಸೌಧ...
ನಮ್ಮ ನಾಡಿನ ಪ್ರಧಾನ ಮಂತ್ರಿಗಳು.........
ಎಲ್ಲ ಯೋಜನೆಗಳು ದೇಶದ ಉದ್ಧಾರಕ್ಕಾಗಿ
ಸರ್ಕಾರದ ಕೆಲಸ–ದೇವರ ಕೆಲಸ

ದೇವಿ: ಭಲೇ-ಭಲೇ ಪುಟ್ಟ...ಚೆಂದಾಕಿ ಕಲ್ತ್ ಬುಟ್ಟೆದಿ...ಎಲ್ಲಾ ಇವತ್ತೇ ಕಲ್ತೆಯೊ ಎಂಗೆ?

ಪುಟ್ಟ: (ಖುಶಿಯಿಂದ ಎದ್ದು) ಈಟೆ ಅಂದ್ಕಂಬುಟ್ಟೆಯಾ ಇದು ಕೇಳ್ಕೋ...
(ಕುಣಿಯುತ್ತಾ) ತುಂಗಾತೀರದ ಬಲಗಡೆಯಲ್ಲಿ
ಅಲ್ಲೊಂದ್ದಿದ್ದುದು ಬೊಮ್ಮನ ಹಳ್ಳಿ
ಅಲ್ಲೊಂದಿಲಿಗಳ ಕಾಟವೇ ಕಾಟ
ಅಲ್ಲಿಯ ಜನಗಳಿಗತಿ ಗೋಳಾಟ...

ದೇವಿ: ಭೇಷ್...

ಪುಟ್ಟ: ಚೆಂದಾಕದಾ...ಅಂಗಾರೆ ಇದು ಕೇಳ್ಕೊ...ಕುಮಾರವ್ಯಾಸನು ಓಡಿದ ನೆಂದರೆ ಕಲಿಯುಗ ದ್ವಾಪರವಾಗುವುದು

(ಪುನಃ ಹಾಗೇ ಹೇಳುತ್ತಿರುವ)

ಕಾಳ: (ಬರುತ್ತಾ) ಲೇ ಮಗಾ...ಓಡಿದ ಅಲ್ಲಾ ಕಣ್ಲೇ...ಹಾಡಿದ...

ಪುಟ್ಟ: ಹುಂ...ಕುಮಾರವ್ಯಾಸನು ಹಾಡಿದನೆಂದರೆ
ಕಲಿಯುಗ ದ್ವಾಪರವಾಗುವುದು . (ಏನೋ ನೆನಪು ಬಂದವ ನಂತೆ) ಸರಿ...ಇದು ತಪ್ಪು ಅಂತ ನಿಂಗೆ ಎಂಗೆ ಗೊತ್ತಾಯ್ತು?

ಕಾಳ: ನಮ್ಮಳ್ಳಿ ಐಕ್ಳೆಲ್ಲ ಆ ಪದ ಏಳ್ತಾವ್ ಕಣ್ಲೇ...ಅದು ಭಾರತದ ಕಥೇದು ಅಲ್ವಾ...

ಪುಟ್ಟ: ಔದಾ......

ಕಾಳ: ಪಾಠ ಎಂಗಿತ್ತು

ಪುಟ್ಟ: ಭೋ......ಚೆಂದಾಕಿತ್ತು

ದೇವಿ: ಎಂಗೋ ನೀನೊಬ್ನಾರಾ ಚೆಂದಾಕೋದಿ, ಮಾಮಲೆದಾರ್ನಾದ್ರೆ ನಮ್ಮ ಕಷ್ಟಕ್ಕೆ ಕೊನೆ ಬತ್ತೈತೆ...

ಕಾಳ: ತಲತಲಾಂತರದಿಂದ ಬಂದಿದ್ದೆ ಜಲಕಳ್ಕಂಡಿದೀವಿ... ನೀನಾನಾ ಸಂಪಾದ್ಸಿ ಸಾಲಾತೀರ್ಸಿ ಜಲ ಬುಡಿಸ್ಕೊಡು ಮಗಾ

ದೇವಿ: ಅವ್ವ ಬದ್ಕಿದ್ದಿದ್ರೆ ಪುಟ್ಟಣ್ಣನ್ನ ನೋಡಿ ಏಟು ಖುಸಿ ಬೀಳ್ತಾಳೊ ಏನೋ?

ಕಾಳ: ಖುಸೀನೇ ಪಡ್ತಿದ್ಲೋ, ನೆಲಬಿಟ್ಟು ಯಾರದ್ದೋ ಸೇವೆಮಾಡೋ ಗತಿ ನೋಡಿ ಬಯ್ಕಂತಿದ್ಲೋ—ಎದೀತಂಕಾ ಬೆಳೆದು ಕುಂತ್ಮಗಳ ಮದುವೇ ಮಾಡದೆ ದುಡಿಯಾಕೆ ಹಾಕಿದ್ನು ಕಂಡು ಈ ಪಾಪೀ ನನ್ಮಗಂಗೆ ಸಾಪಾನೇ ಆಕ್ತಿದ್ಲೋ ಏನೋ?

ದೇವಿ: ಓಗ್ಲಿಬುಡು ..ಮಗೀನ ಮುಂದೆ ಮಡಿಕ್ಕಂಡು ಈ ಮಾತೆಲ್ಲ ಯಾಕೀಗ?

ಸೂತ್ರಧಾರ: (ಬಂದು) ಏನು ಪುಟ್ಟೆ... ಭಾರಿ ಓದ್ತಿದೀ?

ದೇವಿ: ನೋಡ್ದೇನಣ್ಣಾ... ಊರು-ದೇಸ-ಮಂತ್ರಿ ಎಲ್ಲಾ ಕಲ್ತವ್ನೆ-ಇಸ್ಕೂಲ್ನಾಗೆಲ್ಲಾ ಭಾರಿ ಏಳ್ಕೊಡ್ತಾ ಅವ್ರೆ.

ಸೂತ್ರಧಾರ: ಇಂಥಾದ್ದೇ ಹೇಳಿದ್ರೆ ಏನಮ್ಮ ಪ್ರಯೋಜನ... ಹುಡುಗರಿಗೆ ಸ್ವಂತ ಕಾಲಮೇಲೆ ನಿಲ್ಲೋ ಅಂಥಾ ವಿದ್ಯೆ ಬೇಕಾಗಿರೋದೀಗ. ಈಗ ಇವರು ಕಲೀತಿರೋ ಪಾಠಗಳು—ರೂಲ್ಸುಗಳು ಎಲ್ಲಾ ಸರ್ಕಾರಿ ಗುಮಾಸ್ತಗಿರೀಗೆ ಆಗೋ ಅಂಥಾದ್ದು. ಅಂಥವನ್ನ ಭರ್ಜರಿಯಾಗಿ ಸರಿಯಾಗಿ ಹೇಳಿರ್‍ತಾರೆ. ವರ್ಷೇ ವರ್ಷೇ ಹಿಂಡು-ಹಿಂಡು ಗುಲಾಮರನ್ನ ತಯಾರುಮಾಡಿ ಏನು ಪ್ರಯೋಜನ? ಸ್ವಂತವಾಗಿ ಏನೂ ಮಾಡಕ್ಕೆ ಆಗ್ದೆ-ಪದವಿ ಇಟ್ಕೊಂಡು ವಿದ್ಯಾವಂತರೆಲ್ಲ ನಿರುದ್ಯೋಗಿಗಳಾಗಿ ಊರು ಸುತ್ತುತಾ ಇದ್ದಾರೆ. ಇದು ನಮ್ಮ ವಿದ್ಯಾಭ್ಯಾಸ.

ದೊಡ್ಡ: (ಪ್ರವೇಶಿಸಿ) ಇವರೇ ನಮ್ಮ ನಾಳಿನ ಪ್ರಜೆಗಳು, ಸಸಿಯಾಗಿದ್ದಾಗ ಇಂಥ ಪಾಠ ಹೇಳಿದ್ರೆ ಈ ಮಕ್ಕಳು ಸಮಾನತೇನ ಅರ್ಥ ಮಾಡಿ ಕೊಳ್ಳೋದು ಎಲ್ಲಿ ಸಾಧ್ಯ?

ಕೂಲಿ: (ಬರುತ್ತಾ) ಎಯ್... ಏನಿದು ಇಲ್ಲೇ ಕುಂತ್ರಿ... ಬರ್‍ರಪ್ಪೋ ಬರ್‍ರಿ... ಬಯಲಾಗೆ ಭಾಸ್ಣ...

ಕಾಳ: ಸಾಕಷ್ಟು ಕೆಲ್ಸ ಐತೆ ಬುಡು... ಯಾವೊನಿಗೆ ಬೇಕು ಭಾಸ್ಣ?

ಕೂಲಿ: ಏಯ್ ಅಂಗನ್ಬ್ಯಾಕಾಗ್ದು

(ನಗುತ್ತಿರುವ ದೊಡ್ಡನ ಕಡೆ ತಿರುಗಿ)

ಕೂಲಿ: ಅದೇನೊ ಓಟಂತೆ... ಯೂನಿಯನ್ ಅಂತೆ—ಬೋನಸ್ ಅಂತೆ...

ಸೂತ್ರಧಾರ: ನಡೀರಿ... ನಡೀರಿ... ಏನು ಏಳ್ತಾರೊ ಕೇಳಾವ... ನಡಿ ದೇವಿ ನೀನೂ (ಎಲ್ಲ ಹೊರಡುವರು)

ಮೂರು ಎತ್ತರದ ವೇದಿಕೆಯ ಮೇಲೆ ಮೂರು ಬಗೆಯ ದೊಡ್ಡ ಮುಖವಾಡ ಧರಿಸಿರುವ ಮೂವರು ವ್ಯಕ್ತಿಗಳು ಮುಂಚೆ ಬೇರೆ ಬೇರೆಯಾಗಿ ಮಾತನಾಡುವರು, ನಂತರ ಒಬ್ಬ ಹೇಳಿದ್ದಕ್ಕೆ ಇನ್ನೊಬ್ಬ ಉತ್ತರ ಹೇಳಲು ಹೋಗಿ ಗೊಂದಲವಾಗಿ ಯಾರ ಮಾತೂ ಅರ್ಥವಾಗದ ಸ್ಥಿತಿ ಬರುತ್ತದೆ.

ಮೊದಲನೆಯವ: ಕಾರ್ಮಿಕ ಮಿತ್ರರೇ, ಕರ್ಮ–ಧರ್ಮ ಅನ್ನುವ ಮಾತು ಇನ್ನು ಸಾಕು. ದುಡಿಮೆಗೆ ತಕ್ಕಫಲ ಸಿಗಲೇ ಬೇಕು. ಹಸಿದ ಹೊಟ್ಟೆಗಳ ಮೇಲೆ ಭವನಗಳು ಕಟ್ಟುವುದು ಇನ್ನು ಸಾಕು...ಇದು ಮೋಸ –ಹಗಲುದರೋಡೆ, ಎಲ್ಲ ದುಡಿದು ತಿನ್ನುವ ಹಾಗೆ ಆಗಬೇಕು. ನಿಮ್ಮ ಹಿತಕ್ಕಾಗಿ ನೀವೇ ಹೋರಾಡಬೇಕು. ನಿಮ್ಮ ಉದ್ಧಾರಕ್ಕೆ ಅಂತ ಯಾರೂ ಹುಟ್ಟಿಬರಲ್ಲ.

(ಕಾರ್ಮಿಕರು ಅವನ ಅಭಿಪ್ರಾಯಕ್ಕೆ ತಲೆ ಹಾಕುವರು)

ಮುಂಚೆ ಒಂದಾಗಿ.

ಒಗ್ಗಟ್ಟಿನಲ್ಲಿ–ಬಲವಿದೆ.

ಏನೇ ಬರಲಿ–ಒಗ್ಗಟ್ಟಿರಲಿ.

ಎರಡನೆಯವ: (ಅವನ ಮಾತು ಮುಗಿದ ತಕ್ಷಣ) ಅನ್ನ ಇಟ್ಟ ದಣೀಗೆ ಎರಡು ಬಗೆಯೋದು ಮಹಾ ಪಾಪ...ಮಾಲೀಕರು--ಕಾರ್ಮಿಕರು ಹೊಂದಿಕೊಂಡು ಹೋಗಬೇಕು. ಲಾಭದಲ್ಲಿ ಒಂದು ಪಾಲು ನಯವಾಗಿ ಕೇಳಿದರಾಯಿತು. ಹಾರಾಟದಿಂದ–ಹೋರಾಟದಿಂದ ಏನೂ ಲಾಭವಿಲ್ಲ. ಖಾಲಿ ಘೋಷಣೆಗಳಿಗೆ ಅರ್ಥವಿಲ್ಲ. ಮಾಲೀಕ ಸಾವಿರಾರು ರೂಪಾಯಿ ಹಾಕಿ ಯಂತ್ರಗಳು ತರಿಸದೆ ಹೋದರೆ ನಾವು ಉಪವಾಸ ಸಾಯಬೇಕಾಗುತ್ತೆ! ಸರ್ಕಾರ, ಕಾರ್ಖಾನೆಗಳನ್ನು ತೆಗೀದೇ ಹೋದರೆ ಕೆಲಸ ಎಲ್ಲಿ? ಕಾರ್ಮಿಕರು ತಕರಾರು ಜನ ಅಂತಾದ್ರೆ–ನಾಳೆ ಕಾರ್ಖಾನೆಗಳನ್ನು ಯಾರೂ ತೆಗೆಯದಿರಬಹುದು. ಆಗ ನಷ್ಟ ಯಾರಿಗೆ ?–ಅದರಿಂದ ಒಮ್ಮ ನಿಷ್ಠೆನಿಂದ ದುಡಿಯಿರಿ–ಒಂದಾಗಿ ದುಡಿಯಿರಿ–ನಿಷ್ಠೆ ಮುಖ್ಯ. ಏನೇ ಬರಲಿ ಒಗ್ಗಟ್ಟಿರಲಿ.

(ಕೆಲವರು ನಿದ್ದೆ ಮಾಡುತ್ತಾರೆ. ಮತ್ತೆ ಕೆಲವರು ಒಪ್ಪಿ ತಲೆ ಹಾಕುತ್ತಾರೆ.)

ಮೂರನೆಯವ: (ನಂತರ ಎತ್ತರದ ಧ್ವನಿಯಲ್ಲಿ) ಬಣ್ಣ ಬಣ್ಣದ ಮಾತುಗಳಿಗೆ ಮೋಸ ಹೋಗಬೇಡಿ. ಕನಸಿನ ಚಿತ್ರಗಳು ಇನ್ನು ಸಾಕು. ತುತ್ತಿನ ಚೀಲ ತುಂಬಲು ಅಡ್ಡಾಡುವ ನಾವು ನಮಗೆ ಬರಬೇಕಾದ್ದನ್ನು ನ್ಯಾಯವಾಗಿ ಕೇಳೋಣ...ಸಂಘಶಕ್ತಿಗೆ ಬಲವಿದೆ–ನ್ಯಾಯ

ದಕ್ಕದಿರುವಾಗ ಹಾರಾಟ ಹೋರಾಟ...ಬಿರುಕುಗಳು ಬೇಡ-ಹಾಗಾದಾಗ ಇನ್ನೊಬ್ಬ ನಮ್ಮನ್ನ ಆಳ್ತಾನೆ. ಹುಶಾರಾಗಿರಿ. ಏನೇ ಬರಲಿ—ಒಗ್ಗಟ್ಟಿರಲಿ.

ಒಂದನೆಯವ: ನನ್ನ ಮಾತು ಕೇಳಿ—ನಾನು ನಿಮ್ಮ ನಾಯಕನಾದರೆ—ರಸ್ತೆಗೆ ಟಾರ್ ಹಾಕಿಸ್ತೀನಿ...

ಎರಡನೆಯವ: ನಾನು ಬಂದರೆ ನಿಮಗೆಲ್ಲ ಒಂದೊಂದು ಊಟದ ತಟ್ಟೆ ಕೊಡಿಸ್ತೀನಿ.

ಮೂರನೆಯವ: ಒಂದೊಂದು ಮನೆಗೆ ಎರಡೆರಡು ನಲ್ಲಿ.

ಒಂದನೆಯವ: ನೀರು ಕುಡಿಯೋಕೆ ಲೋಟಗಳನ್ನ ಸಪ್ಲೈ ಮಾಡಿಸ್ತೀನಿ.

ಮೂರನೆಯವ: ಇಲ್ಲೊಂದು ಪಾರ್ಕ್ ಮಾಡ್ತೀನಿ.

ಎರಡನೆಯವ: ಗುಡಿಸಲ ಸುತ್ತ ಡಿ ಡಿ ಟಿ. ಹೊಡಿಸ್ತೀನಿ

(ಹೀಗೆ ಒಬ್ಬೊಬ್ಬರು ಒಂದೊಂದು ಹೇಳಿ, ಏನು ಹೇಳುತ್ತಾರೆ ಎನ್ನುವುದೇ ತಿಳಿಯದ ಪರಿಸ್ಥಿತಿ. ಮಾತು, ಗದ್ದಲದಲ್ಲಿ ಮುಳುಗುತ್ತದೆ)

ದೊಡ್ಡ: (ಪ್ರೇಕ್ಷಕರ ಮಧ್ಯದಿಂದ ಹಾರಿ ಬರುತ್ತಾ-ಇವರಿಗೆ ಅಡ್ಡಲಾಗಿ ನಿಂತು) ನಿಲ್ಸಿ...(ಜೋರಾಗಿ) ಸಾಕು ನಿಲ್ಸಿ (ಸದ್ದಡಗುವುದು) ಇವೆಲ್ಲ ಸುಳ್ಳು ಬರೀ ಮೋಸ—ಇದನ್ನ ನಂಬಬೇಡಿ.

ಒಬ್ಬ: ಯಾಕ್ಲ—ಅಂಥಾ ಛಂದಾಗಿ ಏಳನ್ನೆ?

ದೊಡ್ಡ: ನಿಮ್ಮನ್ನ ಬರೀ ಮಾತಿಂದ ಮೋಸ ಮಾಡ್ತಿದಾರೆ...

ಇನ್ನೊಬ್ಬ: ಐ...ಏನೇನೂ ಕೊಡ್ತಾರಂತೆ

ಮತ್ತೊಬ್ಬ: ನಮ್ಗೆಲ್ಲ ಒಟ್ಟೆ ತುಂಬ ಊಟ—ಬಟ್ಟೆ ಆಕಿಸ್ತಾರಂತೆ.

ದೊಡ್ಡ: ಅದೆಲ್ಲ ನಿಮ್ಮ ಹಕ್ಕು ಅದನ್ನ ಅವ್ರು ಭಾಷಣ ಮಾಡಿದ್ರೆ ಬರೋದಲ್ಲ ...ಈ ಮಧ್ಯವರ್ತಿಗಳು ನಿಮಗೂ ಮಾಲೀಕರಿಗೂ ಮಧ್ಯೆ ಬಂದು ಕೆಟ್ಟ ರಾಜಕೀಯ ಮಾಡ್ತಾರೆ.

ಒಬ್ಬ: ಅಂಗಾರೆ ಎಲ್ಲಾ ಅನ್ಕೂಲ ನೀ ಕೊಡ್ತೀಯಾ?

ಇನ್ನೊಬ್ಬ: ಯೇ...ಭಾಸಣದಯ್ಯ ಆವೊತ್ತು ಖುಸೀತೀರಾಮುಟ ಬಾಟ್ಲ ಆಕ್ಸಿದ್ದ

ಒಬ್ಬ: ಔದಲೇ......ಭಾರಿ ಮಜಾ ಇತ್ತಪ್ಪೋ—ಇವೆಲ್ಲ ಬುಡು ಕಣ್ಲೇ ......ಒಂಜಿನಾನರ ಅವನು ಗಡತ್ ಆಕಿಸ್ತಾನ್ ಕಣ್ಲೇ

ತಿಮ್ಮ: ನೀವು ಬರೀ ಇದಕ್ಕೆ ಮೋಸ ಹೋಗಬೇಡ್ರಿ—ದೊಡ್ಡಯ್ಯ ಓದ್ಕಂಡವ್ನೆ ದಿಂರಂಗಾ ಅಂತ ದೊಡ್ಡ ಮನಸ್ನಂಗೆ ರಾಜಾಕೆಲ್ಸ

ಮಾಡ್ಕಂಡಿರೋದು ಬಿಟ್ಟು ನಮ್ಮ ಜತೆಯಾಗೆ ದುಡೀತಾವ್ನೆ-ನಮ್ಮ ಕಷ್ಟ-ಸುಕ ತಿಳ್ಕಂಡವ್ನೆ –ನೀವು ಯೋಸ್ನೆ ಮಾಡಾಕಿಲ್ಲ...ಆವಯ್ಯ ಒಂದಿನ ಬಾಟ್ಲಿ ಆಕಿಸ್ತಾನೆ, ಓಟಾಕಿ ಅಂತಾನೆ–ಅವ್ನಾಕೆ ಒಂಟೋಯ್ತಾನೆ–ನೀವು ನಿಮ್ಗೆ ಬರೋ ಕೂಲೀನೆಲ್ಲ ಬಾಟ್ಲೀಗೆ ಆಕ್ತೀರಿ. ಎಂಡ್ರು–ಮಕ್ಕಳು ಒಟ್ಟೆಮೇಲೆ ತಣ್ಣೀರು ಬಟ್ಟೆ ಆಕ್ತೀರಿ...ದೊಡ್ಡಯ್ಯ ಏನು ಏಳಿದ್ರೂ ಯೋಸ್ನೆಮಾಡಿ ಏಳ್ತಾನೆ—ಕೇಳಿ ಒಸಿ ಅವನ ಮಾತ—

ಒಬ್ಬ: ಏಳಪ್ಪೋ–ಕೇಳ್ತಾವ

ದೊಡ್ಡ: ಮುಂಚೆ ನೀವೆಲ್ಲ ಒಂದಾಗಬೇಕು. ಈ ಮಾತುಗಾರರ ಹಿಂದೆ ಇರೋ ವಿಷಾನ ಅರ್ಥ ಮಾಡಿಕೋಬೇಕು. ನಿಮ್ಮಂಥ ಶ್ರಮಜೀವಿಗಳ ದುಡಿಮೆಯಿಂದ್ಲೆ ದೊಡ್ಡೋರಾಗಿರೋ ಈ ಪೊಳ್ಳು ಜನ ನಿಮಗೆ ಭಾಷಣ ಬಿಗೀತಾರೆ. ಬೇಡದ್ದೆಲ್ಲಾ ಕೊಡ್ತೀನೀಂತ ಹೇಳ್ತಾರೆ. ಮೂಲಭೂತವಾದ ಅನ್ನ ಬಟ್ಟೆ ಬಗ್ಗೆ ಮಾತೇ ಆಡಲ್ಲ. ನಿಮ್ಮನ್ನೆಲ್ಲ ಶೋಷಣೆ ಮಾಡ್ತಿದಾರೆ. ನೀವು ಇವೆಲ್ಲದರ ವಿರುದ್ಧವಾಗಿ ಹೋರಾಡಬೇಕು. ಸ್ವಲ್ಪ ಕಷ್ಟ ಅನ್ನಿಸಿದ್ರೂ ನಾವೆಲ್ಲ ಒಂದಾದ್ರೆ–ಏನಾದ್ರೂ ಮಾಡೋಕೆ ಸಾಧ್ಯ. ಈ ಜನ ನಿಮ್ಮಂಥ ಮುಗ್ಧರನ್ನ ವಂಚಿಸ್ತಾರೆ. ಅನ್ಯಾಯ–ಅಕ್ರಮ–ಮೋಸ. ಸತ್ಯದ ಮೇಲೆ-ತೆರೆ ಎಳೀತಿದಾರೆ. ಅದರಿಂದ ನೀವು ಎಚ್ಚರವಾಗಿರಬೇಕು. ನಮ್ಮ–ನಿಮ್ಮ ಎಲ್ಲರ ಸುಖದ ಮೇಲೆ ಇವರು ಕಟ್ತಿರೋ ಸಾಮ್ರಾಜ್ಯದ ವಿರುದ್ಧ ಹೋರಾಡಬೇಕು–ನ್ಯಾಯ ಕೇಳ ಬೇಕು–ನೀವೆಲ್ಲ ಒಂದಾಗಬೇಕು.

ಜನ: ಹೌದ್ಹೌದು...ನಿಜ...ದೊಡ್ಡಣ್ಣ ಏಳಾದು ಸರಿ...
(ಹೀಗೆನ್ನುವ ಹೊತ್ತಿಗೆ ಭಾಷಣ ಮಾಡುತ್ತಿದ್ದ ಮೂವರು ವ್ಯಕ್ತಿಗಳ ಹಿಂದೆ ಅವಿತಿದ್ದ ಇನ್ನೂ ಮೂವರು ವ್ಯಕ್ತಿಗಳು ಕರಿಕಂಬಳಿ ಹೊದ್ದು ಕೊಂಡು ಇವರನ್ನು ಸುತ್ತಿ–ಕೈಲಿದ್ದ ದೊಣ್ಣೆಯಿಂದ ಅವರನ್ನು ಹೊಡೆವರು. ನೋವಿನ ಕೂಗು—ಗೊಂದಲ, ಕತ್ತಲೆ. ದುಃಖದ effect ಇರುವ ಧ್ವನಿಮುದ್ರಿಕೆ)

(ಶ್ರಮದ ಹುಯ್-ಹುಯ್ ಸದ್ದು-ನೀರವತೆ. ಕೆಲಸ ಮಾಡುತ್ತಿದ್ದಾಗ ಒಂದು ಕ್ಷಣಾನಂತರ ತಲೆಗೆ Bandage ಕಟ್ಟಿಕೊಂಡು ದೊಡ್ಡ ಬರುವ. ಕೆಲಸ ಮಾಡಲು ಹೋದಾಗ)

ತಿಮ್ಮ: ದೊಡ್ಡಣ್ಣ...ಸುಮ್ನೆ ಕುಂತ್ಕೋ...ನೀನು ಯಾಕೆ ಕೆಲ್ಸ ಮಾಡ್ತಿ?

ದೊಡ್ಡ: ಏ...ಹಾಗಂದ್ರಾಗುತ್ತ (ಕೆಲಸ ಮಾಡುತ್ತಿರುವ)

ಮುನಿಯ: ಈ ಬಿಸಿಲಾಗೆ ಮಣ್ಣು ಒರಾದು ಅಂದ್ರೆ ಪ್ರಾಣ ಓಯ್ತದೆ.

ತಿಮ್ಮ : ಮಾಡಾದೇನು...ಇಂಗೆ ಅನ್ನಸಿಕೊಂಡು—ಗೇದು ತಿನ್ನಬೇಕು ಅಂತ ನಮ್ಮ ಅಣೆಯಾಗೆ ಬರದೈತೆ.

ಮುನಿಯ: ಏನು ಅಣೇಬರಾನೊ - ನಂಗಂತೂ ಬೇಜಾರಾಗೈತೆ...ಅಲ್ಲ ಕಣ್ಲೇ ನಾ ಯಾವತ್ತಾನ ಸೋಂಬೆರಿ ಅಂಗಿರೋದು ನೀ ಕಂಡೀಯಾ

ತಿಮ್ಮ : ಛಿ...ಯಾವ ನನ್ಮಗ ಅಂತಾನೆ ಅಂಗಂತ

ಮುನಿಯ: ಅಂತಾದ್ರಾಗೆ ಆ ಮೇಸ್ತ್ರಿ "ಯಾಕ್ಲೇ—ಯಾಕ್ಕೆಲ್ಸ ಸರೀಗ ಮಾಡಾಕಿಲ್ಲ ...ಕಳ್ ಬೀಳ್ತೀಯೇನ್ಲೇ" ಅಂತಾನೆ...

ತಿಮ್ಮ : ಬುಡು ಬುಡು—ಅದೊಂದು ಕೆಟ್ಟ ಉಳ-ಕೊಬ್ಬು ಆ ನನ್ಮಗಂಗೆ

ದೊಡ್ಡ : (ಬಂದು) ಮೇಸ್ತ್ರಿ ಮಾತು ಹೇಳ್ತಿದೀರಾ-ಬುಡು ಅವನೊಬ್ಬ ದಗಲ್ಬಾಜಿ

ದೇವಿ : ದೊಡ್ಡಣ್ಣೋ......ಆ ಎಪ್ಪ ಎಲ್ರಿಗೂ ಇಂಸೆ ಕೊಡಾಕೆ ಸುರು ಅಚ್ಕಂಡವ್ನೆ.........

ಕಾಳ : ಆದ ಸಮಾಚಾರ ಇಂಗೆ. ಕೂಲಿ ತಕಾಳೆವಾಗ ದೊಡ್ಡ ಉಗ್ಸು ಉಪ್ಪಿನಕಾಯಿ ಅಕೋ ಒತ್ಗೆ ಸಾವುಕಾರ್ರು ಬಂದು ಮುಖದಮ್ಯಾಗೆ ನೀರಿಳ್ಸಿದ್ರಲ್ಲ...ಸರಿ...ಅದನ್ನೇ ರೊಚ್ಚು ಮಡಿಕ್ಕಂಡವ್ನೆ.

ದೊಡ್ಡ : ಐ...ಇರ್ಲೇಳು...ಏನು ಮಾಡಾನವನು ?

ದೇವಿ : ಅಂಗಲ್ಲ ದೊಡ್ಡಣ್ಣೋ...ಅವನು ಏಳಿದ್ದೇ ನಾವು ಮಾಡ್ಬೇಕು...ದಿನ ಬೆಳಗಾದರೆ ಅವನ ಕಣ್ಣಿದುರ್ಗೆ ಜೀತ ಮಾಡಬೇಕು. ಅಂತಾದ್ರಾಗೆ ಇಂಗೆ ಸಿಡ-ಸಿಡಾಂತಂತಿದ್ರೆ ಎಂಗಾ ?

ಇನ್ನೊಬ್ಬ : ಒಂದು ಥರಾದಾಗೆ ನೀ ಏಳಾದೂ ನಿಜ ಅಂದ್ರ ಮಾಡದೇನು ? ಅವನು ಏನೇ ಅಂದ್ರೂ ಅನ್ನಿಸ್ಕಂಡು, ಸುಮ್ನಿರಾಕಾಗ್‌ತೈತಾ ?

ಮತ್ತೊಬ್ಬ : ಅಂದಂಗೆ ಸಂಜೀನಾಗೆ ಬೇರೆ ಎಲ್ಲೋ ಕೆಲ್ಸ ಅದೆ—ಬರ್ಲೇ ಬೇಕು ಅಂದ.

ದೊಡ್ಡ : ಎಲ್ಲಂತೆ ?

ಕಾಳ : ಜಾಗ ಎಳ್ಳಿಲ್ಲ—ಲಾರಿನಾಗೆ ಸಾಮಾನು ಸಾಗಿಸಬೇಕಂತೆ...ಅವನು ಏಳೋ ತರದಾಗೆ ನೋಡಿದ್ರೆ ಬಾಳ ಒತ್ತಾಯ್ಸ್ತೈತೆ...ಇವತ್ತು ದೇವಿ ಒಬ್ಳೇ ಐತಾಳೆ ಗುಡ್ಲಾಗ್ತಾವ.

ದೇವಿ : ಐ...ಇದೇನ್ಹೇಳ್ತೀ...ನಂಗೂ ಏಳವ್ರೆ...ಅದೆಲ್ಲೋ ಬೇರೆ ತಾಕೆ ಕರ್ಕೊಂಡು ಓಯ್ತಾರಂತೆ...ಅದೆಲ್ಲ ಬೇರೇನೇ ಕೂಲಿ ಕೊಡ್ತಾರಂತೆ— ಎಲ್ರಿಗೂ ಯೇಳೇ ಇಲ್ವಾ ?

ದೊಡ್ಡ : ದೇವಮ್ಮೋ...ಎಲ್ಲೀಗಂತೆ ?

(ಭಾರವಾದ ಪದಾರ್ಥ ಎತ್ತಿದಾಗ ಪೆಟ್ಟಾಗಿ ಕೈ ನೋವಾಗಿ ನರಳುತ್ತಾನೆ.)

ದೇವಿ: ಅಲ್ಲಣ್ಣೋ......ಜೀತಕ್ಕೆ ಬೇರೆ ಕೂಲಿ ಕೊಡ್ತಾರಂತೆ

ಕೂಲಿ 1: ಕೂಲಿ ಆಸೆ ಮಡ್ಗಿ ಎಲ್ಲೆಲ್ಲಿ ಕರ್ಕೊಂಡು ಓಯ್ತಾನೋ......ಅದೆಂಥಾ ಕೆಲ್ಸ ಏಳ್ತಾನೋ...ಆ ಜಾಗದಾಗೆ ಯಾರು ಇರ್ತಾರೋ-ಇರಾಕಿಲ್ಲೋ

ಕಾಳ: ಅಂಗಾರೆ...ದೇವಿ ಬೇಡಂತೀಯಾ ?

ಕೂಲಿ 1: ಬೇಡ ಬೇಡ

ಕೂಲಿ 2: ಯೇ...ಅಲ್ಲೀಗೆ ಒಂದು ಪಟ ನಾ ಓಗಿದ್ನಿ...ಇಲ್ಲಿಂದ ಬೊಂಬಾ ಯಿಗೆ ಓಯ್ತದೆ ಲಾರಿಗಳು...ಚೀಲ ಚೀಲ ಕಳಿಸ್ತಾರೆ ಲಾರಿ ತುಂಬ... ಅದ್ರಾಗೆ ಏನಿರ್ತದೋ...ಏನೋ

ಕೂಲಿ 3-4: ಅಂಗಂದ್ರೆ ?

ಕೂಲಿ 2: ಇಷ್ಟು ಏಳಿದ್ರೂ ಅರ್ಥ ಆಯ್ತಿಲ್ವ. ಕಳ್ತನದಾಗೆ ಮಾಲು ಸಾಗಿಸ್ತಾರೆ ಕಣ್ಲೇ......ಸಿಮೆಂಟ್ ಪ್ಯಾಕ್ಟ್ರೀನಾಗೆ ಲಾಭ ಸಾಲದೂಂತ ಇದು ಬೇರೆ ಕೊಸರಿಗೆ.

ತಿಮ್ಮ: ನೋಡಿದೆಯಾ ಕಾಳ......ಇನ್ನೂ ಏನೇನು ಮಸಲತ್ತು ಅದೋ...

ಕೂಲಿ 2: ಚೆಂದೊಳ್ಳೆ ಎಂಗಸ್ರನ್ನೂ ಕಳಿಸ್ತಾರೆ ಕಣ್ಲೇ...

ದೊಡ್ಡ: ಇನ್ನೂ ಬುಡ್ಸಿ ಏಳ್ಬೇಕಾ...ಓದ್ವರ್ಸ ಇಲ್ಲಿದ್ದಲ್ಲ ಸಿಂಗಾರವ್ವ ಅವ್ಳು ಓದ್ದಾರಿ ಗೊತ್ತಿಲ್ಲ, ಪತ್ತೆ ಇಲ್ದೆ...ಅವರಪ್ಪನು ಹುಚ್ಚನಾಗಿ ಹೋಗಿ ಬಿಟ್ಟನಂತಲ್ಲ.

ತಿಮ್ಮ: ಏನವ್ನೋ ದೇವವ್ನೋ...ಮಾತು ಕಿವೀಗೆ ಬಿತ್ತಾ ?

ದೇವಮ್ಮ: ಅಂಗಾರೆ...

(ಮೇಸ್ತ್ರಿ ಭರ ಭರ ಬರುವ)

ಮೇಸ್ತ್ರಿ: ಲೇ...ಏನ್ರೋ ಮಾಡ್ತಿದೀರಿ...ಮುಗೀಲಿಲ್ವೇನೂ ನಿಮ್ಮ ಮಾತು... ಏಯ್ ಕಾಳ, ದೇವಿ ಬನ್ನಿ ಇಲ್ಲಿ
(ದೂರ ಕರೆದುಕೊಂಡು ಹೋಗಿ ಗುಟ್ಟಾಗಿ ಏನೋ ಹೇಳುವ)
(ಜೋರಾಗಿ) ಹೇಳಿದ್ದು ಗೊತ್ತಲ್ಲ......ಸಾಯಂಕಾಲ ರೆಡಿ ಇರಿ...... overtime ಇದೆ ಇವತ್ತು:

ದೊಡ್ಡ: ಮೇಸ್ತ್ರಿ...ಏನದು ದೂರ ಕರಕೊಂಡು ಹೋಗಿ ಹೇಳೋದು...ನಂಗೂ overtime ಡೂಟಿ ಆಕಿದೀರಾ ಎಂಗೆ...ಹಾ...ಯಾಕೆ ನಂಗೆ ಏಳ್ಲಿಲ್ಲ ...ಮರೆತ್ರಾ!

ಮೇಸ್ತ್ರಿ: ಅದೂ...ಅದೂ...ಊ......

ದೊಡ್ಡ: ನಾನೂ ಬರಬೇಕೋ ಎಂಗೆ?

ಮೇಸ್ತ್ರಿ: ಹೇಳೋಣ...ಹೇಳೋಣ...

ದೊಡ್ಡ: ಯಾಕೆ ಮೇಸ್ತ್ರಪ್ಪೋ...ತಡಬಡಾಯಿಸ್ತೀ.........

ಮೇಸ್ತ್ರಿ: ಪ್ರಶ್ನೆಗಳನ್ನು ಕೇಳದೆ ಬಾಯಿ ಮುಚ್ಚಿಕೊಂಡು ಬಿದ್ದಿರು...ಏನಯ್ಯೋ (ಎಂದು ಕೆಲಸಗಾರರ ಕಡೆ ನೋಡಿದಾಗ)

ಗುಂಪು: overtime—ಬೇಕು
ಎಚ್ಚೆ ಸಂಬಳ—ಬೇಕು
ಬೇಕೇ ಬೇಕು—overtime
ಈಗ್ಲೇಬೇಕು—overtime

ಮೇಸ್ತ್ರಿ: (ದೊಡ್ಡನನ್ನು ನೋಡಿ) ಓ...ಇದೆಲ್ಲ ನಿಂದೇ ಚಿತಾವಣೆಯೊ?

ತಿಮ್ಮ: ಅರೇ ಇದ್ರಾಗೆ ಅವನ ಚಿತಾವಣೆ ಏನು ಬತ್ತು—ಒಟ್ಟೆಪಾಡು...ಸುಮ್ನೆ ಇರಾಕಾಯ್ತದ...ಜೀತ ಮಾಡ್ತೀವಿ...ನಾವೇನು ಕಳ್ತನ ಮಾಡ್ತೀವಾ ......ಸೋಮಿ, ಇದು ನಮ್ಮಂಥೋರ ಕಾಲ ಅಲ್ಲ ಬುಡಿ.

ಮೇಸ್ತ್ರಿ: ಲೇ...ದೊಡ್ಡ...ಈ ಆಟ ಎಲ್ಲ ನನ್ನ ಹತ್ತಿರ ನಡೆಯಲ್ಲ...ಈಗ ಅಂದ್ರೆ ಈಗ ನಿನ್ನ ಕೆಲಸದಿಂದ ತೆಗೆದು ಬಿಡಬಲ್ಲೆ

ದೊಡ್ಡ: ಅರೇ ಕೋಪಯಾಕೆ ಮಾಡ್ಕೋತೀರಿ...ನಾ ಅನ್ನೋದೇನು–ದೇವಮ್ಮಂಗಾದ್ರೆ overtime ಕೊಡ್ತೀನಿ ಅಂದ್ರಿ...ಎಣ್ಣಾಳಿಗಿಂತ ಗಂಡಾಳಾದ್ರೆ ಒಳ್ಳೇದಲ್ವಾ ಅಂತ ನನ್ನೆಕ್ಕ...(ಎಲ್ಲ ನಗುವರು) ಅದಕ್ಕೆ ಏಳ್ದೆ...... ತಪ್ಪೇನು...ಅದು ನಾವು ಮಾಡೋಕೆಲ್ಸ ಅಲ್ಲವಾ...ಏನೋ ಬಡುವ್ರು ಬುದ್ಧಿ, ಮಾತಾಡ್ತೀವಿ ..ಕಷ್ಟ ಅಂದ ಮೇಲೆ ಬಾಯಿ ಬಿಟ್ಟು ಹೇಳಬೇಕಲ್ವಾ?

ಮೇಸ್ತ್ರಿ: ಲೇ...ಸಾಕು ನಿಲ್ಸೋ ನಿನ್ ಅರಿಕಥೆ, ಬೇಕೂಫ.

ದೊಡ್ಡ: ಏನಂದೆ? ಬೇಕೂಫ್ನ..ಯಾರೋ ಬೇಕೂಫ..ನೀ ಏಳ್ದಂಗೆ ಕೇಳೋ ಬೊಂಬೆಗಳು ಅನ್ಕಂಡ್ಯಾ ಎಂಗೆ?

(ಹೊಡೆಯಲು ಹೋಗುವ)

ಕಾಳ: ದೊಡ್ಡಯ್ಯ—ಸುಮ್ಕಿರು..

ದೊಡ್ಡ: ಇನ್ನು ಸುಮ್ನೆ ಕೂತಿರಾದು ಆಗಾಣಿಲ್ಲ....ಈಗ ಈ ನಿಮಿಷದಲ್ಲಿ ಏನಿದೆಯೋ ಅದೇ ಮುಖ್ಯ..ಪುನಃ ಹೇಳ್ತೀನಿ ಕೇಳ್ಕೋ..ಇವತ್ತು ದೇವಮ್ಮನ್ನ ಕೆಲ್ಸಕ್ಕೆ ಕಳಿಸಲ್ಲ ಅಂದ್ರೆ ಕಳಿಸಲ್ಲ.

ಮೇಸ್ತ್ರಿ : (ಅವನನ್ನೇ ದುರುಗುಟ್ಟಿ) ಕಳಿಸಲ್ವಾ ಕೆಲಸಕ್ಕೆ.

ದೊಡ್ಡ : ಇಲ್ಲ.

ಮೇಸ್ತ್ರಿ : (ಸರ್ ಎಂದು ಅವಳಿದ್ದ ಜಾಗಕ್ಕೆ ನುಗ್ಗಿ) ದೇವಮ್ಮ ನಾ ಏಳ್ತಾ ಇವ್ನಿ.. ಬಂದ್‌ಬಿಡು ಇವತ್ತು ಈ ಕೆಲಸಕ್ಕೆ..(ಇವನತ್ತ ತಿರುಗಿ) ನಮ್ಮ ಸಾವುಕಾರ್‍ರು ಏಳವ್ರೆ ಅಂದ ಮೇಲೆ ಮುಗೀತು. ನೀನು ಯಾವೋ ನಯೊಡ್ಯೋ ಏಳಾಕೆ..

ದೊಡ್ಡ : ನಿಮ್ಮಂಗೆ ಮಾನಮರವಾದೆ ಬುಟ್ಟು ಎಂಜಲು ಕಾಸಿಗೆ ನಾಲಿಗೆ ಚಾಚೋ ಮಕ್ಳಲ್ಲ ನಮ್ಮ ಎಣ್ಮಕ್ಳು..ಬೆವರು ಸುರಿಸಿ ದುಡಿತಾರೆ—ತಿಂತಾರೆ. ನೀ ಏಳಿದ ಕೆಲ್ಸ ಮಾಡಾಕೆ ಯಾಕೆ ಬಂದಾರು ?

ಮೇಸ್ತ್ರಿ : ಸುಮ್ಕಿರಲೇ—ನಾನೂ ನೋಡ್ತೀನಿ.

ದೊಡ್ಡ : ಅದು ಹ್ಯಾಗೆ ಕರ್‍ಕೊಂಡು ಓಯ್ತೀಯೋ ಕರ್‍ಕೊಂಡು ಓಗು ನೋಡವ?

ಮೇಸ್ತ್ರಿ : ಪರೀಕ್ಸೆ ಮಾಡ್ತೀಯಾ...ನೋಡು ಅಂಗಾರೆ...ಬಾರವ್ಮೋ.

(ಎಂದು ಅವಳನ್ನೆ ಎಳೆಯಲು ಸರ್ ಎಂದು ತಿರುಗಿದಾಗ, ದೊಡ್ಡ ಅವನನ್ನೆ ಎಳೆದು ಹಾಕುವ. ಮೇಸ್ತ್ರಿ ಮೂರು ಉರುಳು ಉರುಳುವ ಕೆಲಸಗಾರರು ಅವನ ಸುತ್ತ ಮುತ್ತಿ ಬಡಿವರು. ದೊಡ್ಡ ನಂತರ ದೇವಮ್ಮನ ಬಳಿ ಬಂದು ಮೇಸ್ತ್ರಿ ಹೇಳಿದೆಡೆಗೆ ಹೋಗದಿರಲು ಹೇಳುತ್ತಿರುವ. ಒಬ್ಬಾತ ಮೇಸ್ತ್ರಿ ಉಸಿರಾಡದೆ ಇರುವುದನ್ನು ಗಮನಿಸಿ ದೊಡ್ಡನ ಬಳಿ ಬಂದು ಗಾಬರಿಯಿಂದ ಸನ್ನೆಮಾಡಿ ಹೇಳುವ. ದೊಡ್ಡ ಒಂದು ಕ್ಷಣ ಯೋಚಿಸಿ ನಂತರ ಸರ್ ಎಂದು ಹೋಗಿ..ಇತರರಿಗೂ ಸೂಕ್ಷ್ಮವಾಗಿ ಸಲಹೆ ನೀಡುವ. ಎಲ್ಲ ಅವನನ್ನು ಹೊತ್ತು ಹೋಗುವರು. ಮೂರು ಮಂದಿ ಕೈಯಲ್ಲಿ ಕರಿ ಕಂಬಳಿ ಹಿಡಿದುಬಂದು ದೇವಮ್ಮನನ್ನು ಸುತ್ತುವರು. ಅವಳು ತಪ್ಪಿಸಿಕೊಳ್ಳಲು ಪ್ರಯತ್ನಿಸುವಳು. ಮೂವರೂ ಸುತ್ತ ಕಂಬಳಿ ಹಿಡಿದು ಸುತ್ತಿ ರಂಗದ ಪಕ್ಕಕ್ಕೆ ಹೋದಾಗ ದೊಡ್ಡಯ್ಯ ಎಂದು ಕಿರುಚುವಳು. ತಕ್ಷಣ ದೊಡ್ಡಯ್ಯ ಓಡಿ ಬರುವ. ಈ ಮೂವರು ಅವನನ್ನು ಸುತ್ತಿ ರಂಗದಾಚೆಗೆ 'ಅಪೇಸ್' ಮಾಡುವರು.

ಒಂದು ಕ್ಷಣ ರಂಗ ಖಾಲಿ.

(ನಂತರ ನಿಧಾನವಾಗಿ ಕೂಲಿಗಾರರು ಸಪ್ಪೆ ಮೋರೆ ಹಾಕಿ ಬಂದು ಒಬ್ಬೊಬ್ಬರು ಒಂದೊಂದು ಮೂಲೆಯಲ್ಲಿ ಸಪ್ಪಗೆ ಕೂರುವರು. ಸೂತ್ರಧಾರ ಬಂದು—ಎಲ್ಲರನ್ನು ಗಮನಿಸಿ)

ಸೂತ್ರಧಾರ: ಹಾಡು ಮಾಡಿ ಮಡಿದಂಥ ಧೀರರ ಹಾಡ ಹಾಡಲು

ಬರಲಿಲ್ಲ ನಾ ಇಲ್ಲಿಗೆ
ನಿಮ್ಮ ಜೀವಂತಿಕೆಯ ಒಳಗಿನ ನೋವಿಗೆ
ನುಡಿಯ ನೀಡಲು ನಾ ಬಂದೆ.

..ದೊಡ್ಡವರ ಕುತಂತ್ರಗಳು ನಿಮ್ಮ ಸುತ್ತು ಬಲೆ ನೇಯ್ದಿರುತ್ತೆ–ಅವರಿಗೆ ದುಡ್ಡಿನ ಬಲ ಇದೆ.—ಜನದ ಬಲ ಇದೆ...(ಪೇಪರ್ ಓದುತ್ತಾ) ಕೇಳ್ರಪ್ಪಾ..(ಎಲ್ಲ ಆಲಿಸುವರು)

ವಿಚಿತ್ರ ನಗರದ ಸಣ್ಣ ಕಾರ್ಖಾನೆಯಲ್ಲಿನ ಕೆಲಸಗಾರರು ದೊಂಬಿಯೆದ್ದು ಮೇಸ್ತ್ರಿಯನ್ನು ಕೊಲೆ ಮಾಡಿದ್ದಾರೆ–ಹಣ ನಾಪತ್ತೆ ಆಗಿದೆ. ಹೀಗಾಗಿ ಕಾರ್ಮಿಕರ ದುರ್ವರ್ತನೆಯನ್ನು ಖಂಡಿಸುವ ಸಲುವಾಗಿ ಅನಿರ್ದಿಷ್ಟ ಕಾಲದವರೆಗೆ ಕಾರ್ಖಾನೆ ಮುಚ್ಚಲಾಗಿದೆ–Lockout...

(ಎಲ್ಲ ಸಪ್ಪಗೆ ನಿಲ್ಲುವರು)

ತಿಮ್ಮ : ಇನ್ನು ಏನಪ್ಪೋ ಗತಿ ?

ಸೂತ್ರಧಾರ: ನೀವು ಬಹಳ ದುಡುಕಿದಿರಿ ತಿಮ್ಮಯ್ಯ...

ಒಬ್ಬಾತ: ಅಂದ್ರೂ ಅನ್ನಿಸ್ಕಂಡು–ವದ್ರೂ ವದಿಸ್ಕಂಡು ಸುಮ್ಮನಿರಬೇಕಿತ್ತಾ ?

ತಿಮ್ಮ: ಬೋಕ್ಯಾಪ ಬತ್ತು ಸೋವೇರಾ. ಆವಯ್ಯ ಎಣಾ ಆಗ್ಲಿ ಅಂತ ಮಾಡಿದ್ದಲ್ಲ ಬಿಡ್ಧಿ–

ಸೂತ್ರಧಾರ: ಅದ್ಸರಿ....ನಾನು ಇಲ್ಲಾಂತಿಲ್ಲಾ....ಆದ್ರೆ ಅದ್ರಿಂದ ನಷ್ಟ ಆಗಿದ್ದು ಯಾರಿಗೆ? ಹಾಯಾಗಿ ದೊಡ್ಡ ಕೆಲ್ಸ ಮಾಡ್ಕಂಡಿರೋದು ಬಿಟ್ಟು ನಿಮ್ಮ ಜತೇಲಿ ಬಂದು ನಿಮ್ಮ ಒಳ್ಳೇದಕ್ಕೆ ದುಡೀತಿದ್ದ ದೊಡ್ಡಯ್ಯನ್ನ ಕಳ್ಕೊಂಡ್ರಿ–ದೇವಮ್ಮನ್ನ ಕಳ್ಕೊಂಡ್ರಿ.

ಕಾಳ: ಯಪ್ಪೋ..ನಂಗೆ ಆಸರೆಯಾಗಿದ್ದು ಒಂದೇ ಒಂದು ದಿಕ್ಕು..ಎಲ್ಲವ್ವೋ ..ಏನಾದ್ಲೋ

ತಿಮ್ಮ : ಕಾಳಣ್ಣ–ಸಮಾಧಾನ ಮಾಡಿಕೋ

ಕೂಲಿ 1 : ನಾಳೆಯಿಂದ ಕೂಲಿಗೇನು ಮಾಡಾವ–ಫಾಕ್ಟ್ರಿ ಮುಚ್ಚಡೆ.

ಕೂಲಿ 2 : ಇಟ್ಟು–ಎಸರಿಗೆ ಬತ್ತಲ್ಲ ಗಾಚಾರ.

ಸೂತ್ರಧಾರ: ಯೋಚಿಸಬೇಡಿ..ನೀವೆಲ್ಲ 'ಒಂದಾದರೆ, ನಿಮ್ಮ ಸಮಸ್ಯೆಗಳನ್ನ ಚರ್ಚೆ ಮಾಡಿ ಮಾಲೀಕರ ಮುಂದೆ ಒಟ್ಟಿಗೆ ಹೇಳೋ ಹಾಗಾದ್ರೆ–ಏನೂ ಕಷ್ಟ ಇರಲ್ಲ. Factory ಶುರುವಾಗಿ 5 ವರ್ಷ ಆಯಿತು..ನಿಮ್ಮದಾಗಿ, ಒಂದು union ಇಲ್ಲ..ನಿಮ್ಮ ಪರವಾಗಿ ಮಾತಾಡಕ್ಕೆ ಸರಿಯಾದವರನ್ನು ಆರಿಸೋ ಯೋಚನೆಯೇ ನೀವು ಮಾಡಿಲ್ಲ..ನಿಮ್ಮ ಕಷ್ಟಗಳನ್ನ ಯಜಮಾನರಿಗೆ ಹೇಳೋರು ಯಾರು ?

ತಿಮ್ಮ : ದೊಡ್ಡಯ್ಯ ಏಳ್ತಿದ್ದ–ಅವನ ಮಾತು ನಾವು ಕೀವೀಗೆ ಆಕಳ್ಳಿಲ್ಲ.

ಕೂಲಿ 1: ಮಾಡದೇನು?

ತಿಮ್ಮ: ನೀವೇ ನಮ್ಮ ಮುಖಂಡ ಯಾಕಾಗಬಾರದು?

ಕಾಳ: ಓದಪ್ಪೋ...ಅಂಗೇ ನಮ್ಮ ದೇವೀನೂ ಉಡುಕಣ್ಕೊ...ಎಲ್ಲೈತೋ ನನ್ನ ಕಂದ—ಏನ್ಕಬವಣೆ ಪಡ್ತೈತೋ...

ಸೂತ್ರಧಾರ: ಛೆ—ಛೆ—ನಿಮಗೇನೂತಿಳಿಯೋದೇ ಇಲ್ಲ—ನಾನು ಹೋಗಿ ಮಾತಾಡಿದರೆ ಯಾರು ಕೇಳ್ತಾರೆ. ವ್ಯಕ್ತಿಗಿಂತ ಸಂಸ್ಥೆ ಮುಖ್ಯ. ನೀವೆಲ್ಲ ಒಂದಾಗಿ ನಿಮ್ಮಲ್ಲೇ ಒಬ್ಬನ್ನ ಆರಿಸಿ.

(ಅಲ್ಲಿಗೇ ಪುಟ್ಟಣ್ಣನ ಆಗಮನ. ಈ ಬಾರಿ ಒಂದು ಚಡ್ಡಿ ಮಾತ್ರ ಇದೆ)

ಪುಟ್ಟಣ್ಣ: (ಮಗು) ಅಣ್ಣಾ ... ಒಟ್ಟೆ...ಅಸೀತೈತೆ—ಅಕ್ಕ ಎಲ್ಲವ್ಳೆ...ಇಟ್ಟು ಇಡಾಕೇಳು?

ಕಾಳ: ಬತ್ತಾಳೆಕಣ್ಲಾ—ಈಗ ಬತ್ತಾಳೆ.

ಪುಟ್ಟಣ್ಣ: ಎಲ್ಲೋಗವ್ಳೆ...ಮೇಸ್ಟ್ರು ಏಳಿಕೊಟ್ಟ ಪಾಠ ಕೇಳ್ಳೇ ಇಲ್ಲ....

ಕಾಳ: ಜಾತ್ರೇಗೆ ಓಗವ್ಳೆ ಕಣ್ಲ (ದುಃಖದಿಂದ)

ಸೂತ್ರಧಾರ: ಅಲ್ಲ ಕಣ್ಮಗಾ ಯಾಕೆ ಇವತ್ತು ಇಸ್ಕೂಲಿಗೆ ಓಗನಿಲ್ಲ?

ಪುಟ್ಟ: ಬೋ ಆಸಿವಾಗೈತೆ—ಇಟ್ಟಿಲ್ಲಾ—ಗಂಜಿ ಇಲ್ಲ.

ಸೂತ್ರಧಾರ: ಕಾಳಣ್ಣ....ಯಾಕೆ? ಯಾಕೆ—ಏನೂ ಮಾಡಿಲ್ವ ಮಗೂಗೆ

(ಕಾಳ ಮೌನವಾಗಿ ನಿಲ್ಲುವ)

ಪುಟ್ಟ: ಅಕ್ಕನ್ನಾರ ಕರಕಂಬಾ ಅಂದ್ರೆ ಕೇಳಾಕಿಲ್ಲ—ಅಕ್ಕ ಬೇಕು ನಂಗೆ

ಸೂತ್ರಧಾರ: ಅಕ್ಕ ಬರ್ತಾಳೆ...ನೀನು ಸ್ಕೂಲಿಗ್ಯಾಕೆ ಓಗಾಕಿಲ್ಲ....

ಪುಟ್ಟ: ದೊ...ರ ಐತೆ...ನಡಿಯಾಕೆ ಆಗಾಕಿಲ್ಲ ಸುಸ್ತಾಗ್ತೈತೆ—ಉಣ್ಣಾಕಿಕ್ಕಿದ್ರೆ 'ಡೊಯ್‌ಂ' ಅಂತ ಓಯ್ತೀನಿ.

ಸೂತ್ರಧಾರ: ಬ್ಯಾಡ ಬಿಡು...ಇವತ್ತು ಓಗ್ಲೇ ಬೇಡ

ಪುಟ್ಟ: ಐ...ಅಯ್ನೋರು ಬೈತಾರೆ...'ಆಬ್ಸೆಂಟ್' ಅಂತಾರೆ—ಏನೇಳಿದ್ರೂ ನಂಬಾಕಿಲ್ಲ—ಬೆತ್ತದಾಗೆ 'ಪಟ್-ಪಟ್' ಅಂತೊಡೀತಾರೆ.

(ಅಳುವ. ಸೂತ್ರಧಾರ ಚಿಲ್ಲರೆ ಕೊಟ್ಟು ಸಮಾಧಾನ ಮಾಡುವ)

ಸೂತ್ರಧಾರ: ಶೆಟ್ಟಿ ಅಂಗ್ಡೀಲಾರ ಏನಾನ ತರಾಕಿಲ್ವ ಕಾಳಣ್ಣ?

ಕಾಳ: ಫ್ಯಾಕ್ಟ್ರಿ ನಿಂತೋಗದೆ. ಜೀತದ ಅಣ ಇಲ್ಲ ಅಂತ ಆದಮ್ಯಾಗೆ ಯಾರಣ್ಣ ಸಾಲ ಕೊಟ್ಟಾರು..ಸಾವುಕಾರ–ಶೆಟ್ಟಿ ಎಲ್ಲಾ ಒಂದೇ ಅಲ್ವಾ? ಮನೇಲಿದ್ದ ಪಾತ್ರೆ ಪಡಗ ಎಲ್ಲ ಅಡಾ ಮಡಗಾಯಿತು... ದೇವೀದೊಂದು ಸೀರೇ ಇತ್ತು. ಅದೂ ನಿನ್ನೆ ಮಾರಿಬುಟ್ಟಿ... ಅಣಾನೂ ಮುಗೀತು–ಅಸಿಟ್ಟೂ ಮುಗೀತು. ಮಗ ಅಳ್ತದೆ.... (ದುಃಖದಿಂದ) ಮಾಡಾದೇನು?

ತಿಮ್ಮ: ಇನ್ನು ಏನು ಎಂಗೆ ಅಂತ ನೀವು ಏಳ್ಳೀ ಇಲ್ಲ

ಸೂತ್ರಧಾರ: ಹ್ಯಾಗೆ ಹೇಳಲಪ್ಪ..ಎಲ್ಲ ವಿಪರೀತಕ್ಕೆ ಇಟ್ಕೊಂಡಿದೆ

ತಿಮ್ಮ: ಏನಾಗದೆ?

ಸೂತ್ರಧಾರ: ಸಾವುಕಾರ್‍ರು-police, military ಎಲ್ಲಾ ಕರ್‍ಸಿದಾರೆ. ಊರಲ್ಲೆಲ್ಲ ಅವರದ್ದೇ ಓಡಾಟ–ಹಾವಳಿ, ಜನವೆಲ್ಲ ಗಾಭರಿಯಾಗಿದಾರೆ. ಒಬ್ರಿಬ್ರನ್ನ arrest ಮಾಡಿದ್ರೂ . 144 ನೇ section ಜಾರೀಲಿದೆ.

ಕಾಳ: ಸರಿ..ಅಂಗಾರೆ ಈಗೇನ್ಮಾಡೋದು?

ಸೂತ್ರಧಾರ: ನಾವು ಹೆದರಬೇಕಿಲ್ಲ–ನಮ್ಮ ಹಕ್ಕುಗಳನ್ನ ಬಿಡಲೂ ಬೇಕಿಲ್ಲ. ಆದರೆ ಅದನ್ನ ಕೇಳೋವಾಗ ಸರಿಯಾದ ಕ್ರಮ ಬೇಕು. ಯಾವಾಗ್ಲೂ ದುಡುಕಬಾರದು. ಅನ್ಯಾಯ ಅಂತ ಅನ್ನಿಸಿದಾಗ ಕೇಳೋ ಹಕ್ಕು ನಿಮ್ಮದು. ಅದನ್ನ ಯಾಕೆ ಮರೀತೀರಿ. ನ್ಯಾಯಕ್ಕೆ ಹೋರಾಡಿದರೆ ಆಯಿತು.....

ಕಾಳ-ತಿಮ್ಮ: ಅದೆಂಗೇಬುದ್ಧಿ–ನೀವೇ ಏರ್ಪಾಟು ಮಾಡಬೇಕು....

ಸೂತ್ರಧಾರ: ನೋಡೋಣ ನಡೀರಿ...ಆ ಮಾಲೀಕ ಎನಂತಾನೋ...ಈ ಮಧ್ಯೆ ದಲ್ಲಿ ಯಾರ್‍ಯಾರೂ ಹೋಗಿಬಿಟ್ಟಿದ್ದಾರೊ ಸಂಧಾನಕ್ಕೆ–ಇಂಥಾದೇ ಕಾಯ್ಕೊಂಡಿರೋ ನರಿಗಳೂ ಇದಾವಲ್ಲ!

ತಿಮ್ಮ: ನಡೀರಿ....ನಡೀರಿ....

(ಮಿಲ್ ಮಾಲೀಕನ ಪ್ರವೇಶ. ಅವನ ಹಿಂದೆ ಮುಖವಾಡ ಧರಿಸಿದ ವ್ಯಕ್ತಿಗಳ ಪ್ರವೇಶ. ತ್ರಿಕೋನದಲ್ಲಿ ಒಬ್ಬೊಬ್ಬರು ಒಂದೊಂದೆಡೆ ನಿಲ್ಲುವರು. ಇವರ ಮಾತುಗಳು ಕ್ರಮೇಣ ಏರುತ್ತ ಮಾಲೀಕನನ್ನು ಸುತ್ತುವರಿದು ಆಕ್ರಮಣ ಮಾಡಿದಂತೆ ಭಾಸವಾಗಬೇಕು)

ಮಾಲೀಕ: ಏನಾಗಬೇಕಿತ್ತು ನಿಮಗೆಲ್ಲ?

ಮುಖವಾಡ 1: ಹೇಳಿದ್ವಲ್ಲ..ನಾವು ಕೂಲಿಗಳ ಪರವಾಗಿ ಬಂದಿದೀವಿ.

ಮುಖವಾಡ 2: ನೀವು ಅವರಿಗೆ ಅನ್ಯಾಯ ಮಾಡಿದೀರಿ.

ಮುಖವಾಡ 3 : ಕೂಡಲೇ factory ಶುರು ಮಾಡ್ಬೇಕು.

ಮಾಲೀಕ : ನಾನೇನು ಅನ್ಯಾಯ ಮಾಡಿದೀನಿ

ಮುಖವಾಡ 1 : ಅದೊಂದು ಭಾರೀ ಪಟ್ಟೇನೇ ಇದೆ.

ಮಾಲೀಕ : ಹೇಳಿ ನೋಡೋಣ ?

ಮುಖವಾಡ 3 : ಫ್ಯಾಕ್ಟರಿ ಶುರುವಾಗಿ 5 ವರ್ಷ ಆಯಿತು.

ಮಾಲೀಕ : ಇರಬಹುದು.

ಮುಖವಾಡ 2 : ಇನ್ನೂ Labour Law apply ಮಾಡಿಲ್ಲವಲ್ಲ ?

ಮಾಲೀಕ : ಹ...ಹ...ಈಗೇನಾಗಿದೆ ಅವ್ರಿಗೆ. ಚೆನ್ನಾಗಿ ದುಡಿಯೋರಿಗೆಲ್ಲ ಹೆಚ್ಚು ಸಂಬಳ ಸಿಗ್ತಾನೆ ಇದೆ....

ಮುಖವಾಡ 1 : ಹಾಗಲ್ಲ...ನ್ಯಾಯವಾಗಿ ಅವರಿಗೆ ಸಲ್ಲಬೇಕಾದ ಸಂಬಳ-ಸಾರಿಗೆ-ಬೇರೆಲ್ಲ ರೀತಿಯ ಅನುಕೂಲಗಳು...ಬೋನಸ್ಸು.

ಮಾಲೀಕ : ಓಹೋ...ಫ್ಯಾಕ್ಟರಿ ಲಾಸ್‌ನಲ್ಲಿ ನಡೀತಿದೆ ಅಂತ ನಾನು ಬೇರೆ ಹೇಳ್ಬೇಕೇನು ?

ಮುಖವಾಡ 2 : ಅವರಿಗೆ ರಜಾ ಅನುಕೂಲ...ಆಸ್ಪತ್ರೆ...ಇನ್ಸೆಂಟೀವ್ ಇತ್ಯಾದಿ

ಮಾಲೀಕ : ಹಾ...ಹಾ...ಸದ್ಯಕ್ಕೆ ಫ್ಯಾಕ್ಟರಿ ಮುಚ್ಚಿದೀವಿ.

ಮುಖವಾಡ 1 : ಮುಚ್ಚಿದೀರಿ...ಆದರೆ ಅದಕ್ಕೊಂದು ಕಾರಣ ಬೇಕಲ್ಲ.

ಮುಖವಾಡ 2 : ಆ ಜನ ನಿಮಗಾಗಿ ದುಡೀತಾರೆ.

ಮುಖವಾಡ 3 : ಅವರನ್ನ ಉಪವಾಸ ಹ್ಯಾಗೆ ಕೆಡವತೀರಿ. ಈಗ ಆ ಬಗ್ಗೆ ಮಾತು ಕತೆ ಆಗ್ಲೇಬೇಕು.

ಮಾಲೀಕ : ಅದು ಕೋರ್ಟಿನಲ್ಲಿ ತೀರ್ಮಾನ ಆಗಲಿ.

ಮುಖವಾಡ 2 : ಆ ನಿರ್ಧಾರ ಒಳ್ಳೇದಲ್ಲ...ಕೂಲಿಗಳು ಒಂದಾಗಿ ಒಂದು ಸಂಘ ಮಾಡ್ಕೊಂಡಿದಾರೆ. ನಾವು ಅವರ ಪರವಾಗಿ ಬಂದಿದೀವಿ.

ಮುಖವಾಡ 2 : ನಮಗೂ ಅವರ ಪರವಾಗಿ ಮಾತಾಡಕ್ಕೆ ಗೊತ್ತಿದೆ.

ಮುಖವಾಡ 1 : ನಮ್ಮ ಕೇಸೂ ಹೋಗುತ್ತೆ ಕೋರ್ಟಿಗೆ.

ಮಾಲೀಕ : ನೀವು ಹೇಳ್ತಿರೋದು...ನಿಜ ಏನು ? ಪುಟ್ಟ Factory ಗೆ ಇವೆಲ್ಲ ಯಾಕೆ ಅಂತ.

ಮುಖವಾಡ 2 : Factory ಪುಟ್ಟದೋ ದೊಡ್ಡದೋ ಅನ್ನೋದಲ್ಲ ಮುಖ್ಯ–

ಮುಖವಾಡ 1 : ಇಲ್ಲಿ ಕೆಲಸ ಮಾಡೋರೂ ಮನುಷ್ಯರು

ಮುಖವಾಡ 3: ಅವರಿಗೆ ನ್ಯಾಯ ದೊರಕಲೇ ಬೇಕು

ಮಾಲೀಕ: ಆದ್ರೆ ಅವ್ರು ಮೇಸ್ತ್ರೀನ ಕೊಲೆ ಮಾಡಿದಾರೆ. ಹೆಣಾನೂ ಇಲ್ಲಾನ್ನಿಸಿಬಿಟ್ಟಿದ್ದಾರೆ.

ಮುಖವಾಡ 2: ಇಂಥಾ ಗಲಾಟೇಲಿ ಆ ತಪ್ಪು ಅವರ ಮೇಲೆ ಹೊರಿಸಕ್ಕೆ ಆಧಾರ ಏನಿದೆ?

ಮುಖವಾಡ 1: ಎಲ್ರನ್ನೂ ಹ್ಯಾಗೆ ಶಿಕ್ಷಿಸ್ತೀರಿ?

ಮುಖವಾಡ 3: ಅದಕ್ಕಿಂತ ದೊಡ್ಡ ಅಪರಾಧ ನೀವು ಮಾಡಿದೀರಾ.

ಮಾಲೀಕ: (ಬೆಚ್ಚುತ್ತಾ) ನಾ. . . . ನೇ?

ಮುಖವಾಡ 3: ಹೌದು...ದೊಡ್ಡನ್ನ ಕೊಲೆ ಮಾಡ್ಸಿದೀರಿ...ದೇವೀನ ಹಾಳು ಮಾಡೀದಿರಿ

ಮಾಲೀಕ: ದೊಡ್ಡ ಹಟ ಮಾಡ್ದ. . ದೇವಿ. . ಕೂಲಿಹೆಂಗಸು (ತಾತ್ಸಾರವಾಗಿ)

ಮುಖವಾಡ 3: ಹಾಗಂತ ಅವರನ್ನ ಇಷ್ಟ ಬಂದ್ಹಾಗೆ ನಡಸ್ಕೊಳ್ಳೋ ಅಧಿಕಾರ ನಿಮಗೆ ಇಲ್ಲ

ಮುಖವಾಡ 1: ಕೂಲಿಗಳಿಗಾಗಿ Factory ಯೋ, Factory ಕೂಲಿಗಳಿಂದ ನಡೀತಿದ್ಯೊ?

ಮಾಲೀಕ: ನಾನು ಹೇಳೋದು ಕೇಳಿ

ಮುಖವಾಡ 2: ಮಾತಿನ ಮೋಡಿಗೆ ಬಲಿಯಾಗೋರಲ್ಲ ನಾವು. . . .

ಮುಖವಾಡ 3: ಕೋರ್ಟಿನಲ್ಲಿ ಜಯ ನಮ್ಮ ಕಡೆ ಖಚಿತ. .

ಮಾಲೀಕ: ಯಾಕೆ ಅಷ್ಟು ಎತ್ತರದ ಧ್ವನೀಲಿ ಮಾತಾಡ್ತೀರಿ...ನಿಮ್ಮ ಗಂಟಲುಗಳಿಗೆ ಆಯಾಸವಾಗೋದೂ ನನಗೆ ಇಷ್ಟವಿಲ್ಲ...

ಮುಖವಾಡ 2: ಇಂಥ ನಯಗಾರಿಕೆಯ ಮಾತುಗಳ ಪರಿಚಯವಿದೆ ನಮಗೆ...

ಮಾಲೀಕ: ನಿಮ್ಮಂಥ ಮಾತಿನ ಜಾಣರು ನಮ್ಮೊಂದಿಗಿರಬೇಕು...ನಾವೆಲ್ಲ ಅಣ್ಣ ತಮ್ಮಂದಿರಂತೆ ಇರೋದು ಸಾಧ್ಯವೇ ಇಲ್ಲವೆ...

ಮುಖವಾಡ 1: (ಖಚಿತವಾಗಿ) ಇಲ್ಲ

ಮಾಲೀಕ: ಯೋಚನೆ...ಮಾಡಿ ನಿಮಗೂ ಮನೆ, ಮಠ, ಹೆಂಡತಿ...ಮಕ್ಕಳು ...ಅವರೆಲ್ಲ ಹಾಯಾಗಿರ್ಲಿ ಅಂತ್ಲೇ ಹೇಳ್ತಿದೀನಿ. . ಹೀಗೆ ಹೇಳೋವಾಗ ನನ್ನ ಜವಾಬ್ದಾರಿ ನನಗೆ ಗೊತ್ತಿದೆ...ಏನು?

ಮುಖವಾಡ 1:
ಮುಖವಾಡ 2: } ಹಿ ಹಿ ಹಿ . . . .
ಮುಖವಾಡ 3:

ಮಾಲೀಕ : ಹ ಹ ಹ ಅದು...ಜಾಣರ ಲಕ್ಷಣ....

(ಕೈತಟ್ಟುವ. ಒಬ್ಬ ವ್ಯಕ್ತಿ ಬಂದು ಹತ್ತಿರ ನಿಂತಾಗ, ಮಾಲೀಕ ಕಿವಿಯಲ್ಲಿ ಏನೋ ಹೇಳುವ. ತಕ್ಷಣ ಆತ ಹೋಗಿ ನೋಟಿನಕಂತೆಯ ದೊಡ್ಡ ರಟ್ಟಿನ ಡಬ್ಬ ಒಬ್ಬೊಬ್ಬರಿಗೂ ತಂದುಕೊಡುವ. ಮುಖವಾಡ ಗಳ ನೀಡಿದ ಕೈ ಬಾಗಿದ ಬೆನ್ನುಗಳು ಸ್ವೀಕರಿಸುತ್ತವೆ. ಮಾಲೀಕ ತೆರಳುವ)

(ತಲೆಯ ಮೇಲೆ ಕೈಹೊತ್ತು ಸೋತ ಮುಖದ ಕೂಲಿಗಳು ರಂಗದ ಮೇಲಿದ್ದಾರೆ)

ವ್ಯಕ್ತಿ : (ಡಂಗೂರ ಹೊಡೆದು) ಕೇಳಿರಿ...ಕೇಳಿರಿ...ಕೇಳಿರಿ....

ಇದೊಂದು ವಿಶೇಷ ಪ್ರಕಟಣೆ. ನಾಳೆ ಮುಂಜಾನೆಯಿಂದ ಕಾರ್ಖಾನೆ ಆರಂಭವಾಗಲಿದೆ...ಮೇಸ್ತ್ರಿಯ ಸಾವಿಗೆ ಕಾರಣರಾದ ದೊಡ್ಡ–ತಿಮ್ಮ–ಕಾಳನನ್ನ ವಜಾ ಮಾಡಲಾಗಿದೆ....ನಾಳೆ ಬೆಳಿಗ್ಗೆ ಕೆಲಸಕ್ಕೆ ಹಾಜ ರಾಗುವವರನ್ನು ಮಾತ್ರ ಕೆಲಸಕ್ಕೆ ತೆಗೆದುಕೊಳ್ಳಲಾಗುವುದು....

ಕೇಳಿರಿ...ಕೇಳಿರಿ...ಕೇಳಿರಿ....

ನಾಳೆ ಮುಂಜಾನೆಯಿಂದ ಕಾರ್ಖಾನೆ ಆರಂಭ

(ಎಂದಾಗ ಕಾರ್ಖಾನೆಯ ಕೆಲಸಗಾರರು ಒಬ್ಬೊಬ್ಬರಾಗಿ ಬಂದು–ಚಕ್ರದಂತೆ ವೇದಿಕೆ ಮೇಲೆ ಸುತ್ತುವರು. ಸೂತ್ರಧಾರ–ಪುಟ್ಟನನ್ನ ರಂಗದ ಮೇಲೆ ಕರೆತಂದಾಗ, ಆ ಹುಡುಗ ಸುತ್ತುತ್ತಿದ್ದವರ ಕಾಲು ಗಳನ್ನೇ ಗಮನಿಸುತ್ತ ನಿಂತಿರುವ. ಮಾತು ಆರಂಭವಾದಾಗ ಎಲ್ಲ Freeze ಆಗಿ ನಿಲ್ಲುವರು)

ಸೂತ್ರಧಾರ: ನೋಡಿದಿರಲ್ಲ—ಕೊನೆಗಾದ ಪರಿಣಾಮ....

ದೊಡ್ಡ ಸತ್ತ–ದೇವಿ ನಾಪತ್ತೆ....ಕಾಳ–ತಿಮ್ಮ ಕೆಲಸ ಕಳೆದು ಕೊಂಡರು....ಇನ್ನು ಈ ಪುಟ್ಟನ ಗತಿ? ಮಧ್ಯವರ್ತಿಗಳಿಂದ ಇಂಥ ಅನ್ಯಾಯ ಅನಾಚಾರಗಳಾದರೆ ಶ್ರಮಜೀವಿಗಳ ಪಾಡೇನು?

ಹೀಗಾದಾಗ ಇಂಥ ಹುಡುಗರ–ಯುವಕರ ಮನಸು ರೋಸುತ್ತೆ.... ಕೆಚ್ಚು ಕೊಚ್ಚ್ಯಾದಾಗ ಒಂದು ಎರಡಾಗುತ್ತೆ; ಎರಡು ನಾಲ್ಕಾಗುತ್ತೆ; ನಾಲ್ಕು ನೂರಾಗುತ್ತೆ.

(ಎಂದು ಹೇಳುವಾಗ ಹುಡುಗ ಕೈಲಿ ಚಾಕು ಹಿಡಿದು..ಅದನ್ನು ಎತ್ತಿ–ಭರ್ಜರಿಯಾಗಿ ತಿವಿದಂತೆ ನಟಿಸುವ. ಹಿನ್ನೆಲೆಯ ತುಂಬಾ ಕೆಂಪು ದೀಪ ರಂಗವನ್ನು ಆವರಿಸುವುದು)

# ಬೀಗದ ಕೈ

ರಂಗಮುಂಚದ ಮೇಲೆ ಬೆಳಕು ಚೆಲ್ಲಿದಾಗ, ಸಂಜೆಯ ವಾತಾವರಣ ಬೀದಿಯ ಮೂಲೆಯಲ್ಲಿ ಒಂದು ಹಳೆಯ ಪೆಟ್ಟಿಗೆ ಅಂಗಡಿ. ಅಂಗಡಿಯ ಮೇಲ್ಭಾಗದಲ್ಲಿ ಒಂದು ಬೋರ್ಡ್ ನೇತುಹಾಕಿದೆ. ಅದರ ಮೇಲೆ 'ಇಂಡಿಯಾ ಟೈರ್ ವರ್ಕ್ಸ್' 'ಭಾರತ್ ಬೀಗ ರಿಪೇರಿ ಅಂಗಡಿ' ಎಂದು ತಪ್ಪು ತಪ್ಪಾಗಿ ಬರೆದಿದೆ. ಆ ಹಳೆಯ ಬೋರ್ಡು ಕೂಡಾ ಭದ್ರವಾಗಿಲ್ಲ. ಮೆಕ್ಕಾ ಮದೀನ ಚಿತ್ರಗಳಿರುವ ಹಳೆಯ ಕ್ಯಾಲೆಂಡರುಗಳನ್ನು ತೂಗು ಹಾಕಲಾಗಿದೆ. ಸಿನಿಮಾ ಪ್ರದರ್ಶನದ ಜಾಹಿರಾತಿರುವ ಬಿದಿರು ತಡಿಕೆಯೊಂದು ಅಂಗಡಿಯ ಪಕ್ಕದಲ್ಲಿರುತ್ತದೆ. ಅಂಗಡಿಯ ಮುಂಭಾಗದಲ್ಲಿ ಒಂದು ಕಡೆ ಹಳೆಯ ಟೈರುಗಳು, ಟ್ಯೂಬುಗಳು ಬಿದ್ದಿರುತ್ತವೆ. ಅಂಗಡಿ ಬಾಗಿಲು ರೆಕ್ಕೆಯ ಮೇಲೆ ಆಟೋ ವಾಹನಗಳ 'ನೇಮ್ ಪ್ಲೇಟ್' ಗಳನ್ನು ತೂಗು ಹಾಕಲಾಗಿದೆ. ಅಂಗಡಿಯ ದಾಲಬಂದ್ರಕ್ಕೆ ನಾಲ್ಕೈದು ಬೀಗಗಳು, 'ಬುಲ್ ಬುಲ್' ಪಕ್ಷಿ ಇರುವ ಪಂಜರ, ಊಟವಿರುವ ಬಟ್ಟೆಯ ಬುತ್ತಿ ತೂಗು ಹಾಕಲಾಗಿದೆ. ಅಂಗಡಿಯ ಮುಂಭಾಗದಲ್ಲಿ ನೀರು ತುಂಬಿದ ಹಳೆಯ 'ಟ್ಯಾಂಕು' ಬಿದ್ದಿರುತ್ತದೆ.

೨

ಈ ಹಿನ್ನೆಲೆಯಲ್ಲಿ ಸುಮಾರು ಹತ್ತು ಮತ್ತು ಇಪ್ಪತ್ತು ವರ್ಷದ ಇಬ್ಬರು ಕಾಣಿಸಿಕೊಳ್ಳುತ್ತಾರೆ. ಚಿಕ್ಕವನು ಮಾಸಿದ, ಹರಿದ ಚಡ್ಡಿ, ಷರಟನ್ನು ಹಾಕಿಕೊಂಡು ಅಂಗಡಿಯ ಮುಂದೆ, ಒಬ್ಬನೇ ಚಿನ್ನಿ—ದಾಂಡಲು ಆಟ ಆಡುತ್ತಿರುತ್ತಾನೆ. (ಅಥವಾ ಬಂಗ್ರದ ಆಟ ಆಡಬಹುದು). ಅವನು ಎಷ್ಟು ಸಲ ಪ್ರಯತ್ನಿಸಿದರೂ ದಾಂಡಿನ ಹೊಡೆತಕ್ಕೆ ಚಿನ್ನಿ ಸಿಕ್ಕುವುದಿಲ್ಲ. ಸಿಕ್ಕಿದರೂ ಸರಿಯಾಗಿ ತಾಕದೆ ಅಲ್ಲಿಯೇ ಬೀಳುತ್ತದೆ. ಅವನು ಆಟದಲ್ಲಿಯೇ ತನ್ಮಯನಾಗಿರುತ್ತಾನೆ. ದೊಡ್ಡವನು ಸೈಕಲ್ ಟೈರಿನಿಂದ ಟ್ಯೂಬನ್ನು ತೆಗೆಯುವುದರಲ್ಲಿ ಯಶಸ್ವಿಯಾಗುತ್ತಾನೆ. ಆ ಸಮಯಕ್ಕೆ ಸರಿಯಾಗಿ ಪಕ್ಕದಲ್ಲೇ ಇರುವ ಸ್ಕೂಲ್ ಬಿಟ್ಟ ದೀರ್ಘ ಬೆಲ್ ಆಗುತ್ತದೆ. ಹುಡುಗರ 'ಹೋ......' ಶಬ್ದ ಕೇಳುತ್ತದೆ. ದೊಡ್ಡವನು ಹರಿದ, ಕೊಳೆಯ ಪೈಜಾಮು ಮತ್ತು ಗುಂಡಿಯಿಲ್ಲದ ಉದ್ದನೆ, ದೊಗಳೆ ಷರಟು ಹಾಕಿಕೊಂಡಿರುತ್ತಾನೆ. ಕೆಲವು ವಿದ್ಯಾರ್ಥಿಗಳು ಪುಸ್ತಕಗಳನ್ನು ಹಿಡಿದುಕೊಂಡು ಅಂಗಡಿಯ ಮುಂದೆ ಹಾದು ಹೋಗುತ್ತಾರೆ. ದೊಡ್ಡವನು 'ಬೆಲ್' ಕೇಳಿದ ಕೂಡಲೇ, ತಾನು ತೆಗೆದಿದ್ದ ಸೈಕಲ್ ಟ್ಯೂಬನ್ನು ಹಿಡಿದುಕೊಂಡು ಬಂದು, ಆಟದಲ್ಲಿ ತನ್ಮಯನಾಗಿದ್ದ ತಮ್ಮನನ್ನು

ಎಚ್ಚರಿಸಿ, ಗದರಿಸುವಂತೆ ನೋಡಿ, ಟ್ಯೂಬನ್ನು ಕೊಟ್ಟು, ಚೆಕ್ ಮಾಡುವಂತೆ ತಿಳಿಸಿ, ತಾನು ಆಸ್ಪತ್ರೆಗೆ ಹೋಗಬೇಕೆಂದೂ, ಚೆಕ್ ಮಾಡುವುದು ಮುಗಿದ ಕೂಡಲೆ ಅಂಗಡಿಗೆ ಬೀಗ ಹಾಕಿಕೊಂಡು ಬರಬೇಕೆಂದೂ ಮೂಕ ಸನ್ನೆಯಲ್ಲಿ ತಿಳಿಸುತ್ತಾನೆ. ಚಿಕ್ಕವನು ಅಣ್ಣ ಕೊಟ್ಟ ಸೈಕಲ್ ಟ್ಯೂಬನ್ನು ಕೊರಳಿನಲ್ಲಿ ತೂಗಿಸಿಕೊಂಡು, ಮತ್ತೆ ತನ್ನ ಆಟದಲ್ಲಿ ತನ್ಮಯನಾಗುತ್ತಾನೆ. ದೊಡ್ಡವನು ಊಟದ ಬುತ್ತಿಯನ್ನು ತೆಗೆದುಕೊಂಡು, 'ಬುಲ್ ಬುಲ್' ಹಕ್ಕಿಗಳನ್ನು ಒಮ್ಮೆ ಮಾತನಾಡಿಸಿ ಹೊರಡುತ್ತಾನೆ. ತಮ್ಮ ಇನ್ನೂ ಆಟ ಆಡುತ್ತಿರುವುದನ್ನು ಗಮನಿಸಿ, 'ಥುತ್...ತುಮ್ಮಾರಿ...' ಎಂದು ಬೈದು ಅವನ ತಲೆಯ ಮೇಲೆ ಮೊಟಕಿ, ಅವನ ಕೈಯಲ್ಲಿದ್ದ ಚಿನ್ನಿ—ದಾಂಡಲನ್ನು ಕಿತ್ತು ದೂರ ಎಸೆಯುತ್ತಾನೆ. ಚಿಕ್ಕವನು ಆಟದ ತನ್ಮಯತೆಯಿಂದ ವಂಚಿತನಾಗಿ, ಸಿಡುಕಿನಿಂದ ಕಾಲುಗಳನ್ನು ನೆಲಕ್ಕೆ ಬಡಿಯುತ್ತಾ, ಸೈಕಲ್ ಟ್ಯೂಬಿಗೆ ಗಾಳಿ ಊದಲು ಮೊದಲು ಮಾಡುತ್ತಾನೆ. ದೊಡ್ಡವನು ಹೊರಡುತ್ತಾನೆ. ಮೂರು ನಾಲ್ಕು ಜನ ವಿದ್ಯಾರ್ಥಿನಿಯರು ಕ್ರಿಕೆಟ್ ಸಮವಸ್ತ್ರವನ್ನು ಧರಿಸಿ, ಬ್ಯಾಟು, ಬಾಲನ್ನು ಹಿಡಿದುಕೊಂಡು, ತಮ್ಮಲ್ಲಿಯೇ ಹರಟೆ ಹೊಡೆದುಕೊಂಡು ಹಾದು ಹೋಗುತ್ತಾರೆ. ಚಿಕ್ಕವನು ತನ್ನ ಕೆಲಸವನ್ನು ನಿಲ್ಲಿಸಿ, ಅವರು ಮರೆಯಾಗುವವರೆಗೂ ಅವರನ್ನೂ ಬಾಲು ಮತ್ತು ಬ್ಯಾಟುಗಳನ್ನು ಆಸೆ ತುಂಬಿದ ಕಣ್ಣುಗಳಿಂದ ನೋಡುತ್ತಾನೆ. ಮತ್ತೆ ಗಾಳಿ ತುಂಬಿದ ಟ್ಯೂಬಿನ ನೆಕ್ ಅನ್ನು ಅದುಮಿಕೊಂಡು ನೀರಿನ ಟ್ಯಾಂಕಿನಲ್ಲಿ ಅದನ್ನು ಅದ್ದಿ, ಪಂಕ್ಚರ್ ಆದ ಭಾಗಗಳನ್ನು ಪರೀಕ್ಷಿಸುತ್ತಾ, ಕೆಳಗೆ ಬಿದ್ದಿದ್ದ ಬೆಂಕಿಕಡ್ಡಿಗಳ ಸಹಾಯದಿಂದ ಅವುಗಳನ್ನು ಗುರುತು ಮಾಡುತ್ತಾನೆ.

೩

ಆ ವೇಳೆಗೆ ಸರಿಯಾಗಿ ಸ್ಕೂಟರ್ ಮೇಲೆ ಒಬ್ಬ ಯುವಕ ಬರುತ್ತಾನೆ. ಅತ್ಯಾಧುನಿಕ ರೀತಿಯಲ್ಲಿ ಅಲಂಕೃತನಾಗಿರುತ್ತಾನೆ. ಚಿಕ್ಕವನು ಸ್ಕೂಟರ್ ಬಂದಿದ್ದನ್ನು ನೋಡಿ, ಗುರುತು ಮಾಡಿದ ಟ್ಯೂಬನ್ನು ಅಂಗಡಿಯ ಒಳಕ್ಕೆ ಎಸೆಯುತ್ತಾನೆ. ಆ ಯುವಕ ವಾಹನಕ್ಕೆ 'ನೇಮ್ ಪ್ಲೇಟನ್ನು' ಹಾಕುವಂತೆ ಸೂಚಿಸಿ, ಅಣ್ಣ ಎಲ್ಲಿ ಹೋಗಿರುವನೆಂದು ಮೂಕಸನ್ನೆಯಲ್ಲಿ ಕೇಳುತ್ತಾನೆ. ಅಣ್ಣ ಆಸ್ಪತ್ರೆಗೆ ಹೋದನೆಂದು ಚಿಕ್ಕವನು ತಿಳಿಸಿ, ನೇಮ್ ಪ್ಲೇಟನ್ನು ತಂದು ವಾಹನಕ್ಕೆ ಜೋಡಿಸುತ್ತಾನೆ. ಆ ಸ್ಕೂಟರ್‌ಗೆ ದೂರಕ್ಕೆ ಕಾಣುವಂತೆ ಒಂದು ಹೆಸರನ್ನೂ ಅಂಟಿಸುತ್ತಾನೆ. ಯುವಕ ಈ ಸಮಯದಲ್ಲಿ ತನ್ನ ಮೀಸೆ, ಕ್ರಾಪು, ಬಟ್ಟೆಯನ್ನು ವಾಹನದ ಕನ್ನಡಿಯ ನೆರವಿನಿಂದ ಸರಿಮಾಡಿಕೊಳ್ಳುತ್ತಾನೆ. ಆ ಸಮಯಕ್ಕೆ ಯುವತಿಯೊಬ್ಬಳು ಹಾದು ಹೋಗುತ್ತಾಳೆ. ಅವಳನ್ನು ನೋಡಿ ಯುವಕ ಪ್ರಚಲಿತ ಸಿನಿಮಾ ಗೀತೆಯನ್ನು ವಿಷಲ್ ಮಾಡುತ್ತಾನೆ. ಅನಂತರ ಯುವಕ ತನ್ನ ಜೇಬಿನಿಂದ ಐದು ರೂಪಾಯಿಗಳನ್ನು ಕೊಡುತ್ತಾನೆ. ಚಿಕ್ಕವನು ಇನ್ನೂ ಬೇಕೆಂದು ಸನ್ನೆ

ಮಾಡುತ್ತಾನೆ. ಯುವಕ ಆಗುವುದಿಲ್ಲವೆಂದು ತಿಳಿಸಿ, ಸ್ಕೂಟರ್ ಸ್ಟಾರ್ಟ್ ಮಾಡುತ್ತಾನೆ. ಚಿಕ್ಕವನು ಯುವಕನಿಗೆ ದುಂಬಾಲು ಬಿದ್ದು ತನ್ನನ್ನು ಒಂದು ರೌಂಡ್ ಹೊಡೆಸುವಂತೆ ಬೇಡಿಕೊಳ್ಳುತ್ತಾನೆ. ಅದಕ್ಕೆ ಅವನು ಒಪ್ಪಿ, ಚಿಕ್ಕವನನ್ನು ಕೂಡಿಸಿಕೊಂಡು ಹೊರಡುತ್ತಾನೆ. ಅವನು ಅತ್ಯಂತ ಖುಷಿಯಿಂದ ಮಹಾರಾಜನ ರೀತಿಯಲ್ಲಿ ಕುಳಿತುಕೊಳ್ಳುತ್ತಾನೆ.

೪

ಇವರು ಹೋದ ಒಂದೆರಡು ಕ್ಷಣಗಳಲ್ಲಿ ಒಬ್ಬ ಯುವತಿ ಆಯಾಸದಿಂದ ಸೈಕಲನ್ನು ನೂಕಿಕೊಂಡು ಬರುತ್ತಾಳೆ. ಅದರ ಹಿಂದಿನ ಚಕ್ರವನ್ನು ಇಬ್ಬರು ಹುಡುಗರು ಎತ್ತಿಕೊಂಡು ಬರುತ್ತಾರೆ. ಆ ಯುವತಿ ಅಂಗಡಿಯ ಮುಂಭಾಗಕ್ಕೆ ಬಂದು ಸ್ಟ್ಯಾಂಡ್ ಹಾಕಿ ನಿಲ್ಲಿಸುತ್ತಾಳೆ. ಆ ಹುಡುಗರಿಗೆ 'Thank you very much' ಎಂದು ಹೇಳಿದ ಮೇಲೆ ಅವರು ಹೊರಡುತ್ತಾರೆ. ಯುವತಿ ಬೆವರನ್ನು ಕರವಸ್ತ್ರದಿಂದ ಒರೆಸಿಕೊಂಡು, ವಾಚನ್ನು ಒಮ್ಮೆ ನೋಡಿಕೊಂಡು, ಅಂಗಡಿಯ ಹುಡುಗನಿಗಾಗಿ ಹುಡುಕಾಡಿ, ಚಡಪಡಿಸಿ ನಿಟ್ಟುಸಿರು ಬಿಡುತ್ತಾಳೆ. ಆ ಸಮಯಕ್ಕೆ ಸ್ಕೂಟರ್ ಯುವಕ ಚಿಕ್ಕವನನ್ನು ಕರೆದುಕೊಂಡು ಬಂದು, ಯುವತಿ ಬೆಚ್ಚಿ ಬೀಳುವಂತೆ ಬ್ರೇಕ್ ಹಾಕಿ, ಆಕೆ ಗಾಬರಿಯಾಗಿದ್ದನ್ನು ಗಮನಿಸಿ, ಖುಷಿಪಟ್ಟು, ಒಮ್ಮೆ ಹಾರನ್ ಮಾಡಿ, ವಿಷಲ್ ಹಾಕಿಕೊಂಡು ಹೊರಡುತ್ತಾನೆ. ಚಿಕ್ಕವನು ಯುವತಿಯನ್ನು ಏನೆಂದು ಕೇಳುತ್ತಾನೆ. ಸೈಕಲ್ ಬೀಗ ಹಾಕಿಕೊಂಡಿದೆ, ಬೀಗದ ಕೈ ಕಳೆದು ಹೋಗಿದೆ ಎಂದು ಸನ್ನೆಯ ಮೂಲಕ ಯುವತಿ ತಿಳಿಸುತ್ತಾಳೆ. ಅವನು ತಕ್ಷಣ ಒಳಗೆ ಹೋಗಿ, ಒಂದು ಸಣ್ಣ ಕಂಬಿಯ ಕೊನೆಯನ್ನು ಸ್ವಲ್ಪ ತಟ್ಟಿ, ಸ್ವಲ್ಪ ಬಗ್ಗಿಸಿ, ಸೈಕಲ್ ಬೀಗಕ್ಕೆ ಹಾಕಿ ನಾಲ್ಕೈದು ಬಾರಿ ಪ್ರಯತ್ನ ಪಟ್ಟ ಮೇಲೆ ಬೀಗ ಬಿಚ್ಚಿಕೊಳ್ಳುತ್ತದೆ. ಅವನು ಹಿಂದಿನ ಸೈಕಲ್ ಚಕ್ರವನ್ನು ತಿರುಗಿಸುತ್ತಾನೆ. ತನ್ನ ಆಯುಧಗಳನ್ನು ಒಳಗಿಡುತ್ತಾನೆ. ಆ ಯುವತಿ ತನ್ನ ಚೀಲದಿಂದ ನಾಲ್ಕಾಣೆ ಎತ್ತಿ ಕೊಡುತ್ತಾಳೆ. ಚಿಕ್ಕವನು ಇನ್ನೂ ನಾಲ್ಕಾಣೆ ಬೇಕೆಂದು ಕೇಳಿ ಪಡೆದುಕೊಳ್ಳುತ್ತಾನೆ. ಮೊದಲು ಕೊಟ್ಟ ನಾಲ್ಕಾಣೆಯನ್ನು ಮೇಲಿನ ಜೇಬಿನಲ್ಲೂ, ಅನಂತರ ಕೊಟ್ಟ ನಾಲ್ಕಾಣೆಯನ್ನು ನಿಕ್ಕರಿನ ಒಳಜೇಬಿನಲ್ಲೂ ಹಾಕಿಕೊಳ್ಳುತ್ತಾನೆ. ಆಮೇಲೆ ಸೈಕಲ್ ಟ್ಯೂಬ್ ಎತ್ತಿಕೊಂಡು ಪಂಕ್ಚರ್ ಹಾಕಲು ಸಿದ್ಧಪಡಿಸಿಕೊಳ್ಳುತ್ತಾನೆ.

೫

'ಚಾ...ಚಾ'...ಎಂದು ಕೂಗಿಕೊಂಡು ಕೈ ಚಾದಂಗಡಿಯವನು (ಕಾಕಾ) ಬರುತ್ತಾನೆ. ಅವನು ಒಂದು ಕೈಯಲ್ಲಿ ನೀರಿರುವ ಬಕೀಟನ್ನೂ, ಇನ್ನೊಂದು ಕೈಯಲ್ಲಿ ಅಗ್ಗಿಷ್ಟಿಕೆ ಇರುವ ಟೀ ಪಾತ್ರೆಯನ್ನೂ ತೂಗಾಡಿಸಿಕೊಂಡು ಬರುತ್ತಾನೆ.

ಅವನು ಗೆರೆಗೆರೆ ಷರಟು ಮತ್ತು ಬಣ್ಣ ಬಣ್ಣದ ಲುಂಗಿ ಉಟ್ಟುಕೊಂಡಿರುತ್ತಾನೆ. ತಲೆಗೊಂದು ಟವಲನ್ನು ಸುತ್ತಿಕೊಂಡಿರುತ್ತಾನೆ. ಚಿಕ್ಕ ಹುಡುಗ ಕೈ ತಟ್ಟಿ ಕಾಕನನ್ನು ಕರೆದು ಟೀ ಕೊಡುವಂತೆ ಹೇಳುತ್ತಾನೆ. ಅವನು ಚಿಕ್ಕವನಿಗೆ ಟೀ ಕೊಟ್ಟು, ಬೀಡಿಯಿಂದ ದಂ ಎಳೆಯುತ್ತಾ ಕುಕ್ಕರಗಾಲಿನಲ್ಲಿ ಕೂಡುತ್ತಾನೆ. ಚಿಕ್ಕವನು ಟೀ ಕುಡಿದ ಲೋಟವನ್ನು ಹಿಂತಿರುಗಿಸುತ್ತಾನೆ. ಅವನು ಅದನ್ನು ಬಕೀಟಿನ ನೀರಿನಲ್ಲಿ ಗಲಬರಿಸಿ, ತೊಳೆದು ಲೋಟವನ್ನು ಅದರಲ್ಲಿಯೇ ಹಾಕುತ್ತಾನೆ. ಚಿಕ್ಕವನು ಕಾಕನಿಗೆ ನಾಲ್ಕಾಣೆಯನ್ನು ನಿಕ್ಕರಿನ ಒಳಜೇಬಿನಿಂದ ತೆಗೆದುಕೊಡುತ್ತಾನೆ. ಅವನು ಅದನ್ನು ನಡುವಿನಲ್ಲಿ ಸಿಕ್ಕಿಸಿ 'ಚಾ...ಚಾ...' ಎಂದು ಕೂಗುತ್ತಾ ಹೊರಡುತ್ತಾನೆ.

೬

ಚಿಕ್ಕವನು ಮತ್ತೆ ಕೆಲಸಕ್ಕೆ ಕೂಡುವಷ್ಟರಲ್ಲಿ ಒಂದು Foot-ball ನೆಗೆದು ಕೊಂಡು ಬಂದು ಇವನ ಅಂಗಡಿಯ ಹತ್ತಿರ ಬೀಳುತ್ತದೆ. ಚಿಕ್ಕವನು ಅದನ್ನು ಕೈಗೆ ತೆಗೆದುಕೊಂಡು, ಪ್ರೀತಿಯಿಂದ ನೋಡಿ, ಪುಟವೇಳಿಸುತ್ತಾನೆ. ಆ ಹೊತ್ತಿಗೆ ಸಮವಸ್ತ್ರ ಧರಿಸಿದ ಒಬ್ಬ ಆಟಗಾರ ಇವನ ಮೇಲೆ ಎರಗಿ ಬಂದು ಚೆಂಡನ್ನು ಬಲ ವಂತವಾಗಿ ಕಿತ್ತುಕೊಂಡು ಹೋಗುತ್ತಾನೆ. ಚಿಕ್ಕವನು ಅತ್ತಕಡೆಯೇ ನೋಡುತ್ತಾ ಅಂಗಡಿಯ ಒಳಗೆ ಹೋಗಿ 'ಬುಲ್ ಬುಲ್' ಪಂಜರವನ್ನು ಒಮ್ಮೆ ತಿರುಗಿಸಿ, ತನ್ನ ಕೆಲಸಕ್ಕೆ ಬಂದು ಕೂಡುತ್ತಾನೆ. ಏನನ್ನೋ ಜ್ಞಾಪಿಸಿಕೊಂಡವನಂತೆ ಥಟ್ಟನೆ ಎದ್ದು ಅಂಗಡಿಯ ಬೀಗದ ಕೈ ಹುಡುಕುತ್ತಾನೆ. ಅದು ಸಿಕ್ಕುವುದಿಲ್ಲ. ನೇತುಹಾಕಿದ್ದ ಬೀಗದ ಕೈ ಗೊಂಚಲಿಂದ ಒಂದು ಬೀಗದ ಕೈಯನ್ನು ತೆಗೆದು ಅರದಿಂದ ಅದನ್ನು ಉಜ್ಜಲು ಪ್ರಾರಂಭಿಸುತ್ತಾನೆ. ಆ ಸಮಯಕ್ಕೆ ಸರಿಯಾಗಿ ಒಬ್ಬ ಪೋಲೀಸ್ ಪೇದೆ ಬೀಡಿ ಸೇದುತ್ತ ಬರುತ್ತಾನೆ. ಅವನು ಒಮ್ಮೆ ಸುತ್ತಲೂ ನೋಡಿ, ಅಂಗಡಿಯನ್ನು ಎತ್ತುವಂತೆ ಚಿಕ್ಕವನಿಗೆ ಹೇಳುತ್ತಾನೆ. ಬೂಟ್ಸ್ ಕಾಲಿನಿಂದ ರಾಶಿ ಹಾಕಿದ್ದ ಟೈರುಗಳನ್ನು ಒದೆಯುತ್ತಾನೆ. ಚಿಕ್ಕವನು ಬೇಸರದಿಂದ ಮೇಲೆದ್ದು, ಅನಂತರ ಪೋಲೀಸಿನವನ ಮನ ಒಲಿಸುವ ರೀತಿಯಲ್ಲಿ ಪಕ್ಕಕ್ಕೆ ಕರೆದುಕೊಂಡು ಹೋಗಿ ಚಿಲ್ಲರೆಯನ್ನು ಕೈಗಿಟ್ಟು ವ್ಯಾಪಾರವಿಲ್ಲವೆಂದು, ಸನ್ನೆಯ ಮೂಲಕ ತಿಳಿಸುತ್ತಾನೆ. ಪೋಲೀಸಿನವನು ಚಿಲ್ಲರೆಯನ್ನು ಜೇಬಿಗೆ ಹಾಕಿಕೊಂಡು ಸುತ್ತ ನೋಡುತ್ತ ಕೃತಕನಗೆ ನಕ್ಕು ಮರೆಯಾಗುತ್ತಾನೆ. ಚಿಕ್ಕವನು ಮತ್ತೆ ತನ್ನ ಕೆಲಸದಲ್ಲಿ ತೊಡಗುತ್ತಾನೆ.

೭

ಆ ಹೊತ್ತಿಗೆ ವಯಸ್ಸಾದ, ಕಚ್ಚೆಪಂಚೆ ಉಟ್ಟ, ಯಜಮಾನರು ಕುಂಟುತ್ತಾ ಬಂದು ಮುಚ್ಚಿದ ಕೊಡೆಯನ್ನು ಚಿಕ್ಕವನ ಕೈಗೆ ಕೊಡುತ್ತಾರೆ. ಅದನ್ನು ತೆಗೆಯುವು ದಕ್ಕೆ ಆಗುವುದಿಲ್ಲವೆಂದು ತಿಳಿಸುತ್ತಾರೆ. ಚಿಕ್ಕವನು ಅದನ್ನು ಪರೀಕ್ಷಿಸಿ ಒಂದು

ಪಟಕಾರಿ (cutting-player) ತಂದು, ಮೊಣಕಾಲಿನ ಮಧ್ಯೆ ಕೊಡೆಯನ್ನು ಇಟ್ಟುಕೊಂಡು ಅದನ್ನು ಸರಿಮಾಡುತ್ತಾನೆ. ಅದು ಸರಿಹೋದ ಮೇಲೆ ಕೊಡೆಯನ್ನು ಒಂದೆರಡು ಬಾರಿ ಮುಚ್ಚಿ ತೆಗೆದು, ಸರಿಯಾಗಿದೆ ಎಂದು ಖಚಿತವಾದ ಮೇಲೆ ಅದನ್ನು ಒಮ್ಮೆ ಗಿರ್ರನೆ ತಿರುಗಿಸಿ ತೃಪ್ತಿಯಿಂದ ಯಜಮಾನರ ಕೈಗೆ ಕೊಡುತ್ತಾನೆ. ಅದಕ್ಕೆ ಅವರು ನಾಲ್ಕಾಣೆ ಕೊಡುತ್ತಾರೆ. ಅದನ್ನು ಮತ್ತೆ ಅವರ ಕೈಯಲ್ಲಿ ಇಟ್ಟು ಎಂಟಾಣೆ ಕೊಡುವಂತೆ ಕೇಳುತ್ತಾನೆ. ಅವರು ಆಗುವುದಿಲ್ಲವೆಂದು ಹೇಳಿ, ಕೊನೆಗೆ ಗೊಣಗುತ್ತಾ, ಎಂಟಾಣೆ ಕೊಡುತ್ತಾರೆ ಚಿಕ್ಕವನು ನಾಲ್ಕಾಣೆಯನ್ನು ಮೇಲಿನ ಜೇಬಿಗೂ, ನಾಲ್ಕಾಣೆಯನ್ನು ನಿಕ್ಕರಿನ ಜೇಬಿಗೂ ಹಾಕಿಕೊಳ್ಳುತ್ತಾನೆ. ಯಜಮಾನರು ಕೊಡೆಯನ್ನು ಪರೀಕ್ಷಿಸಿ, ಸರಿಯಾಗಿದೆ ಎಂದು ಖಚಿತಪಡಿಸಿಕೊಂಡು ಕುಂಟುತ್ತಾ ಹೋಗುತ್ತಾರೆ. ಚಿಕ್ಕವನು ಮೊದಲು ಅವರಿಗೆ ಒಂದು ಸಲಾಂ ಹೊಡೆದು, ಅವರಿಗೆ ಕಾಣದಂತೆ ಅವರನ್ನು ಅಣಕಿಸುವ ರೀತಿಯಲ್ಲಿ ಕುಂಟುತ್ತಾ ಅಷ್ಟುದೂರ ಹೋಗಿ ಹಿಂತಿರುಗುತ್ತಾನೆ. 'ಬುಲ್ ಬುಲ್' ಹಕ್ಕಿಗಳಿಗೆ ಕಾಳು ತಿನ್ನಿಸುತ್ತಾನೆ. ಟೈರ್‌ಚಕ್ರದೊಂದಿಗೆ ಆಟವಾಡುತ್ತಾನೆ. ತಟ್ಟನೆ ಜ್ಞಾಪಿಸಿ ಕೊಂಡವನಂತೆ ಅದನ್ನು ಅಲ್ಲೇ ಹಾಕಿ, ಅಂಗಡಿಯ ಬಾಗಿಲನ್ನು ಅರ್ಧ ಮುಚ್ಚಿ, ಹಳೆಯ ಟೈರುಗಳನ್ನು ಎತ್ತಿಡುವುದರಲ್ಲಿ ನಿರತನಾಗುತ್ತಾನೆ.

೮

ಅಷ್ಟರಲ್ಲೇ ಒಬ್ಬ ಪಾದ್ರಿ ಆತುರಾತುರವಾಗಿ ಬರುತ್ತಾನೆ. ತಾನು ತಂದ 'ಸೂಟ್ ಕೇಸ್'ನ ಬೀಗ ತೆಗೆಯುವಂತೆ ಸೂಚಿಸುತ್ತಾನೆ. ಚಿಕ್ಕವನು ಬೇಜಾರಿನಿಂದ ಒಮ್ಮೆ ಆಕಳಿಸಿ, ನಿಧಾನವಾಗಿ ಚಾಣ, ಸುತ್ತಿಗೆ, ಕಂಬಿ, ಬೀಗದ ಕೈ ಗೊಂಚಲನ್ನು ಅಂಗಡಿಯಿಂದ ತೆಗೆದುಕೊಂಡು ಬರುತ್ತಾನೆ. ಪಾದ್ರಿ ಒಮ್ಮೆ ಸುತ್ತಾ ನೋಡಿ, ಬೇಗ ಬೇಗ ಬೀಗ ತೆಗೆಯುವಂತೆ ಹೇಳುತ್ತಾನೆ. ಚಿಕ್ಕ ಹುಡುಗ ಸಾವಧಾನವಾಗಿ ಬೀಗದ ಕೈ ಗೊಂಚಲಿನ ಬೀಗದ ಕೈಗಳನ್ನು ಪರೀಕ್ಷಿಸಿ, ಒಮ್ಮೆ 'ಸೂಟ್ ಕೇಸ್' ಅನ್ನು ಪರೀಕ್ಷಿಸಿ, ಬೀಗದ ಕೈಗಳಲ್ಲಿ ಒಂದನ್ನು ಆರಿಸಿ, ಅದನ್ನು ಸ್ವಲ್ಪ ಉಜ್ಜಿ ಒಂದೆರಡು ಏಟು ತಟ್ಟಿ ಸ್ವಲ್ಪ ಬಲ ಪ್ರಯೋಗದಿಂದ 'ಸೂಟ್ ಕೇಸ್' ಗೆ ಹಾಕಿ ತಿರುವುತ್ತಾನೆ. 'ಸೂಟ್ ಕೇಸ್' ದಿಢೀರನೆ ಬಿಚ್ಚಿಕೊಳ್ಳುತ್ತದೆ. ಅದರಿಂದ ವಿದೇಶಿ ಮದ್ಯದ ಒಂದೆರಡು ಬಾಟಲುಗಳು ಉರುಳುತ್ತವೆ. ಚಿಕ್ಕವನು ಒಂದನ್ನು ಎತ್ತಿಕೊಂಡು ಕುತೂಹಲದಿಂದ ನೋಡುತ್ತಾನೆ. ಪಾದ್ರಿ ತಟಕ್ಕನೆ ಅವನಿಂದ ಬಾಟಲನ್ನು ಕಿತ್ತುಕೊಂಡು 'ಸೂಟ್ ಕೇಸ್'ನಲ್ಲಿ ಸೇರಿಸುತ್ತಾನೆ. ಅನಂತರ ಚಿಕ್ಕವನು ಹಾಕಿದ್ದ ಬೀಗದ ಕೈಯನ್ನು ಒಂದೆರಡು ಬಾರಿ ಪರೀಕ್ಷಿಸುತ್ತಾನೆ. ಸಮಾಧಾನವಾಗುತ್ತದೆ. ರಿಪೇರಿ ಹಣ ಎಷ್ಟೆಂದು ಕೇಳುತ್ತಾನೆ. ಚಿಕ್ಕವನು ಒಂದು ರೂಪಾಯಿ ಎಂದು ಹೇಳುತ್ತಾನೆ. ಆದರೆ ಪಾದ್ರಿ ಒಂದೊಂದು ರೂಪಾಯಿನ ಎರಡು ನೋಟುಗಳನ್ನು ಕೊಡುತ್ತಾನೆ. ಚಿಕ್ಕವನು ಅದರಲ್ಲಿ ಒಂದನ್ನು ಮೇಲಿನ ಅಂಗಿಯ

ಜೇಬಿನಲ್ಲೂ, ಇನ್ನೊಂದನ್ನು ನಿಕ್ಕರಿನ ಜೇಬಿನಲ್ಲೂ ಇಟ್ಟುಕೊಳ್ಳುತ್ತಾನೆ. ಪಾದ್ರಿ ಹೋಗುವಾಗ 'ಬುಲ್ ಬುಲ್' ಹಕ್ಕಿಗಳ ಬಳಿಗೆ ಹೋಗಿ, ಅವನ್ನು ಮಾತನಾಡಿಸಿ ಹೊರಡುತ್ತಾನೆ. ಪಾದ್ರಿ ಅಷ್ಟು ದೂರ ಹೋಗಿ ಏನೋ ಜ್ಞಾಪಿಸಿಕೊಂಡು ವಾಪಸ್ ಬಂದು ಚಿಕ್ಕವನಿಗೆ ಒಂದೆರಡು ಚಾಕಲೇಟುಗಳನ್ನೂ, ಒಂದು ಪುಸ್ತಕವನ್ನೂ ಕೊಡುತ್ತಾನೆ. ಚಿಕ್ಕವನು ಕೃತಜ್ಞತೆಯ ಸಲಾಂ ಮಾಡಲು, ಪಾದ್ರಿ ಟಾ-ಟಾ ಹೇಳಿ ಹೊರಡುತ್ತಾನೆ.

೯

ಚಿಕ್ಕವನು ಒಂದೆರಡು ಚಾಕಲೇಟುಗಳನ್ನು ಬಾಯಿಗೆ ಹಾಕಿಕೊಂಡು, ಪಾದ್ರಿ ಕೊಟ್ಟ ಪುಸ್ತಕವನ್ನು ಸುಮ್ಮನೆ ತಿರುವಿ ಹಾಕುತ್ತಾನೆ. ಏನೂ ಅರ್ಥವಾದಂತೆ ಕಾಣಿಸುವುದಿಲ್ಲ. ಅದನ್ನು ಮೇಲಕ್ಕೆ ಎಸೆದು 'ಬುಲ್ ಬುಲ್' ಹಕ್ಕಿಗಳಿಗೂ ಚಾಕಲೇಟನ್ನು ಮುರಿದು ಮುರಿದು ಹಾಕುತ್ತಾನೆ. ಹಿನ್ನೆಲೆಯಲ್ಲಿ ಸೈರನ್ ಶಬ್ದ ಕೇಳಿಬರುತ್ತದೆ. ಚಿಕ್ಕವನು ಅಂಗಡಿಯ ಸಾಮಾನುಗಳನ್ನು ಎತ್ತಿಡುವ ಕಾರ್ಯದಲ್ಲಿ ನಿರತನಾಗುತ್ತಾನೆ. ಏನೋ ಹೊಳೆದಂತಾಗಿ, ಪಂಕ್ಚರ್ ಆದ ಸೈಕಲ್ ಟ್ಯೂಬಿಗೆ ಗಾಳಿ ತುಂಬಿ, ಅದಕ್ಕೆ ಸಿಕ್ಕಿದ ಬಿದಿರಿನ ನಳಿಗೆಯನ್ನು ಸಿಕ್ಕಿಸುತ್ತಾನೆ. ಅದು 'ಪೀ...' ಶಬ್ದ ಮಾಡಲು ಖುಷಿ ಪಡುತ್ತಾನೆ. ಹಿನ್ನೆಲೆಯಲ್ಲಿ ನಿಧಾನವಾಗಿ, ಮಸೀದಿಯ ಸಂಜೆಯ ನಮಾಜಿನ ಶಬ್ದ ಮೂಡಿಬರುತ್ತದೆ. ಚಿಕ್ಕವನು 'ಬುಲ್ ಬುಲ್' ಹಕ್ಕಿಗಳ ಪಂಜರವನ್ನು ಎತ್ತಿಕೊಂಡು ನೋಡುತ್ತಿರುತ್ತಾನೆ.

೧೦

ಹಿನ್ನೆಲೆಯಲ್ಲಿ 'ಅಕ್ಬರ್...ಅಕ್ಬರ್' ಎನ್ನುವ ಶಬ್ದ ಬರುಬರುತ್ತಾ ಹೆಚ್ಚಿ ದೊಡ್ಡವನು ಓಡಿಬಂದು ಅಳುತ್ತಾ ಕಾಣಿಸಿಕೊಳ್ಳುತ್ತಾನೆ. ಅವನ ಮುಖದಲ್ಲಿ ಹೊಣೆಗಾರಿಕೆ, ಗಾಬರಿ, ದುಃಖ, ಭಯ ಆವರಿಸಿರುತ್ತದೆ. ಚಿಕ್ಕವನಿಗೆ ದೊಡ್ಡವನ ಕೂಗು ಕೇಳಿಸಿರುವುದಿಲ್ಲ. 'ಬುಲ್ ಬುಲ್' ಹಕ್ಕಿಗಳ ಜೊತೆಗೆ ಆಟವನ್ನು ಮುಂದುವರಿಸಿರುತ್ತಾನೆ. ದೊಡ್ಡವನು ಚಿಕ್ಕವನನ್ನು ಸೆಳೆದು, ತಂದೆ ಆಸ್ಪತ್ರೆಯಲ್ಲಿ ತೀರಿಹೋದರು ಎಂದು ಸನ್ನೆ ಮಾಡಿ ತಿಳಿಸುತ್ತಾನೆ. ಚಿಕ್ಕವನು ಪಂಜರವನ್ನು ಕೆಳಗೆ ಬಿಟ್ಟು ಅಸಹಾಯಕತೆಯಿಂದ ಅಳುತ್ತಾನೆ. ದೊಡ್ಡವನು ಅಂಗಡಿಯನ್ನು ಮುಚ್ಚಿ, ಚಿಕ್ಕವನನ್ನು ತಬ್ಬಿಕೊಂಡು ನಿಧಾನವಾಗಿ ಕರೆದೊಯ್ಯುತ್ತಾನೆ. ಬೆಳಕು ಕೊನೆಯಲ್ಲಿ ಅಂಗಡಿಯ ಹೆಸರಿನ ಮೇಲೆ, 'ಬುಲ್ ಬುಲ್' ಪಂಜರದ ಮೇಲೆ ಕೇಂದ್ರೀಕೃತವಾಗಿ, ಕ್ಷೀಣಿಸುತ್ತದೆ. ಹಿನ್ನೆಲೆಯ ನಮಾಜಿನ ಧ್ವನಿಯೂ ಕ್ಷೀಣಿಸುತ್ತದೆ.

— ತೆರೆ —

## ಪಾತ್ರಗಳು

೧ ನೇ ಗೊಂಬೆ

೨ ನೇ ಗೊಂಬೆ

೩ ನೇ ಗೊಂಬೆ

೪ ನೇ ಗೊಂಬೆ

೫ ನೇ ಗೊಂಬೆ

೬ ನೇ ಗೊಂಬೆ

೭ ನೇ ಗೊಂಬೆ

ಖಂಬೀರ ಕುಮಾರ

ಸಾರಥಿ

ದೋಣಿಯವನು

ಬೈರಾಗಿ

ಚನ್ನ

# ಮುಂದೇನ ಸಖಿ? ಮುಂದೇನ?

(ರಂಗಸ್ಥಳದಲ್ಲಿ ಪಡದೆಯ ಮುಂದೆ ಸಾಲಾಗಿ ಏಳು ಗೊಂಬೆಗಳು. ರಂಗಸ್ಥಳದ ಉಳಿದ ಭಾಗ ಕತ್ತಲೆಯಲ್ಲಿ)

೧ ನೇ ಗೊಂಬೆ: ಹೇಳ ಗೆಳತಿ, ಹೇಳ ಗೆಳತಿ, ಇಲ್ಲೆ ಮಲಗಿರೋ ಹುಡುಗನ ಕಥೀ ಏನs ಐತಿ?

೨ ನೇ ಗೊಂಬೆ: ಕೇಳ ಯವ್ವಾ ಕೇಳ. ಹುಡುಗಾ ಖಂಬೀರಾ. ಹಾದಿ ತಪ್ಯಾನು. ಅವನ ಬಾಳಿನ ಒಗಟಾ ಭಾಳಾ ಕಠೀಣ ಐತಿ.

೩. ನೇ ಗೊಂಬೆ: ಅಂವಂದೊಂದೂರು. ಊರಾಗ ಒಂದು ಮನಿ. ಮನ್ಯಾಗ ಒಬ್ಬ ಅಪ್ಪಾ.

೪ ನೇ ಗೊಂಬೆ: ಅಂವಂದೊಂದೂರು. ಊರಾಗ ಒಂದ ಮನೀ. ಮನೀ ಮುಂದ ಒಂದೆ ಬೇವಿನ ಗಿಡಾ.

೫ ನೇ ಗೊಂಬೆ: ಅಪ್ಪಾ ಆಡಲಾಕ ಒಂದ ಕಟಗಿ ಕುದರೀ ಕೊಡಸಲಿಲ್ಲಾ ಅಂತ ಖಂಬೀರ ಕುಮಾರಾ ಆ ಗಿಡಾನs ತನ್ನ ಕುದರೀ ಮಾಡಿಕೊಂಡಾ. ಏನೂ?

(ಎಲ್ಲಾ ಗೊಂಬೆಗಳೂ chorus ನಲ್ಲಿ ರಾಗವಾಗಿ ಹೇಳುವವು)

ಖಂಬೀರ ಕುಮಾರ ಗಿಡಾನ ತನ್ನ ಕುದರೀ ಮಾಡಿಕೊಂಡಾ
ಆ ಖಂಬೀರ ಕುಮಾರ ಗಿಡಾನ ತನ್ನ ಕುದರೀ ಮಾಡಿಕೊಂಡಾ

೬ ನೇ ಗೊಂಬೆ: ಅವಂದೊಂದೂರು. ಊರ ಹೊರಗ ಒಂದ ಕೆರಿ. ಕೆರೀ ಸುತ್ತಲೂ ವಂಡಿ. ವಂಡೀ ತುಂಬೆಲ್ಲಾ ಕಳ್ಳೀ ಕಂಟಿ.

೭ ನೇ ಗೊಂಬೆ: ಖಂಬೀರ ಕುಮಾರಾ ಕಳ್ಳೀಕಂಟೀ ಸೈನ್ಯಾ ಮಾಡಿಕೊಂಡಾ ಕೆರೀ ಒಂಡೀನ ತನ್ನ ರಾಜ್ಯಾ ಮಾಡಿಕೊಂಡಾ. ಏನೂ?

(ಎಲ್ಲಾ ಗೊಂಬೆಗಳೂ chorus ನಲ್ಲಿ ರಾಗವಾಗಿ)

ಖಂಬೀರ ಕುಮಾರಾ ರಾಜ್ಯಾ ಮಾಡಿಕೊಂಡಾ
ಭಲೇ, ಸೈನ್ಯಾ ಮಾಡಿಕೊಂಡಾ.

೭ ನೇ ಗೊಂಬೆ: ಅಂವಂದೊಂದೂರು. ಊರಾಗ ಒಂದ ಮನಿ. ಮನ್ಯಾಗ ಒಬ್ಬ ಅಜ್ಜಿ. ಆ ಅಜ್ಜೀದು ಒಂದ ತಲಿ. ಆಕೀ ತಲೀ ತುಂಬಾ ಕಥೀ. ಆಕೀ ಕಥೀ ತುಂಬಾ ರಾಕ್ಷಸರು.

೪ ನೇ ಗೊಂಬೆ: ಖಂಬೀರಾ ತನ್ನ ಕುದರೀ ಹತ್ತಿದ್ದs ಹತ್ತಿದ್ದೂ. ರಾಕ್ಷಸರನ ಕೊಂದದ್ದs ಕೊಂದದ್ದು, ಹಿಂಗಾಗಿ, ಕಡೀಕ ಖಂಬೀರಾ ಕುದರೀ ಬಿಟ್ಟು ಇಳೀಲಾರದ್ಹಂಗಾದಾ. ಏನೂ?

(ಎಲ್ಲಾ ಗೊಂಬೆಗಳೂ chorus ನಲ್ಲಿ ರಾಗವಾಗಿ)

ಖಂಬೀರ ಕುಮಾರಾ ಕುದರೀ ಬಿಟ್ಟು ಇಳೀಧಂಗಾದಾ

ಅಯ್ಯೋ ಇಳೀಧಂಗಾದಾ. ಅಯ್ಯಯ್ಯೋ, ಇಳೀಧಂಗಾದಾ.

೪ ನೇ ಗೊಂಬೆ: ಶುಶ್! ಸುಮ್ಮನಿರ್ರಿ. ಹೊಯ್ಕೋಬ್ಯಾಡ್ರಿ. ಮುಂದ ಭಾಳಾ ಮಜಾ ಅದ. ಹಿಂಗ ಹದಿನಾರು ಸಂವತ್ಸರ ದಾಟಿಲಾಗಿ ಖಂಬೀರ ಕುಮಾರಗ ಯೌವನ ಬಂತು. ಆವಾಗ,

(ಎಲ್ಲಾ ಗೊಂಬೆಗಳು ಅದರ ಸುತ್ತ ಗುಂಪುಗೂಡುವವು)

ಒಂದ ದಿವಸ ಖಂಬೀರ ಕುಮಾರ ಕೆರೀ ದಂಡ್ಯಾಗ ಕುತ್ತಾಗ ಅಲ್ಲೆ ಸ್ನಾನಾ ಮಾಡ್ತಿರೋ ಒಬ್ಬ ಗಂಡ ಹುಡುಗನ್ನ ನೋಡ್ದಾ. ಅವನ ರೂಪಾ, ಒಯಸ್ಸು ಬಣ್ಣಾ ನೋಡಿ ಖಂಬೀರಗ ಅವನ ಮ್ಯಾಲೆ ಮೋಹ ಹುಟ್ಟಿತು. ಕಥೀ ರಾಕ್ಷಸರನ ಬಿಟ್ಟು ಅವನ ಕಡೀ ಬಂದಾ. ಕೇಳಿದಾ. 'ಹುಡಗಾ, ಹುಡಗಾ, ನನ್ನ ಮದುವ್ಯಾಗು' ಅಂತ. ಹುಡುಗ ಅಂದಾ 'ಛೇ ಹುಚ್ಚಪ್ಪಾ. ಇದು ಸಾಧ್ಯ ಇಲ್ಲಾ' ಅಂತ. ಅದಕ್ಕ ಖಂಬೀರ ಅಂದಾ 'ಇಲ್ಲಾ, ನಾ ನಿನ್ನ ಮ್ಯಾಲೇ ಜೀವಾ ಇಟ್ಟ ಗೊಂಡೇನಿ' ಅಂತ. ಕಡೀಕ,

(ಎಲ್ಲಾ ಗೊಂಬೆಗಳು ಆತುರದಿಂದ—ಹೂಂ.)

ಆ ಹುಡುಗಾ ಒಂದ ಶರ್ಯತ್ತು ಇಟ್ಟಾ.

(ಎಲ್ಲಾ ಗೊಂಬೆಗಳು—ಏನಂತ?)

೪ ನೇ ಗೊಂಬೆ: ಶುಶ್! ನಡಕ ಮಾತಾಡಬ್ಯಾಡ್ರಿ. ಏನಂದ್ರ

(ಎಲ್ಲಾ ಗೊಂಬೆಗಳು ಕಿವಿಗೆ ಕೈ ಹಚ್ಚಿಕೊಂಡು ತುಂಬ Tensionಲ್ಲಿ ಮೌನವಾಗಿ ನಿಲ್ಲುತ್ತವೆ).

೪ ನೇ ಗೊಂಬೆ: (ತಗ್ಗಿದ ಧ್ವನಿಯಲ್ಲಿ) 'ಒಂದು ಬಕೀಟು ತುಂಬಾ ಬಿಸಿಬಿಸಿ ಕುದಿಯೋ ನೀರು ತಕ್ಕೊಂಡು, ಅದರಾಗ ಒಂದು ಅಡಿಕೀ ಬೆಟ್ಟದ ಗಾತ್ರದ ಆಣೀ ಕಲ್ಲು (ಆಲಿಕಲ್ಲು) ಹಾಕೋದು. ಅದು ಕರಗೀದ್ರ ಮಾತ್ರ ನಾ ನಿನ್ನ ಮದುವಿ ಆಗೊಂವಾ' ಅಂತ.

(ಇಷ್ಟು ಹೇಳುತ್ತ, ತಕ್ಷಣ ಸುಮ್ಮನಾಗಿ ಬಿಡುವದು. ಎಲ್ಲಾ ಗೊಂಬೆಗಳೂ Explode ಆದಂತೆ)

—ಏ ಗೆಳತೀ, ಕಲ್ಲು ಕರಗಿತೋ ಇಲ್ಲೋ? ಅವರು ಮದುವ್ಯಾದರೋ ಇಲ್ಲೋ? ಮುಂದೇನಾತು? ಹೇಳೀ ಯವ್ವಾ ಹಿಂಗ್ಯಾಕ ಅರ್ಧಾಕ್ಕ ಬಿಟ್ಟು ನಮ್ಮ ಜೀವಾ ತಗೀತಿ?

೧ ನೇ ಗೊಂಬೆ: ಶುಶ್! ಸುಮ್ಮನಾಗ್ರಿ. ಅಂವಗ ಎಚ್ಚರಾಧಂಗ ಕಾಣಸ್ತದ.

(ಎಲ್ಲಾ ಗೊಂಬೆಗಳೂ ತಮ್ಮ ಮೊದಲಿನ ಸ್ಥಳಕ್ಕೆ ಧಾವಿಸಿ ಪ್ರತಿಮೆಗಳಂತೆ ನಿಂತುಬಿಡುವವು. ಸಾವಕಾಶವಾಗಿ Lightಉ ಗೊಂಬೆಗಳಿಂದ ಮುಂದಕ್ಕೆ ಬರುವದು. ಈಗ ಗೊಂಬೆಗಳು ಪೂರ್ತಿ ಕತ್ತಲಿನಲ್ಲಿ. Lightನ ಬೆಳಕಿನಲ್ಲಿ ರಥದ ಸೆಟ್ಟಿಂಗ. ಮೇಲ್ಭಾಗ ಮಾತ್ರ. ಗಾಲಿಗಳನ್ನು ತೋರಿಸುವ ಅವಶ್ಯಕತೆಯಿಲ್ಲ. ಕುದುರೆ ಗಾಡಿ ಓಡುತ್ತಿರುವಂತೆ ಹಿನ್ನೆಲೆ ಸಂಗೀತ. ಸಾರಥಿ ಕಾಣಿಸುತ್ತಿರುವನು. ಕ್ರಮೇಣ ಹಿಂದಿನ ಆಸನದಲ್ಲಿ ಮಲಗಿದ್ದ ಖಂಬೀರ ಕುಮಾರ ಎದ್ದು ಕುಳಿತುಕೊಳ್ಳುವನು. ಕೈಗಳನ್ನು ತಿಕ್ಕಿಕೊಂಡು ಅದರಲ್ಲಿ ಮುಖ ನೋಡಿಕೊಳ್ಳುವನು.)

ಖಂಬೀರ : ಚನ್ನಾ.

ಸಾರಥಿ : ಧಣೀ.

ಖಂಬೀರ : ರಥಾ ಬರೋಬ್ಬರಿ ಅದನs?

ಸಾರಥಿ : ಅದ ಹಂಗ ಕಾಣಸ್ತದ ಧಣಿ.

ಖಂಬೀರ : ಕುದರಿ ಠೀಕ ಅವನ?

ಸಾರಥಿ : ಅವ ಹಂಗ ಕಾಣಸ್ತದ ಧಣಿ.

ಖಂಬೀರ : ನೀ ಬರೋಬರ ಅದೀಯಾ?

ಸಾರಥಿ : ಅದೀನಿ ಹಂಗ ಕಾಣಸ್ತದ ಧಣಿ.

ಖಂಬೀರ : ಚನ್ನಾ.

ಸಾರಥಿ : ಧಣೀ.

ಖಂಬೀರ : ಮತ್ತೇನೇನ ಕಾಣಸ್ತದ?

ಸಾರಥಿ : ಹಾದಿ ಮಾತ್ರ ತಪ್ಪಿಧಾಂಗ ಕಾಣಸ್ತದ ಧಣಿ.

ಖಂಬೀರ : ಚನ್ನಾ, ಹಂಗರ ಹಿಂಗ ಮಾಡು. ರಥಾ ತಿರಗೀಸಿ ಒಯ್ದು ಬದಲ ರಾಸ್ತ್ಯಾಕ್ಕ ಹೊಡದು ಬಿಡು.

ಸಾರಥಿ : ಅದ ಆಗಾಕಿಲ್ಲ ಧಣೀ.

ಖಂಬೀರ : ಯಾಕ?

ಸಾರಥಿ : ನಾವು ಮುಂದ ಮುಂದ ಬಂಧಂಗ ಉಸಕ ಸುರದು ಹಿಂದಿನ ರಸ್ತಿ ಗುರತು ಸಿಗಧಾಂಗ ಆಗೇದ ಧಣಿ.

ಖಂಬೀರ : ಚನ್ನಾ

ಸಾರಥಿ : ಧಣೀ.

ಖಂಬೀರ : ನೀ ಹುಚ್ಚ ಅದಿ, ನಾ ಶ್ಯಾಣ್ಯಾ ಆದೇನ್ನೋಡು.

ಸಾರಥಿ : ಯಾಕ ಧಣಿ?

ಖಂಬೀರ : ಹಂಗ ಆಗಬಾರದಂತ, ನಾನು ರಸ್ತಿಗುಂಟ ಸಿಗರೇಟು ಸೇದಿ ಗುರ್ತಿಕ್ಕ ಒಕ್ಕೋತ ಬಂದೇನಿ. ನಾ ಮದಲ್ನೇ ಸಿಗರೇಟು ಸೇದಿ ಒಗದ ಜಗಾ ಈಗೆ ಸ್ಯೆತ ಗುರ್ತು ಹಿಡೀತೇನಿ ನೋಡು.

ಸಾರಥಿ : ಸಿಗರೇಟ ಮ್ಯಾಲಿಂದೇನು ಧಣೀ?

ಖಂಬೀರ : ಅಲ್ಲಲೇ, ನಾನು ಮದಲ್ನೇ ಸಿಗರೇಟು ಸೇದಿದಾಗ ಅಲ್ಲೇನೇನು ಭಾವನೆಗಳು ಬಂದವು, ಅವು ಇನ್ನೂ ನನಗ ಗುರ್ತು ಸಿಗತಾವ. ಕೆಟ್ಟ ಮಳ್ಯಾಗ ಘಾಟು ಹೊಗಿ ತಲೀಗೆ ಹತ್ತಿದಾಗ ಅಮಲ ಏರಿಧಾಂಗ ಆಗಿತ್ತು. ಆ ಅಮಲಿನ್ಯಾಗ ನಾ ಭಾಳ ದೊಡ್ಡೊಂವಾ ಆಧಾಂಗ ಅನಿಸಿತ್ತು. ಭಾಳ ದೊಡ್ಡ ಕೆಲಸ ಮಾಡೊಂವ ಇದ್ದೇನಿ ಅಂತ ಅನಿಸಿತ್ತು.

ಸಾರಥಿ : ಧಣೀ

ಖಂಬೀರ : ಹಾಂನಪಾ.

ಸಾರಥಿ : ಮತ್ತೇನೇನ ಗುರತು ಮಾಡಿಕೊಂಡು ಬಂದಿ?

ಖಂಬೀರ : ಮತ್ತೇನಪಾ ಅಂದ್ರ ಒಂದ ಹುಡುಗಿ ಗುರತು ಏನಪಾ. ಹಸರ ಪರಕಾರ ಹಕ್ಕೊಂಡಿತ್ತು. ನೇರಳಿ ಬಣ್ಣದಾಗ ಸ್ವಲ್ಪ ಕೆಂಪ ಸರಾಯಿ ಕೂಡಿಸಿಧಾಂಗ ಕಣ್ಣಿನ ಬಣ್ಣಾ. ನನ್ನ ಮನಸ್ಸಿ ಗುಬ್ಬಿ ಹಾಂಗ ಆಕೀ ಕುತಗಿ ಮ್ಯಾಲೆ ಕೂತು ಪೋಲಕಾ ಸರಿಸಿ ಸರಿಸಿ ನೋಡತಿತ್ತು. ಆಕಿ ನಡದಳಂದ್ರ ನೆಲಾ ಕರಗಿಧಾಂಗ ಅನಸ್ತಿತ್ತು.

ಸಾರಥಿ : ಧಣೀ

ಖಂಬೀರ : ಹಾಂನಪಾ

ಸಾರಥಿ : ಆಕೀ ಕಾಲ ಕೆಳಗಿಂದೋ ಏನ ನಿನ್ನ ಕಾಲ ಕೆಳಗಿಂದೋ ?

ಖಂಬೀರ : ಊಂ—ಬೇಕಾದ್ರ ಇಬ್ಬರ ಕಾಲ ನಡುವಿಂದೂ ಅಂತ ಇಟಗೋ. ಆ ಮ್ಯಾಲೆ......ಒಬ್ಬ ಹೆಂಗಸಿನ ಗುರತು ಏನಪಾ, ಕತ್ತ್ಲೀ ವಳಗ ಮನೀ ಮುಂದ ನಿಂತು ಕೈಮಾಡಿ ಕರದ್ಲು. ಒಳಗ್ಹೋಗಿ ಹೊಟ್ಟೀ ಮ್ಯಾಲೆ ಕೆಳಗೆ ಎಲ್ಲಾ ಕೈಯಾಡಿಸಿ ನೋಡಿದ್ರ ಸತಾಂಗ ಇದ್ಲು. ಉಂಗರಾ ಕೊಡ್ಲಿಲ್ಲಾ—ಐದ ರೂಪಾಯಿ ಕೊಟ್ಟ ಬಂದೆ. ಆ ಮ್ಯಾಲೆ ಕೆಲವು ಜಗದಾಗ ಹಾಡೋ ಧ್ವನಿ ಕೇಳತಾವೇನಪಾ ಕೆಲವು ಜಗದಾಗ ಮಲಗಿದರ ಕನಸು ಬೀಳತಾವ. ಅದಿರ್ಲಿ ಚನ್ಯಾ. ಯಾಕ ರಸ್ತಿ ಎರಡೂ ನಿಟ್ಟಿಗೆ ಎತ್ತರಾಕ್ಹೋತ ಕೊಳ್ಳದಾಗ ಹೊಂಟ ಹಾಂಗ ಹೊಂಟೀವಿ ?

ಸಾರಥಿ : ಧಣೀ

ಖಂಬೀರ : ಹಾಂನಪಾ

ಸಾರಥಿ : ಇದೊಂದು ಬತ್ತಿಹೋದ ಹೊಳಿ. ಅದರ ಪಾತ್ರದಾಗ ನಾವು ಹೊಂಟೀವಿ. ಅದು ಆಳ ಆಕ್ಹೋತ ಹೊಂಟದ.

ಖಂಬೀರ : ಹಿಂಗೇನು ? ಚನ್ಯಾ, ಇದೇನು ಗಣಾ ಗಣಾ ಗಂಟೀ ಅಂಥಾ ಸಪ್ಪಳಾ ? ಯಾವ್ದರ ಸಾಲೀದ ಇರಬೇಕಲ್ಲ ?

ಸಾರಥಿ : ಧಣೀ

ಖಂಬೀರ : ಹಾಂನಪಾ.

ಸಾರಥಿ : ಇದೇನು ಒಳಗ ಕರಿಯೋ ಘಂಟ್ಯೋ, ಏನ ಹೊರಗ ಹಾಕೊ ಘಂಟ್ಯೊ ?

ಖಂಬೀರ : ಚನ್ಯಾ, ಇದು ಮನಿ ಒಳಗ ಇದ್ದವರ್ನ ಹೊರಗ ಹಾಕೋ ಘಂಟಿ. ಸಾಲೀ ಹೊರಗ ಇದ್ದವರನ್ನ ಒಳಗೆ ಕರಿಯೋ ಘಂಟಿ.

ಸಾರಥಿ : ಹಿಂಗೇನು ? (ಸ್ವಲ್ಪ ಹೊತ್ತು ಆಲಿಸಿ) ಏ ಧಣೀ, ಇದು ಗಣಾ ಗಣಾ ಸಪ್ಪಳಲ್ಲಾ. ಗಳಾ ಗಳಾ ಸಪ್ಪಳ, ನೀರ ಹರಿಯೋ ಸಪ್ಪಳ. ಎಲ್ಹ್ಯೋ ಮಳೀ ಆಗಿ ಹೊಳೀ ಒಳಗ ನೀರು ತುಂಬಿಕೊಳ್ಳಲಿಕ್ಕೆ ಹತ್ತೇತಿ.

ಖಂಬೀರ : (ಬೆದರುವನು) ಏ ಅಲ್ಲ ಹೊಗಲೆ.

ಸಾರಥಿ : ಹೌದೋ ಯಪ್ಪಾ. ಮುಂಗಾಲಿಗೆ ತಣ್ಣೀರು ಬಡದು ಕುದರಿಗೋಳ ಕಾಲು ನೋಡು ಹ್ಯಾಂಗ ಗದಾಗದಾ ನಡಗಲಾಕ ಹತ್ಯಾವ...... ಬಗ್ಗಿರs ನೋಡು ನೀರು ಎಷ್ಟ ರಭಸದಲೇ ಮ್ಯಾಲೆ ಏರಲಾಕ ಹತ್ತೇದs.

ಖಂಬೀರ : ಅಯ್ಯೊ ಚನ್ಯಾ! ಘಾತ ಆತಲ್ಲಲೇ! ಏನ ಮಾಡೋದು ರಥಾ ಎಡಕ್ಕ ಹೋಗಲಿಕ್ಕೆ ಜಗಾ ಇಲ್ಲಾ. ಬಲಕ್ಕ ಹೋಗಲಿಕ್ಕೆ ಜಗಾ ಇಲ್ಲಾ. ಹಿಂದ ತಿರಗಸಲಿಕ್ಕೆ ಬರೋ ಹಂಗಿಲ್ಲಾ. ಸಾಯುತೇವಲ್ಲೋ ಯಪ್ಪಾ. ಅಯ್ಯ! ನೀರು ರಥದ ಮ್ಯಾಲ ತನಕಾ ಬಂದವು.
(ಇಬ್ಬರೂ ಎದ್ದು ನಿಲ್ಲುವರು. ರಟ್ಟಿನ ಮೇಲೆ paint ಮಾಡಿದ ನೀರಿನ ಅಲೆಗಳು ಹಾಡಿನಲ್ಲಿಯ ಸೂಚನೆಗೆ ಅನುಗುಣವಾಗಿ ಮೇಲಕ್ಕೆ ಏರುತ್ತ ಹೋಗುವುವು.)

(ಇಬ್ಬರೂ ನರ್ತನಾಭಿನಯದೊಡನೆ)

ಖಂಬೀರ : 'ಚನ್ಯಾ, ಚನ್ಯಾ, ಮಣಕಾಲ್ಮಟಾ ನೀರು ಬಂದಾವೊ!'

ಸಾರಥಿ : "ಹ್ಯಾಂಗ ಮಾಡಲಿ ಧಣಿಯೋ,
ನಿನ್ನವ್ವಾ ಹಾಗಲಕಾಯಿ ತಿಂದು ಹಡದಾಳೊ!'

ಖಂಬೀರ : 'ಚನ್ಯಾ, ಚನ್ಯಾ, ಟೊಂಕದ ಮಟಾ ನೀರು ಬಂದಾವೊ!'

ಸಾರಥಿ : 'ಹ್ಯಾಂಗ ಮಾಡಲಿ ಧಣಿಯೋ,
ನಿನ್ನವ್ವಾ ಹಾಗಲಕಾಯಿ ತಿಂದು ಹಡದಾಳೊ'

ಖಂಬೀರ : 'ಚನ್ಯಾ, ಚನ್ಯಾ, ಎದಿ ಮಟಾ ನೀರು ಬಂದಾವೋ'

ಸಾರಥಿ : 'ಹ್ಯಾಂಗ ಮಾಡಲಿ ಧಣಿಯೋ,
ನಿನ್ನವ್ವಾ ಹಾಗಲಕಾಯಿ ತಿಂದು ಹಡದಾಳೊ'

ಖಂಬೀರ : 'ಚನ್ಯಾ, ಚನ್ಯಾ, ಕುತಗಿ ಮಟಾ ನೀರು ಬಂದಾವೋಽಽ'

ಸಾರಥಿ : 'ಹ್ಯಾಂಗ ಮಾಡಲಿ ಧಣಿಯೋ,
ನಿನ್ನವ್ವಾ ಹಾಗಲಕಾಯಿ ತಿಂದು ಹಡದಾಳೋ'

ಖಂಬೀರ : ಚನ್ಯಾ,

ಸಾರಥಿ : ಧಣೀ

ಖಂಬೀರ : ಮುಳಗತೇವಲ್ಲೋ
(ಇಬ್ಬರೂ ಅಪ್ಪಿಕೊಳ್ಳುವರು)
ಚನ್ಯಾ, ಹಾಡು ಕುಣಿತಾ ಸಾಕಿನ್ನ. ಇಲ್ಲಿಂದ ಪಾರಾಗೋ ದಾರಿ ಹುಡಕೋಣು. ಎಲ್ಲ್ಯರ ಡೋಣಿ ಹೊಂಟ್ಹಂಗ ಕಾಣಸ್ತದೇನು ನೋಡು.

ಸಾರಥಿ : (ಹಣೆಗೆ ಕೈಹಚ್ಚಿಕೊಂಡು ದಿಟ್ಟಿಸಿ ನೋಡುವನು) ಧಣೀ, ಅಲ್ಲ್ಯೊಂದು ಡೋಣ್ಯಾಗ ಒಬ್ಬ ಮನಸ್ಯಾ ಹೊಂಟಾನು.

ಖಂಬೀರ: ನಿನ್ನ ರುಮಾಲು ಬೀಸಿ ಬೀಸಿ ಕೂಗೋಣು, ಅವನ್ನಿಲ್ಲೆ.

(ಚನ್ನ ಕೈಯೆತ್ತಿ ರುಮಾಲು ಬೀಸುತ್ತಿರುವಂತೆ ಇಬ್ಬರೂ ಕೂಗುವರು)

ಇಲ್ಲೆ ಬರ್ರ್ಯೊss. ಇಲ್ಲಿ ಬರ್ರ್ಯೊss.

(ನೀರಿನ ಸೆಟ್ಟಿಂಗ ಮೇಲೆ ಡೋಣಿ ನಿಧಾನವಾಗಿ ಬರುವುದು)

ಸಾರಥಿ: ಬರ್ರಿ. ಬೇಶ ಹೊತ್ತಿಗೆ ಬಂದ್ರಿ. ಇಂವಾ ಖಂಬೀರ ಕುಮಾರಾ. ನಾ ಇವ್ನ ಸಾರಥಿ. ಇಬ್ರೂ ಮುಳಗಿ ಸಾಯಲಾಕಹತ್ತಿದ್ವಿ. ಆಯ್ತು ಹೊತ್ತಿಗೆ ದೇವರ್ಹಂಗ ನಮ್ಮನ್ನ ಕಾಪಾಡಲಿಕ್ಕೆ ಬಂದ್ರಿ.

ಡೋಣಿಯುವನು: ಶುಶ್! ಸುಮ್ಮನಿರ್ರಿ. ನಾ ನಿಮ್ಮನ್ನ ಕಾಪಾಡಲಿಕ್ಕೆ ಬಂದ್ಯಂವಲ್ಲಾ.

ಸಾರಥಿ: ಮತ್ತ ಯಾರ ನೀವು? ಯಾಕ ಬಂದ್ರಿ?

ಡೋಣಿಯುವನು: ನಾನು ಪೇಪರಿನ ಸುದ್ದಿಗಾರ. ಪ್ರೆಸ್ ರಿಪೋರ್ಟರ್. ಇಲ್ಲೆ ಇಬ್ರು ಮುಳಗಲಿಕ್ಕೆ ಹತ್ತಿಧಂಗ ಕಾಣಿಸ್ತು. ಅದಕ್ಕೆ ಪೇಪರಿಗೆ ಸುದ್ದಿ ಕೊಡಲಿಕ್ಕೆ ಬಂದೆ.

ಸಾರಥಿ: ಆದ್ರೂ ನಮ್ಮನ್ನ ಪಾರ ಮಾಡ್ರಿ, ಬಾತ್ಮಿದಾರ ಸಾಹೇಬರs ಖಂಬೀರನ ಅವ್ವಾ–ಅಪ್ಪಾ ಭಾಳ ನೆನಸ್ತಾರ ಅವನ್ನs.

ಡೋಣಿಯುವನು: ನೀವು ಸಾಯದಿದ್ರ ಪೇಪರಿಗೆ ಏನ ಸುದ್ದಿ ಕೊಡಬೇಕು ನಾನು? ಬೇಕಾದ್ರ ಖಂಬೀರ ಕುಮಾರನ ಅವ್ವಾ–ಅಪ್ಪಗ ಇಂವಂದೊಂದು ಫೋಟೋ ಒಯ್ದು ಕೊಡತೀನಿ, ನೆನಪಿಗೆ.

ಸಾರಥಿ: ನೀವನ್ನೋದೂ ತಪ್ಪಲ್ಲ ತಗೊಳ್ರಿ. ಹಾಂಗ ಮಾಡೋಣೇನು ಧಣಿ? ಫೋಟೊ ಕಳಸೋಣ?

ಖಂಬೀರ: (ಸ್ವಲ್ಪ ವಿಚಾರ ಮಾಡಿ) ಫೋಟೋ ಏನ ಬ್ಯಾಡಾ, ಅದರ ಬದ್ಲಿ ನನ್ನ ರುಂಡಾ ತಕ್ಕೊಂಡು ಹೋಗ್ರಿ. ನಮ್ಮಪ್ಪಾ ಅವ್ವಾ ನನ್ನ ನೆನಪಿಗೆ ಇದಗೋತಾರಾ.

ಸಾರಥಿ: (ಡೋಣಿಯುವನಿಗೆ) ಏನಂತೀರಿ?

ಡೋಣಿಯುವನು: ಅದಾಗೂದುಲ್ಲಾ.

ಸಾರಥಿ: ಯಾಕ?

ಡೋಣಿಯುವನು: ಅದು ಖೂನಾಗ್ತದ ಖೂನು. ಬೇಕಾದ್ರ ಫೋಟೊ ಒಂದ ಒಯ್ಯುತೇನಿ ನೋಡು.

ಸಾರಥಿ: ಏನಂತಿ ಧಣಿ ?

ಖಂಬೀರ: ಫೋಟೊದ್ದ್ಲೆ ಏನ ನೆನಪುಳಿಶ್ತದ ಚನ್ನ್ಯಾ? ರುಂಡಾದ್ರೆ ಬೇಕಾದಾಗ ನನ್ನ್ನs ನೋಡಿಧಾಂಗ ಆಗ್ತದಪಾ. ರುಂಡದಾಗಿನ ನನ ಕಣ್ಣು ಅವರ್ನ್ನs ನೋಡಿಕೋತ ಇರ್ತಾವ. ಎಲ್ಲಾರ್ನ್ನು ಬಿರಿಬಿರಿಗಣ್ಣಲೇ ನೋಡಿ ಬೆದರಿಸಿಕೋತ ಇರ್ತಾವ. ಕೆಲವು ದಿವಸಕ್ಕ ನನ್ನ ಮೆದುಳು ಕೊಳಿಲಿಕ್ಕೆ ಹತ್ತಿತಂದ್ರs ಆ ನಾತದ ಜೋಡಿ ನನ್ನ ವಿಚಾರ ಸುದ್ದಾ ಎಲ್ಲಾ ಕಡೇ ಹಬ್ಬುತಾವ. ಆ ನನ್ನ ವಿಚಾರಗಳು ತಿಳದ್ವಂದ್ರೆ ಆವಾಗ ಎಲ್ಲಾರಿಗೂ ಗೊತ್ತಾಗತದ ನಾ ಎಂಥಾ ದೊಡ್ಡ ಮನಶಾ ಅಂಬೋದು! ಊರವರೆಲ್ಲಾ ಸೇರಿ ನನ್ನ ರುಂಡದ ಮ್ಯಾಲೊಂದು ಗುಡಿ ಕಟ್ಟಿಸತಾರ. (ರೋಮಾಂಚಿತನಾಗಿ, ಉತ್ತೇಜಿತನಾಗಿ, ಒಂದು ಕ್ಷಣ ಮಾತನಾಡದೇ ಸುಮ್ಮನಿರುವನು) ಚನ್ನ್ಯಾ, ನಾ ದೇವರಾಗಿ ಬಿಡ್ತೇನಿ! ನನ್ನ ವಿಚಾರ ಧರ್ಮ ಆಗತಾವ! ನಾಡಿನ ಜನರೆಲ್ಲಾ ನನ್ನೆದುರಿಗೆ ಬಗ್ಗತಾರ. ನನ್ನ ಮ್ಯಾಲೆ ಕಾಣಿಕೆಗಳ ಸುರಿಮಳಿ ಆಗ್ತsದ. ನನ್ನ ಮೆದುಳು ಇನ್ನಷ್ಟು ಕೊಳತು ಆ ವಾಸನಿ ದಟ್ಟವಾಗಿ ಹಬ್ಬಿತಂದ್ರ ಜನರ ಬುದ್ಧಿ ಮಬ್ಬಾಗಿ ಬಿಡ್ತsದ. ಆ ವಾಸನೀಗೆ ಜನರು ಹೆದರಿ ಹೆದರಿ ಬದಕ್ತಾರ. ಗಟ್ಟಿಯಾಗಿ ಮಾತಾಡಲಿಕ್ಕೇ ಹೆದರ್ತಾರ. ಹುಡುಗರು, ಹುಡುಗೀರನ್ನ ಚುಡಾಯಿಸಲಿಕ್ಕೆ ಹೆದರ್ತಾರ. ಕ್ಲಾಸಿನಾಗ ಧಾಂದಲೇ ಮಾಡಲಿಕ್ಕೆ ಹೆದರ್ತಾರ. ಜನರು ಮೋಸಾ ಮಾಡಲಿಕ್ಕೆ ಹೆದರ್ತಾರ. ಲಂಚಾ ತಗೊಳ್ಳಿಕ್ಕೆ ಹೆದರ್ತಾರ. ದೈವಭೀತಿಯ ಉತ್ಕೃಷ್ಟ ನಡಾವಳಿಯ ಸಮಾಜ ನಿರ್ಮಾಣ ಆಗ್ತsದ. ನನ್ನ ಗೆಳ್ಯಾರೆಲ್ಲಾ ನನ್ನ ನೆನಪಿನಾಗ ನರಳಿಕೋತ ಬದಕತಾರ. ಯಾರಿಗೂ ಬ್ಯಾರೇ ಜೀವನಾನೆ ಉಳಿಯೂದುಲ್ಲಾ. ಗುಡಿಗೆ ಬರೋ ಹೆಂಗಸರೆಲ್ಲಾ ನನ್ನ ಗಂಡಾ ಅಂತ ಭಾವಿಸಿಕೋತಾರ. (ವಿಪರೀತ ಸಂತೋಷದಲ್ಲಿ) ಹೆಚ್ಚೇನು ಹೇಳಲಿ ಚನ್ನ್ಯಾ. ನಾನs ರಾಜಾ ಆಗ್ತೇನಿ. ನಾನs ದೇವರಾಗ್ತೇನಿ, ಎಲ್ಲಾರೂ ನನ್ನ ಗುಲಾಮರಾಗ್ತಾರ (ಕುಣಿದಾಡುತ್ತ) ಚನ್ನ್ಯಾ, ಹೊಸಾ ಸಮಾಜ ಮಾಡಲಿಕ್ಕೆ ನನ್ನ ತಲೀ ಬಲಿದಾನ ಮಾಡಲಿಕ್ಕೆ ನಾ ತಯಾರ ಇದ್ದೇನಿ, ತಯಾರ ಇದ್ದೇನಿ.

ಸಾರಥಿ: ಇಷ್ಟು ಹೇಳಿಕೊಳ್ಳಿಕ್ಕತ್ಯಾನ ಹುಡುಗಾ. ಅವನ ರುಂಡಾ ಒಯ್ದು ಬಿಡರೆಪಾ. ಅಲ್ಲದs ಅವರವ್ವಾ ಅಪ್ಪನ ಒಳಮನಸ್ಸು ನೋಡಿದ್ರೆ, ಅವರಿಗೂ ಅವನ್ನ ಸತತ ತಮ್ಮ ಕಪಾಟಿನಾಗ ಇಟಗೊಳ್ಳೂದ ಐತಿ.

ಡೋಣಿಯವನು: ಹೆಂಗ ಮಾಡಲಿಕ್ಕೆ ಬರೂದುಲ್ಲಾ. ಅದು ಖೂನಾಗ್ತsದ ಅಂತ ಒಮ್ಮೆ ಹೇಳಲಿಲ್ಲಾ ?

ಸಾರಥಿ: ಹೋಗಲಿ ಬಿಡ್ರಿ ಹಂಗಾದರ.

ಡೋಣಿಯವನು: ಈಗ ಇಂವಾ ಸಾಯೋ ಸುದ್ದಿ ಜೋಡಿ ಇವನ ಬಗ್ಗೆ ಸ್ವಲ್ಪ ಮಾಹಿತಿನೂ ಪೇಪರಿನ್ಯಾಗ ಹಾಕಬೇಕಾಗ್ತ್ತದ ಅದಕ್ಕ ನನ್ನ ಕೆಲವು ಪ್ರಶ್ನೆಗಳಿಗೆ ಉತ್ತರಾ ಕೊಡ್ರಿ.

ಸಾರಥಿ: ಮಾರಾಯಾ! ಮೂಗು ಬಾಯಿ ಮಟಾ ನೀರಿನ್ಯಾಗ ಮುಳಗೇವಿ. ಏನ ಕೊಡೋಣು ಉತ್ತರಾನ? ಅಲ್ಲಿ ತನಕಾನರು ಡೋಣ್ಯಾಗ ಜಗಾ ಕೊಡಾಕೋ.

ಡೋಣಿಯವನು: ನನ್ನ ಪ್ರಶ್ನೆಗಳಿಗೆ ಉತ್ತರಾ ಕೊಡೊ ತನಕ ಡೋಣ್ಯಾಗ ಕೂಡ ಬರ್ರಿ. ಅಲ್ಲಿಂದ ನೀರಿನ್ಯಾಗ ಜಿಗಿಬೇಕು.

ಸಾರಥಿ: ಆಗಲೀಪಾ. (ಇಬ್ಬರೂ ಡೋಣಿಯಲ್ಲಿ ಕೂಡ್ರುವರು.)

ಡೋಣಿಯವನು: ಇನ್ನ ನನ್ನ ಪ್ರಶ್ನೆಗಳಿಗೆ ಉತ್ತರಾ ಕೊಡ್ರಿ.

ಸಾರಥಿ: ಕೇಳ್ರಿ.

ಡೋಣಿಯವನು: ಇವನ ಹೆಸರಂತೂ 'ಖಂಬೀರ ಕುಮಾರ' ಅಂಥಂಗಾತು.

ಸಾರಥಿ: ಆತು.

ಡೋಣಿಯವನು: ಈಗ ಈಂವಾ ಎಲ್ಲಿ ಹೊಂಟಾನ? ಯಾಕ ಹೊಂಟಾನ?

(ಚನ್ನ ಉತ್ತರ ಕೊಡಲು ಪ್ರಾರಂಭಿಸಿದಂತೆ ಡೋಣಿಯವ ಕಾಗದ ಪೆನ್ಸಿಲ್ ತೆಗೆದು ಬರೆದುಕೊಳ್ಳಲು ಪ್ರಾರಂಭಿಸುವನು.)

ಸಾರಥಿ: ಯಾಕ ಹೊಂಟಾನು ಅಂದ್ರೆ ಅದು ಹೀಂಗsತೀ. ಈಂವಾ ನಮ್ಮ ಖಂಬೀರಾ ಸಣ್ಣ ಹುಡುಗ ಇದ್ದಾಗಿನ ಪಟಾ ಎಲ್ಲಾರ್ಹ್ಹಂಗ ಅಲ್ಲಾ. ಇದೊಂದು ಅಸಾಮಾನ್ಯ ವ್ಯಕ್ತಿ. ಎಲ್ಲಾರ್ಹ್ಹಂಗ ಗೋಲಿ–ಗುಂಡಾ, ಗಿಲ್ಲಿ-ದಾಂಡು ಆಡಿಕೋತ ಬೆಳದಾಂವಲ್ಲಾ. ಅದರ ಬದಲಿ, ಇಂವಾ ಕೆಲವು ಚಿಂತನಗಳ ಜೋಡಿ ಬೆಳದಾ. ಕೆಲವು ಆದರ್ಶಗಳ ಜೋಡಿ ಬೆಳದಾ. ಥೊಡ್ಡೋಂವಾಥಾಂಗ ಇವನ ವ್ಯಕ್ತಿತ್ವ ಭಾಳ ಘನತರ ಆತು. ಇವನ ಜಗತ್ತು ಭಾಳಾ ಎತ್ತರಕ್ಹೋತು. ಆ ಎತ್ತರದಿಂದ ಇಂವಾ ಕೆಳಗ ಬಗ್ಗಿ ಏನ ಕಂಡಾ? (ಈ ಮಾತುಗಳನ್ನು ಹೇಳುತ್ತಿದ್ದಂತೆ ತನ್ನ ವೈಮರೆತು ಅರ್ಧ ಕಣ್ಣು ಮುಚ್ಚಿರುವನು.)

ಖಂಬೀರ: (ಹಿಗ್ಗಿನಿಂದ) ಹೇಳ ಚನ್ನ್ಯಾ, ಹೇಳು. (ಡೋಣಿಯವನಿಗೆ) ಇಂವಾ ಹೇಳೊದೆಲ್ಲಾ ಬರಕೋಳಲಿಕ್ಕೆ ಹತ್ತಿರ್ರ್ಯೊ ಇಲ್ಲೊ? ಏನೂ ಬಿಡ ಬ್ಯಾಡರಿ ಮತ್ತ.

ಡೋಣಿಯವನು: (Interruption ದಿಂದ ಅಸಮಾಧಾನಗೊಂಡು, ಹಾಗೆಯೇ ಬರೆಯುತ್ತಾ ಮುಖ ಮೇಲೆತ್ತುವೆ)

ನಾ ಅದನ್ನs ನಡಸೇನ್ರೀ, ನೀವು ಘಾಪ್ಡೆ ಗಪ್ಪ ಕುತಗೊಂಡ್ರ ನನ್ನ ಕೆಲಸ ಸರಳಾಗ್ತದ.

ಸಾರಥಿ: (ಇದ್ಯಾವುದನ್ನೂ ಗಮನಿಸದೇ, ಮರೆತು ಅರ್ಧ ಕಣ್ಣು ಮುಚ್ಚಿದ್ದಂತೆ) ಏನs ಕಂಡಾ! ತಮ್ಮೂರಿನ ಜನರ್ನ ಕಂಡಾ! ಅವರೆಲ್ಲಾ ಪಕ್ಕಾ ಹಜಾಮರು! ಅಗದೀ ಮೂರ್ಖರು! ಅವರಿಗೆಲ್ಲಾ ಮಾನವ ಜೀವನದ ದೂರದ ಗುರಿ ಕಾಣಸೂದsನೇ ಇಲ್ಲಾ. ಅದರ ಸೌಂದರ್ಯದ ಕಲ್ಪನಾನs ಇಲ್ಲಾ. ಇದ್ದದ್ದನ್ನ ಬಿಟ್ಟು ಇಲ್ಲದ್ದರ ಕಡೇ ತುಡಿಲಿಕ್ಕೆ ಬರೂದನs ಇಲ್ಲಾ. ಖಂಬೀರಾ ತನ್ನ ಕುದರೀ ಹತ್ತಿಕೊಂಡು ನನ್ನ ಕಡೆ ಬಂದಾ. ಹೇಳಿದಾ 'ಚನ್ಯಾ, ದೂರದಾಗಿನ ಕಾಮನಬಿಲ್ಲನ್ನ ಬರೀ ನೋಡಿಕೋತ ಎಷ್ಟು ದಿವಸ ಇರೋದು? ಅದನ್ನ ಮುಟ್ಟಲಿಕ್ಕೇ ಬೇಕು. ಅದರಾಗ ಬದಕಲಿಕ್ಕೇ ಬೇಕು. ಅದರ ಬೆಳಕಲೇ ನನ್ನ ಜೀವನಾ ಸಿಂಗಾರ ಮಾಡಿ ಕೊಳ್ಳಿಕ್ಕೇ ಬೇಕು. ಚನ್ಯಾ, ಇಕಾ ನಾ ಹೊಂಟೆ' ಅಂದಾ. ನಾ ಹೇಳಿದೆ. 'ಧಣೀ. ನಿನ್ನ ಬಿಟ್ಟು ನಾ ಹ್ಯಾಂಗ ಇದ್ದೇನು? ನಡಿ. ನಾನೂ ಬಂದೆ' ಅಂತ. ಕುದರೀಗೆ ರಥಾ ಕಟ್ಟಿದವನs ಹೊಡಕೊಂಡು ಹೊಂಟೆ.

ಡೋಣಿಯವನು: ಸ್ವಲ್ಪ ಸವಕಾಶ ಹೇಳಪಾ. ಒಂದ ಉಸರಿನ್ಯಾಗ ಹೀಂಗ ಒದರಿಕೊಂಡರ ನಾ ಏನ ಬರಕೋಳ್ಳಿ? (ಬರೆದುಕೊಳ್ಳುತ್ತಾ) ರ—ಥ—ಕ—ಟ್ಟಿ—ಕೊಂ—ಡು—ಹೊ—ರ—ಟ—ರು. ಹೂಂ ಎಲ್ಲಿ ಹೊಂಟದ್ದು ಅಂತ ಹೇಳ್ಳೇ ಇಲ್ಲಲ್ಲಾ?

ಸಾರಥಿ: ಎಲ್ಲಿ ಹೊಂಟದ್ದೂ ಅಂದ್ರ ಅದು ಹೀಂಗಾತು. ಒಂದು ದಿವಸ ಖಂಬೀರಾ ತನ್ನ ಕುದರೀ ಮ್ಯಾಲೆ ಹೊಂಟಾಗ ಹಾದ್ಯಾಗ ಒಬ್ಬ ಕಾಂಗ್ರೆಸಿಗ, ಒಬ್ಬ ಬಲಪಂಥಗಾಮಿ, ಒಬ್ಬ ರಾಜಾಪ್ರಭುತ್ವನಿಷ್ಠ, ಎಡ ಪಂಥಗಾಮಿ ಮತ್ತು ಒಂದು ಕುರಿಹಿಂಡು ನೋಡಿದಾ. ಕೇಳಿದಾ. 'ಚನ್ಯಾ, ಇದೆಲ್ಲಾ ಏನೂ?' ಅಂತ. ಆವಾಗ ಅವಂಗ ನಮ್ಮ ಪ್ರಜಾಪ್ರಭುತ್ವದಾಗ ಸಂಶಯ ಹುಟ್ಟಿತು. ಹಾಂಗ ಸ್ವಲ್ಪ ಮುಂದ ಹೋಗುದುರಾಗ (ಈಗ ಡೋಣಿಯವ ಬರೆಯುವುದನ್ನು ಬಿಟ್ಟು ಚನ್ನನನ್ನೇ ನೆಟ್ಟಗೆ ನೋಡುತ್ತ ಕುಳಿತಿರುವನು) ಅಂವಾ ಒಬ್ಬ ಗಾಂಧೀವಾದಿ, ಒಬ್ಬ ಅರವಿಂದವಾದಿ, ಒಬ್ಬ ಆರ್ಷೇಯವಾದಿ, ಇವರ್ನ ನೋಡಿದಾ. ಆವಾಗ ಅಂವಗ ನಮ್ಮ ಜೀವನದ ಮೌಲ್ಯಗಳೊಳಗ ಸಂಶಯ ಹುಟ್ಟಿತು. ಮುಂದ ಹೋಗುದರಾಗ ಒಬ್ಬ ಮುತ್ತೈದಿ, ಒಬ್ಬ ಸೂಳಿ, ಒಬ್ಬ ಎಲ್ಲಮ್ಮನ ಗುಡ್ಡದ ಜೋಗತಿ

ಇಷ್ಟ ನೋಡಿದಾ. ಅಂವಗ ಜೀವನದೊಳಗೇನೇ ಸಂಶಯ ಹುಟ್ಟಿಬಿಡ್ತು. ಹೇಳಿದಾ 'ಚನ್ನ್ಯಾ, ನಮ್ಮ ಜೀವನ ಮೌಲ್ಯಗಳು ಲಡ್ಡ್ಯಾಗಿ ಹೋಗ್ಯಾವ. ನಮ್ಮ ಜೀವನ ಗೊಡ್ಡಾಗಿ ಹೋಗೇದ. ನಮ್ಮ ಜೀವನಕ್ಕೆ ಒಂದು ಹೊಸಾ ಅರ್ಥ ಹುಡುಗಬೇಕು. ನಮ್ಮ ಊರಿನ ಮಂದಿ ಅಡಪ ಹತ್ತಿದ ನಾಯಿ ಹಂಗ ಆಗ್ಯಾರ. ಅವರನ್ನ ಈ ನೀತಿ, ಈ ರೊಕ್ಕ, ಈ ಜನಿವಾರ, ಈ ಶಿವದಾರ, ಸುಟ್ಟು —ಸುಡುಗಾಡು, ಈ ಗೊಂದಲದ್ಲೇ ಪಾರಗಾಣಿಸಿ, ನಮ್ಮ ಊರಿನ ಜೀವನಕ್ಕೆ ಒಂದು ಹೊಸಾ ಉದ್ದೇಶಾ ತಂದು ಕೊಡಬೇಕು. ಚನ್ನ್ಯಾ, ಇಕಾ ನಾ ಹೊಂಟೆ' ಅಂದಾ. 'ಧಣೀ. ನಿನ್ನ ಬಿಟ್ಟು ನಾ ಎಲ್ಯರs ಇದ್ದೇನೇನು!' ಅಂದವ್ನ ನಾ ರಥಾ ಕಟ್ಟಿದೆ. ಇಬ್ಬರೂ ಹೊಂಟವಿ.

ಡೋಣಿಯವನು: ನಾನೂ ಆವಾಗ್ನಿಂದs ಅದನ್ನ ಕೇಳಲಿಕ್ಕೆ ಹತ್ತೇನಪಾ ಎಲ್ಲಿ ಹೊಂಟ್ರೀ, ಎಲ್ಲಿ ಹೋಟ್ರೀ? ಅಷ್ಟ ಹೇಳೋದು ಬಿಟ್ಟು ಯಾಕ ನನ್ನ ತಲಿ ತಿನ್ನಲಿಕ್ಕೆ ಹತ್ತೀ?

ಖಂಬೀರ: ಚನ್ನ್ಯಾ, ನೀ ಹೇಳೋದು ಅವರಿಗೆ ತಿಳೀವಲ್ತು. ನಾ ಹೇಳ್ತೇನಿ ಬಿಡು. (ಎದ್ದುನಿಂತು ಅಭಿನಯದೊಡನೆ) ಒಂದ ದಿವಸ, ಭಯಂಕರ ಮಳಿ, ಭಯಂಕರ ಕತ್ತಲು. ಮುಗಲ ತುಂಬೆಲ್ಲಾ ಸಿಕ್ಕಾಪಟ್ಟೇ ಮಿಂಚಲಿಕ್ಕೆ ಹತ್ತಿತ್ತು. ಖಿಡಕ್ಯಾಗಿಂದ ನಾ ನೋಡಿಕೋತ ನಿಂತಿದ್ದೆ. ಒಂದು ಅದ್ಭುತ ಮಿಂಚು ಹೊಡಿತು. ಆವಾಗ ನಾ ಏನ ಕಂಡೆ? (ಈಗ ಡೋಣಿಯವ, ಮತ್ತೆ ಬರೆಯುವದನ್ನು ಬಿಟ್ಟು ಇವನನ್ನೇ ದಿಟ್ಟಿಸುತ್ತ ಕುಳಿತಿರುವನು.)

ಖಿಡಕಿ ಬಾಜೂಕಿನ ಬೈಲು. ಅದರ ಬಾಜೂಕಿನ ಕಾಡು—ಮಳೀ ವಳಗ ತೊಯ್ಸಿಕೋತ ನಿಂತದ ಸಣ್ಣ ಹುಡುಗೊರ್ಹಂಗ. ಅದರತ್ಲಾಗಿನ ಗುಡ್ಡ—ಎರಕೊಲ್ಲಿಕ್ಕೆ ಕುತ್ತ ಮೈನಾದಿದ ಹುಡಗೀಹಂಗ. ಅದರತ್ಲಾಗ, ಅದರತ್ಲಾಗ, ನೋಡಿಕೋತ ಹೋದೆ. ತಂಪಗಾಳಿ ಮೈಯೆಲ್ಲಾ ಬೀಸಿ ಮೈತುಂಬಾ ಆವೇಶ ತುಂಬಿಕೊಂಡ್ಹಂಗಾತು. ಹಂಗs ನೋಡೇ ನೋಡಿದೆ. ಇಡೀ ಇತಿಹಾಸಾನ ನನ್ನೆದುರಿಗೆ ಬಿದ್ದದಲ್ಲೆ! ಸಾಮ್ರಾಜ್ಯಾ ದಾಟಿ ಆ ಕಡೇ ನದೀ ತೀರದ ಸಂಸ್ಕೃತಿ. ಅದರತ್ಲಾಗ ಅಟ್ಟಂಬಟ್ಟಂ ಅಡಿವಿ. ತಾರ ತಂತಿ ಕಂಬಾ ನೋಡಿದ್ರ ಕ್ರೂಸಿಫಿಕ್ಸಾದ ಕ್ರಿಸ್ತ ಕಂಡಾ. ನಾ ಹೇಳಿದೆ, ಚನ್ನ್ಯಾ, ಇದೆಲ್ಲಾ ದಾಟಿ ಹೋಗಬೇಕು. ಈ ಮಿಂಚಿನ ಗುಂಟ ಹೋಗಬೇಕು. ಇದನ್ನೆಲ್ಲಾ ಮೂಡಸೋ ಮುಳಗಸೋ ಶಕ್ತಿ ಜೋಡಿ ಇರಬೇಕು. ಅದನ್ನ ತಿಳಕೋಬೇಕು ಚನ್ನ್ಯಾ, ಇಕಾ ನಾ ಹೊಂಟೆ.

ಡೋಣಿಯವನು: (ಸಿಟ್ಟಿನಿಂದ, ಕಾಗದ ಪೆನ್ಸಿಲ್ ಒಗೆದು ಎರಡೂ ಕೈ ಬೀಸುತ್ತಾ) ಚನ್ನ್ಯಾ ಹೇಳಿದಾ 'ಧಣೀ ನಿನ್ನ ಬಿಟ್ಟು ನಾ ಏನು ಇರೋದು.' ರಥಾ ಕಟ್ಟಿದಾ. ಹೊಂಟರಿ. (ಎರಡೂ ಕೈಯೆತ್ತಿ ಕೂಗುತ್ತಾ) ಅದನ್ನ ಕೇಳಲಿಕ್ಹತ್ತೇನಿ ನಾನು. ಎಲ್ಲಿ ಹೊಂಟರಿ? ಎಲ್ಲಿ ಹೊಂಟೀರಿ? ಮತ್ತ ಈ ಸುಳ್ಳ ಹೇಳೋ ಚಟಾ ಬಿಡ್ರಿ. ಒಂದ ಮಿಂಚು ಮಿಂಚಿ ಮಾಯ ಆಗೊದ್ರಾಗ ಅಷ್ಟೆಲ್ಲಾ ನೋಡಲಿಕ್ಕೆ ಸಾಧ್ಯ ಅದ ಏನು?

(ಡೋಣಿಯವ ಮಾತಾಡುತ್ತಿರುವಾಗ ಚನ್ನ ನೀರಿಗೆ ಕೈಹಾಕಿ ಸಂಭ್ರಮದಿಂದ)

ಸಾರಥಿ: ಧಣೀ ನೀರಿನ್ಯಾಗ ತೇಲಿಕೊಂಡು ಹೊಂಟಿದ್ದ ಎರಡು ಬುಟ್ಟಿ ಸಿಕ್ಕವು ನೋಡು. ಇದರಾಗ ಕುತಗೊಂಡು ತೇಲಿ ನಮ್ಮ ಜೀಂವಾ ಕಾಪಾಡಿಕೋಬಹುದು.

ಖಂಬೀರ: (ಸಂತೋಷದಿಂದ) ಚನ್ನ್ಯಾ, ದೇವರು ಧೊಡ್ಡೋಂವಾ. ಅಂತೂ ನಮ್ಮ ಪ್ರಾಣಾ ಉಳಿಸಿದಾ ನೋಡು. ಅಲ್ಲದ ಇದರಾಗ ತೇಲಿಕೋತ ನಮ್ಮ ಪ್ರಯಾಣಾನೂ ಮುಂದ ಬರೆಸಬಹುದು.

ಸಾರಥಿ: (ಡೋಣಿಯವನಿಗೆ) ಸದ್ಯ, ನಿಮಗೂ ತೊಂದರೆ ತಪ್ಪಿಧಂಗಾತು ಬಿಡ್ರಿ ಸಾಹೇಬರ. ನಾವೇನು ಸಾಯೊದುಲ್ಲಾ. ನೀವೇನು ಸುದ್ದಿ ಕೊಡ ಬೇಕಾಗಿಲ್ಲಾ. ನಾವೆಲ್ಲಿ ಹೊಂಟೇವಿ ಅಂತ ತಿಳೀದ ಒದ್ದಾಡ ಬೇಕಾಗಿಲ್ಲಾ. ನಾ ಹೇಳೀ ಹೇಳಿದೆನೇನ್ರ್ಯಪಾ. ಖಂಬೀರಕುಮಾರ ಜೀವನದ ಹೊಸಾ ಮೌಲ್ಯಗಳು, ಹೊಸಾ ಅರ್ಥ ತಿಳಕೊಳ್ಳಿಕ್ಕೆ ಹೊಂಟಾನ ಅಂತ.

(ಇಬ್ಬರೂ ಡೋಣಿಯಿಂದ ಒಂದೊಂದು ಬುಟ್ಟಿಗೆ ಇಳಿಯುವರು.)

ಸಾರಥಿ: (ಡೋಣಿಯವನಿಗೆ) ಹಂಗಾರ ಹೋಗೀಬರ್ತೇವ್ರಪಾ. ನಮಸ್ಕಾರ.

ಡೋಣಿಯವನು: ಸಾಯದಿದ್ರೇನಾತು? ಏನೋ ತಿಳಕೋಳ್ಳಿಕ್ಕೆ ಹೊಂಟಾನ ಅಂತೀದಿ. ಅದನ್ನ ಪೇಪರಿನ್ಯಾಗ ಹಾಕಿಸಿ ಬಿಡ್ತೇನಿ.

ಸಾರಥಿ: ಏನಂತ?

ಡೋಣಿಯವನು: 'ಹೆಚ್ಚಿನ ಜ್ಞಾನಕ್ಕಾಗಿ ಖಂಬೀರಕುಮಾರರವರ ಜಲಪ್ರಯಾಣ' ಅಂತ.

ಸಾರಥಿ: (ಒಂದು ಕ್ಷಣ ಗರಬಡಿದವನಂತೆ ನಿಂತು, ಬಳಿಕ ಸಂತೋಷದಿಂದ) ನಿಮಗೆ ಪುಣ್ಯಾ ತಟ್ಟಲ್ರಿಪಾ. ಅಷ್ಟ ಮಾಡಿಬಿಟ್ಟರ ಭಾಳ ಮಸ್ತ

ಆಗತ್ತದ ನೋಡ್ರಿ. ನಮ್ಮ ಖಂಬೀರನ ಯೋಗ್ಯತಾಕ ಕಡೀಕ್ಯರs ಜನ ಮನ್ನಣಾ ಸಿಕ್ಕ ಹಂಗ ಆಗ್ತದ.

ಡೋಣಿಯವನು: ಆದ್ರ ನೀವು ನಡಕ ಸತ್ತ ಹೋದರ? ನನಗ್ಹ್ಯಾಂಗ ಗೊತ್ತಾಗ ಬೇಕು. ನೀವೇನು ಹೋಗಿ ಮುಟ್ಟಿದ್ಯರೋ ಇಲ್ಲಾ ನಡಕ ಮುಳಗಿ ಸತ್ತ ಹೊದ್ಯರೋ ಅಂತ?

ಸಾರಥಿ: ಅದಕ್ಯಾಕ ಚಿಂತಿ? ಒಂದ ಉಪಾಯ ಐತಿರಿ. ಒಂದ ಬಕೀಟು ತುಂಬಾ ಬಿಸಿಬಿಸಿ ಕುಡಿಯೋ ನೀರು ತಗೋಳ್ರಿ. ಅದರಾಗ ಒಂದು ಅಡಿಕಿ ಬೆಟ್ಟದ ಗಾತ್ರದ ಅಣೀಕಲ್ಲು ಹಾಕರಿ. ಆ ನೀರು ಥಣ್ಣಗಾಗಿ ಹೋದವಂದ್ರ ಖಂಬೀರಾ ಹೋಗಿ ಮುಟ್ಟಿದ ಅಂತ ತಿಳಕೋಳ್ರಿ. ಜರ ಕಲ್ಲs ಕರಗಿ ಹೋತಂದ್ರ ಅಂವಾ ಸತ್ತ ಅಂತ ತಿಳಕೋಳ್ರಿ. ನಾವು ಬರೋಣ ಇನ್ನ?

ಡೋಣಿಯವನು: ನಿಂದರ್ರಿ ಸ್ವಲ್ಪ. ಈ ಕಲ್ಲು ಕರಗಸೋ ಧಂದೇದಾಗ ನನಗೇನು ನಂಬಿಗಿ ಕೊಡವಲ್ಲತು. ನೀವೆಲ್ಲ್ಯೋ ಭಾಳ ಲುಚ್ಚಾ ಮಂದೀ ಹಂಗ ಕಾಣಸ್ತೀರಿ. ನಿಮ್ಮ ಖರೇ ಹಕೀಕತ್ತು ಏನನ್ನೋದು ಹೇಳಿ ಹೋಗ್ರಿ.

(ಅಷ್ಟರಲ್ಲಿ ಬುಟ್ಟಿಗಳು ರಂಗಸ್ಥಳದ exit ಕಡೆ ತೇಲತೊಡಗುವವು.) ನಾ ಹಂಗ ಬಿಡೂದುಲ್ಲ ನಿಮ್ಮನ್ನ (ಬುಟ್ಟಿಗಳು ಮರೆಯಾಗುವವು) ಏ, ನಿಂದರ್ರ್ಯೋ ಲಫಂಗ ಸೋಳೆ ಮಕ್ಕಳs. ಹಲ್ಕಟ್ಟ ಸೋಳೇಮಕ್ಕಳs.

(ಡೋಣಿಯಲ್ಲಿ ಅವರನ್ನು ಬೆಂಬತ್ತುವನು. ಡೋಣಿ ಮರೆಯಾಗುತ್ತಾ) ಕಲ್ಲು ಕರಗಬೇಕಂತ ಕಲ್ಲು!

(ಈಗ ರಂಗದಲ್ಲಿ ಗೊಂಬೆಗಳ ಮೇಲೆ ಬೆಳಕು ಬೀಳುವದು.)

೧ ನೇ ಗೊಂಬೆ: ಗೆಳತೀ, ಕಲ್ಲು ಕರಗಿತೇನು?

೨ ನೇ ಗೊಂಬೆ: ಶುಶ್ ಸುಮ್ಮನಿರ್ರಿ ಅಂವಾ ಬಡಬಡಸಲಿಕ್ಕೆ ಹತ್ತಿಧಂಗ ಕೇಳಸ್ತದ. (ಪರದೆಯ ಹಿಂದಿನಿಂದ ಮಾತುಗಳು ಕೇಳಿ ಬರುವವು.)

ಖಂಬೀರ: ಚನ್ಯಾ, ಏನದು?

ಸಾರಥಿ: ಒಂದ ಒಡಕ ವನಿಕಿ ನೀರಾಗ ತೇಲಿ ಬರಲಿಕ್ಕೆ ಹತ್ತೇದ ಧಣಿ......

ಖಂಬೀರ: ತಗೋ ಅದನ. ಏನರ ಉಪಯೋಗ ಬಂದೀತು.

ಸಾರಥಿ: ಆಗಲಿ ಧಣಿ.

ಖಂಬೀರ: ಚನ್ಯಾ, ಅವೇನು?

ಸಾರಥಿ: ಒಂದು ಮುರುಕು ಛತ್ರಿ, ಹರಕ ಟೊಪಗಿ ತೇಲಿಕೊಂಡು ಬರಾಕತ್ಯಾವ ಧಣಿ.

ಖಂಬೀರ: ಅವನ್ನೂ ತಗೊ. ಯಾವ್ದರ ಕೆಲಸಕ್ಕೆ ಬಂದಾವು.

ಸಾರಥಿ: ಆಗಲಿ ಧಣಿ.

(ಈಗ ಬುಟ್ಟಿಗಳು ತೇಲುತ್ತಾ ಮತ್ತೆ ರಂಗಸ್ಥಳವನ್ನು ಪ್ರವೇಶಿಸುವವು. ಗೊಂಬೆಗಳು ಮತ್ತೆ ಕತ್ತಲಲ್ಲಿ. ಮುಂದಿನ ಬುಟ್ಟಿಯಲ್ಲಿ ಖಂಬೀರ. ತಲೆಯ ಮೇಲೆ ಹರಕು ಟೋಪಿ. ಒಡಕು ಒನಕೆಯಿಂದ ಹುಟ್ಟು ಹಾಕಿಕೊಂಡಂತೆ ನಟಿಸುತ್ತಿರುವನು. ಹಿಂದಿನ ಬುಟ್ಟಿಯಲ್ಲಿ ಸಾರಥಿ. ಛತ್ರೀ ಏರಿಸಿ ಖಂಬೀರನ ತಲೆಯ ಮೇಲೆ ಹಿಡಿದಿರುವನು. ಚನ್ನ anounce ಮಾಡುವವನಂತೆ ಈ ರೀತಿ ಕೂಗುವನು.)

ಸಾರಥಿ: ಕೇಳ್ರಿಪಾ ಕೇಳ್ರೀ. ಕಿವೀ ಇದ್ದವರೆಲ್ಲಾ ಕೇಳ್ರಿ. ನಮ್ಮ ಖಂಬೀರ ಕುಮಾರಾ ಜಲಪ್ರಯಾಣಕ್ಕ ಹೊಂಟಾನ. ಹೆಚ್ಚಿನ ಜ್ಞಾನಕ್ಕಾಗಿ ಜಲಪ್ರಯಾಣಕ್ಕ ಹೊಂಟಾನ.

(ಹಾಡುವನು. ಹಾಡು ಮುಗಿಯುವಂತೆ ಬುಟ್ಟಿಗಳು ರಂಗದ ಇನ್ನೊಂದು ತುದಿಯ ವರೆಗೆ ಚಲಿಸಿ ಮರೆಯಾಗುವವು.)
ಹರಕು ಬುಟ್ಟಿ ಹರಿಗೋಲಿನ್ಯಾಗ,
ಪ್ರವಾಸ ಹೊಂಟಾನ। ಖಂಬೀರ ಪ್ರವಾಸ ಹೊಂಟಾನ॥
ಒಡಕ ಒನಿಕೆ ಹುಟ್ಟು ಹಾಕ್ಕೊಂಡು,
ಪ್ರವಾಸ ಹೊಂಟಾನ। ಖಂಬೀರ ಪ್ರವಾಸ ಹೊಂಟಾನ॥
ಮುರಕು ಛತ್ರಿ, ಚಿಂದೀ ಟೊಪಗಿ,
ಪ್ರವಾಸ ಹೊಂಟಾನ। ಖಂಬೀರ ಪ್ರವಾಸ ಹೊಂಟಾನ॥
ಹುಚ್ಚ ಚನ್ಯಾನ ಹಿಂದ ಕಟಿಗೊಂಡು,
ಪ್ರವಾಸ ಹೊಂಟಾನ। ಖಂಬೀರ ಪ್ರವಾಸ ಹೊಂಟಾನ॥
(ಬುಟ್ಟಿಗಳು ಮರೆಯಾಗುತ್ತಿದ್ದಂತೆ ಇನ್ನೊಂದು ಪ್ರವೇಶದಿಂದ ಡೋಣಿ ರಂಗದ ಮೇಲೆ ಬರುವದು.)

ಡೋಣಿಯವನು: ನೀವು ಯಾರೂ ಅಂತ ಖರೇ ಹೇಳೋ ತನಕಾ ನಾ ನಿಮ್ಮನ್ನ ಬಿಡೂದುಲ್ಲಾ, ಏ ಲಫೊಟ ಸೂಳೀ ಮಕ್ಕಳ. ಅರೆ, ಹೋಗೆ ಬಿಟ್ರೇನು ಇವರಾಪನ—ನಾ ಬಿಡೊದುಲ್ರ್ಯೀ ನಿಮ್ಮನ್ನ ಲಡದೂ ಸೋಳೀ ಮಕ್ಕಳ. ಎಲ್ಲಿ ಹೋದೀರಿ ನೀವು? (ಹೀಗೆ ಅನ್ನುತ್ತಿದ್ದಂತೆ ಡೋಣಿ ಬುಟ್ಟಿಗಳು ಹೋದ ದಿಕ್ಕಿನಲ್ಲಿ ಹೋಗಿ ಮರೆಯಾಗುವದು. ಮತ್ತೆ ಗೊಂಬೆಗಳ ಮೇಲೆ ಬೆಳಕು.)
(ಹಾಡುವದು)

೨ ನೇ ಗೊಂಬೆ: ಕುದರಿ ಹೋತು ರಥಾ ಬಂತು. ಡುಂ. ಡುಂ—ಡುಂ. ಡುಂ. ರಥಾ ಹೋತು ಡೋಣಿ ಬಂತು. ಡುಂ. ಡುಂ—ಡುಂ. ಡುಂ. ಡೋಣಿ ಹೋತು. ಬುಟ್ಟಿ ಬಂತು. ಡುಂ. ಡುಂ.—ಡುಂ. ಡುಂ. ಬುಟ್ಟಿ ಹೋಗಿ...............

೧ ನೇ ಗೊಂಬೆ: (ನಡುವೆಯೇ ತಡೆದು) ಏ, ಗೆಳತಿ. ಅರ್ಧಾಕ್ಕೆ ನಿಂದರಿಸಿದೆಲ್ಲಾ ಖಂಬೀರನ ಕಥೀ? ಮುಂದೇನಾತು?

೨ ನೇ ಗೊಂಬೆ: ಆ ಮ್ಯಾಲೆ ಖಂಬೀರಕುಮಾರಾ ಒಂದ ಪ್ರತಿಜ್ಞಾ ಮಾಡಿದಾ. ಏನಂದ್ರ 'ಈ ಕುದರೀ ಪಳಗೀಸಿ ನಾ ಹೇಳಿಧಂಗ ಕೇಳೋ ಹಂಗ ಮಾಡಿ ಬಿಟ್ಟ ಜಾಗಕ್ಕೆ ವಾಪಸ ತರತೇನಿ' ಅಂತ. ಶರ್ಯತ್ತಲೇ ಕುದರೀ ಏರಿದಾ

೩ ನೇ ಗೊಂಬೆ: ಆದರ ಹಂಗ ಮಾಡಲಿಕ್ಕೆ ಆಗಲಿಲ್ಲಾ.

೪ ನೇ ಗೊಂಬೆ: ಕುದರಿ ತನ್ನ ಮನಸ್ಸಿ ಬಂಧಂಗ ರಭಸದಲೇ ಓಡಿಕೋತ ಹೋಗಿ ಬಿಡ್ತು. ಯಾರಿಗೂ ಅಸಗೊಳ್ಳೋ ಕುದರೀನs ಅಲ್ಲ ಅದು! ಖಂಬೀರಗ ಕುದರೀ ಬಿಟ್ಟು ಇಳೀಲಿಕ್ಕೂ ಆಗವಲ್ತು. ಅದು ಭೂಮೀ ಮ್ಯಾಲೆ ಗಾಳೀ ಹಂಗ ಓಡಿತು. ಆಕಾಶದಾಗ ಗರುಡನ ಹಂಗ ಹಾರಿತು.

೫ ನೇ ಗೊಂಬೆ: ಅಯ್ಯ! ಅದು ರೆಕ್ಕೀ ಕುದರಿ ಇತ್ತೇನು?

೪ ನೇ ಗೊಂಬೆ: (ಪ್ರಶ್ನೆಯನ್ನು ಗಮನಿಸದೇ) ಸಮುದ್ರದೊಳಗೆ ಮೀನಿನ ಹಂಗ ಈಜಿತು. ಕಡೀಕ ಆ ಬಿಟ್ಟದಂಥಾ ಬಿಳೀ ಕುದರಿ ಖಂಬೀರನ ತಗೊಂಡು ಅಟ್ಟಂಬಟ್ಟಂ ಅರಣ್ಯದಾಟ, ಆರು ಸಮುದ್ರ ದಾಟ ಏಳನೇ ಸಮುದ್ರ ಅಂವನ್ನ ಒಗದು ಮಾಯ ಆಗಿ ಬಿಡ್ತು. ಆ ಸಮುದ್ರದ ನಡಕೊಂದು ಬಂಡೆಗಲ್ಲು. ಆ ಬಂಡೀ ಮ್ಯಾಲೆ ಒಂದು ಗುಡಿ. ಆ ಗುಡಿ ಮುಂದೆ ಒಂದು ಎಂಥಾ ಗಾಳಿಗೂ ಆರದ ಸಣ್ಣ ದೀಪಾ. ಆ ಗುಡೀ ಒಳಗಿನ ದೇವರಿಗೆ ಬೇಡಿದ ಕಾಣಿಕೆ ನೀಡಿದ್ರ, ಕೇಳಿದ ವರಾ ಸಿಗ್ತsದ. ಖಂಬೀರಗ ತನ್ನ ಶರ್ಯತ್ತು ಗೆದೀಲಿಕ್ಕೆ ಒಂದು ಅವಕಾಶ. ಖಂಬೀರ ಗುಡೀ ಒಳಗ ಹೋದಾ. (ಒಮ್ಮೆಲೇ ಸುಮ್ಮನಾಗಿ ಬಿಡುವದು)

೬ ನೇ ಗೊಂಬೆ: ಮುಂದೇನಾತು? ಲಗೂ ಹೇಳs?

೭ ನೇ ಗೊಂಬೆ: ಹಿಂಗ್ಯಾಕ ಮಾಡತೀಯs ಯವ್ವಾ? ಮುಂದೇನಾತು? ಹೇಳು. ನಿನ್ನ ಕಾಲಿಗೆ ಬೀಳತೇನಿ ಹೇಳು.

೪ ನೇ ಗೊಂಬೆ: ನೀವೆಲ್ಲಾ ಒಂದ ಗಳಿಗಿ ಕಣ್ಣು ಮುಚ್ಚಿಕೊಂಡು ನಿದ್ದೀಮಾಡರಿ, ಘಂಟೆಗಳು ಬಾರಸೋ ಸಪ್ಪಳ ಕೇಳಿಸಿದ ಕೂಡಲೇ ಕಣ್ಣು ಬಿಡ್ರಿ. ಮುಂದಿನ ಕಥೀನ ಕಣ್ಣಾರೆ ನೋಡಿರಂತ.

(ಬೆಳಕು ಈಗ ಗೊಂಬೆಗಳಿಂದ ಮುಂದೆ ಬರುವದು. ರಟ್ಟಿನ ಮೇಲೆ ಸಮುದ್ರದ ಅಲೆಗಳ ಪೇಂಟಿಂಗ. ತಕ್ಕ ಹಿನ್ನೆಲೆ ಸಂಗೀತ. ಖಂಬೀರ, ಚನ್ನ್ಯಾ, ಬುಟ್ಟಿಗಳಲ್ಲಿ ಎದ್ದು ನಿಂತಿರುವರು.)

ಖಂಬೀರ: ಚನ್ನ್ಯಾ,

ಸಾರಥಿ: ಧಣೀ.

ಖಂಬೀರ: ನಾವು ನದೀ ಅಂತ ತಿಳ್ಕೊಂಡದ್ದು ಸಮುದ್ರ ಆಗಿಬಿಟ್ಟದಲ್ಲಲೇ ?

ಸಾರಥಿ: ನದೀ ಬಂದು ಸಮುದ್ರಕ್ಕೆ ಕೂಡಿರಬೇಕು ಧಣಿ.

ಖಂಬೀರ: ಕೂಡಲಿ ಬಿಡು. ನಾವೂ ಕೂಡೋಣಂತ. (ಇಬ್ಬರೂ ಕೂಡುವರು.)

ಖಂಬೀರ: ಚನ್ನ್ಯಾ,

ಸಾರಥಿ: ಧಣೀ,

ಖಂಬೀರ: ಹಂಗ ನೋಡಿದ್ರ ರಥದಕಿಂತಾ ಬುಟ್ಟೀನ ಛೇಸ ಬಿಡಲೇ.

ಸಾರಥಿ: ಯಾಕ ಧಣೀ ?

ಖಂಬೀರ: ಅಲ್ಲಿ ಕುದುರೀಗೆ ಭಾರ ಆಗೋಕ್ಕಿಂತಾ ಇಲ್ಲಿ ನಮ್ಮ ಮುಕಳೀ ಮ್ಯಾಲೆ ನಾವು ಕುತ್ತಿರತೇವಿ ನೋಡಲೇ.

ಸಾರಥಿ: ಹೌದ ಧಣೀ.

ಖಂಬೀರ: ಚನ್ನ್ಯಾ,

ಸಾರಥಿ: ಧಣೀ.

ಖಂಬೀರ: ಮನಸ್ಯಾ, ಯಾವಾಗಾದರೂ, ತನ್ನ ಕಾಲ ಮ್ಯಾಲೆ ತಾ ನಿಲ್ಲಬೇಕು. ತನ್ನ ಮುಕಳೀ ಮ್ಯಾಲೆ ತಾ ಕೂಡಬೇಕು. ಏನಂತಿ ?

ಸಾರಥಿ: ಕೂಡುತೇನಿ ಧಣಿ.

ಖಂಬೀರ: ಚನ್ನ್ಯಾ

ಸಾರಥಿ: ಧಣೀ

ಖಂಬೀರ: ನದೀ ಸೆಳವಿನ ಹೊಡತಾ ನೋಡಿದರ, ನಮ್ಮ ಊರಿಗೆ ಊರ ಕೊಚಿ ಗೊಂಡು ಹೋಗಿರಬೇಕಲ್ಲ ?

ಸಾರಥಿ: ಹಾಂಗ ಕಾಣತದ ಧಣೀ. ಅಂಥಂಗ ಧಣೀ, ಇನ್ನ ನೀ ಹಾದಿ ಗುರತಾ ಹ್ಯಾಂಗ ಇಟಗೊಳ್ಳೊಂವಾ ?

ಖಂಬೀರ: ಚನ್ನ್ಯಾ, ಇನ್ಯಾಕ ಹಾದಿ ಗುರತು? ನದೀ ರೋಷಕ್ಕ ನಮ್ಮೂರಿನ ಸೌಳ ಮಣ್ಣಿನ ಗೋಡಿಗಳೆಲ್ಲಾ ಕುಸದು ಬಿದ್ದಿರಬೇಕು. ತೊಗಲು ಕೆರಕೋತ ಕುತ್ತಿರೋ ಮುದಕರೆಲ್ಲಾ ಶಿಟದು ಹೋಗಿರಬೇಕು. ಥಣ್ಣಾನ್ನೀರು ಬಂದು ಸೀರಿ, ಧೋತ್ರದ ಒಳಗ ಹೊಕ್ಕಾಗ ನಮ್ಮೂರಿನ ಮಡಿವಂತ ಮಂದಿಗೆ ಪಾಪನs ಬಂದು ತಟ್ಟಿಧಂಗ ಅನಿಸಿರಬೇಕು. ಮುಂದ ಆ ನೀರಿನ್ಯಾಗ ಪಾಪಾ, ಪುಣ್ಯಾ, ಸೀರಿ, ಧೋತ್ರಾ ಎಲ್ಲಾ ಕೊಚಿಗೊಂಡು ಹೋಗಿರಬೇಕು. ದ್ಯಾಮವ್ವಾ ದುರಗವ್ವನ ಗುಡಿ, ಮುನಸೀಪಾಲ್ಟಿ, ಸಾಲಿ, ಕಚೇರಿ ಎಲ್ಲಾ ನದೀ ತಳಾ ಕಂಡಿರಬೇಕು.

ಸಾರಥಿ: ಹಾಂಗ ಅಂತ ಕಾಣಸ್ತsದ ಧಣಿ.

ಖಂಬೀರ: ಈ ಜಲಪ್ರಳಯದಾಗ, ನಾ ಒಬ್ಬೊಂವಾ ಮನು ಮಹರ್ಷಿ ಹಾಂಗ ಮುಂದಿನ ಪೀಳಗಿ ಉಳಸಲಿಕ್ಕೆ ಉಳದೇನಿ ನೋಡು.

ಸಾರಥಿ: ಮತ್ತ ನಾನು ಧಣೀ?

ಖಂಬೀರ: ಏ ಚನ್ನ್ಯಾ, ನಾನೂ ನೀನೂ ಬ್ಯಾರೆ ಬ್ಯಾರೆ ಏನಲೆ? ಎರಡು ದೇಹ ಒಂದು ಪ್ರಾಣೇನಪಾ. ಅದಿರಲಿ. ಭಾಳ ಬ್ಯಾಸರಾಗೇದ. ಒಂದ ಹಾಡ ಹಾಡು.

ಸಾರಥಿ: ನನಗ ಬರೋದಲ್ಲ ಧಣಿ. ನೀನೆ ಹಾಡು.

ಖಂಬೀರ: ಹಿಂಗs? ಹಂಗಾರ ಕೇಳು ಈ ಲಾವಣಿ. (ಹಾಡತೊಡಗುವನು.)
'ಬಾಳಿನ ಬಟ್ಯಾಗ, ಏನೇನು ಕಂಡಿ?
ಅಂಚಲ್ಲಿ ಹೊಂಚ್ಯಾವೋ, ನೈಲಾನು ಗುಂಡಿ'

ಸಾರಥಿ: ಸ್ವಲ್ಪ ತಡೀ ಧಣೀ. ಅಲ್ಲೇನು ಕಾಣಸಲಿಕ್ಹತ್ತೇದ ನೋಡು ಒಂದು ಬಂಡೀಗಲ್ಲು. ಅದರ ಮ್ಯಾಲೊಂದು ಗುಡಿ. ಗುಡಿ. ಮುಂದ ಒಂದು ದೀಪಾ. ಅಲ್ಲಾ ಧಣೀ. ಇಂಥಾ ಘಾಳಿ ವಳಗೂ ಅದು ಆರವಲ್ಲತಲ್ಲಾ?

ಖಂಬೀರ: (ಚಕಿತನಾಗಿ ಎದ್ದುನಿಂತು ತನಗೇ ಹೇಳಿಕೊಂಡಂತೆ)
ಗಾಳಿಗೆ ಆರದಂಥ ದೀಪ! (ಹರ್ಷದಿಂದ ಕುಣಿಯುವನು.) ಇನ್ನೂ ತಿಳಿಲಿಲ್ಲೇನು ಚನ್ನ್ಯಾ, ನಿನಗ? ಅದs ಅಲ್ಲೇನಲೇ ನಾವು ಮುಟ್ಟ ಬೇಕಾಗಿದ್ದ ಸ್ಥಳ? ನೆನಪ ಬರವಲ್ಲತೇನು ನಿನಗ? ಹಾದೀ ವಳಗ ಒಂದು ಶಕುನ ಏನು ಹೇಳಿತ್ತು? ಸಮುದ್ರದ ನಡಕ, ದೇವಸ್ಥಾನದ ಮುಂದ, ಆರದಂಥಾ ದೀಪ ಉರಿಸ್ತಿರತಾರ. ಅಲ್ಲೆ ಹೋಗಿ, ಕೇಳಿದ್ದ ಕಾಣಿಕೆ ಕೊಟ್ಟರ, ನೀವು ಹೋದ ಕೆಲಸ ಆಗತದ' ಅಂತ?

ಸಾರಥಿ: (ಸಂತೋಷದಿಂದ) ಹೌದಲ್ಲs! ಭಾಳ ಛೊಲೋ ಆತು ಬಿಡು ಧಣಿ. ನನಗೂ ರಗಡ ಚಿಂತಿ ಆಗಿತ್ತು, ನಮ್ಮ ಕೆಲಸ ಕಡೀಕರ ಆಗ್ತದೋ ಇಲ್ಲೋ ಅಂತ. ಹಂಗರ ಬುಟ್ಟಿ ಅತ್ಲಾಗ ತಿರಗಸೋಣಲ್ಲಾ?

ಖಂಬೀರ: ಚನ್ನ್ಯಾ, ಇನ್ನ ಈ ಬುಟ್ಟಿ–ಗಿಟ್ಟಿ ನಕಲೀ ವಾಹನಗಳಾಲ್ಲಾ ಉಪಯೋಗ ಬೀಳೂದುಲ್ಲಾ. ಅಲ್ಲಿ ಹೋಗಿ ಸೇರಬೇಕಂದ್ರ ನಮ್ಮ ಹೊಟ್ಟೀ ಮ್ಯಾಲೆ ನಾವು ಈಸಿಗೋತ ಹೋಗೋದ ಸೈ. ಬಾ. ಹೋಗೋಣು. (ರಂಗಸ್ಥಳದಲ್ಲಿ ಕತ್ತಲೆ ಇದ್ದಕಡೆ ಸಣ್ಣ ದೀಪ ಉರಿಯುತ್ತಿರುವದು. ನೀರಿಗೆ ಧುಮುಕಿ ಇಬ್ಬರೂ ಆಕಡೆ ಈಜಿದಂತೆ ನಟಿಸುವರು.)

ಚನ್ನ್ಯಾ, ಕೇಳಿಸತs ಗುಡಿ ಭಜನಿ ಶಬ್ದ? ಎಷ್ಟು ಛಲೋ ಅನಸ್ತದ ನೋಡು.

(ಇಷ್ಟು ರವರೆಗೆ ಮೆಲ್ಲಗಿದ್ದ ಭಜನೆ ಇವರು ಸಮೀಪಕ್ಕೆ ಹೋದಂತೆ ಗಟ್ಟಿಯಾಗಿ ಕೇಳಬರುವದು.)

"ಸುಳ್ಳೀನ ಬಲಿಯಾಗ ಸಿಗಬಿದ್ದೇ । ಶಿವನs
ಕಳ್ಳ ಹುದಲಾಗ ಹುಗಿ ಬಿದ್ದೇ । ಶಿವನs
ಮಳ್ಳನ ಇಲ್ಲಿ ಕೈ ಬಿಡಬೇಡೋ । ಶಿವನs
ಬಂಧನದಿಂದ ಕಾಪಾಡೋ ಶಿವನ । ಪರಶಿವನs

(ಕೊನೆಯ ಸಾಲಿನೊಡನೆ ಜೋರಾಗಿ ಗಂಟೆಗಳು ಬಾರಿಸುವವು. ತಕ್ಷಣ ಗೊಂಬೆಗಳ ಮೇಲೆ ಬೆಳಕು.)

೪ ನೇ ಗೊಂಬಿ: ಘಂಟೀ ಸಪ್ಪಳಾತು. ಎಲ್ಲಾರೂ ಕಣ್ಣು ಬಿಟ್ಟು ನೋಡ್ರೀ. ಖಂಬೀರ ಕುಮಾರಾ ಗುಡೀ ಒಳಗ ಬಂದಾನ. ದೇವರ ಮುಂದ ನಿಂತು ನಮುಸ್ಕಾರ ಮಾಡಿ ಅಲ್ಲಿ ಬೈರಾಗಿಗೆ ವರಾ ಕೇಳಲಿಕ್ಕೆ ಹತ್ಯಾನ. (ಈಗ ಗೊಂಬೆಗಳು, ಖಂಬೀರ, ಚನ್ನ, ಬೈರಾಗಿ, ದೇವರ ಮೂರ್ತಿ ಎಲ್ಲ ಬೆಳಕಿನಲ್ಲಿ.)

ಬೈರಾಗಿ: ನೀ ದೊಡ್ಡ ವರಾ ಕೇಳಲಿಕ್ಕೆ ಹತ್ತೀ, ನಿನಗ ದೊಡ್ಡ ಕಾಣಿಕಿ ಕೊಡಬೇಕಾಗ್ತದ.

ಖಂಬೀರ: ನನ್ನ ಕಡೇ ಇದ್ದದ್ದು ಬೇಕಾದ್ದು ಕೇಳ್ರಿ ಕೊಡತೇನಿ.

ಬೈರಾಗಿ: ನೋಡು, ಆ ಮ್ಯಾಲೆ ಹೆದರಿ ಇಲ್ಲಾ ಅಂದೀ.

ಖಂಬೀರ: ನೀವ ಕೇಳ್ಯರ ಕೇಳಿರಿ ನಾ ಕೊಟ್ಟ ತೀರತೀನಿ.

ಬೈರಾಗಿ: ಸರಿ. ನಿನ್ನ ರುಂಡಾ ಕತ್ತರಿಸಿ ಕೊಡು (ಖಂಬೀರನ ಕೈಗೆ ಕತ್ತಿ ಕೊಡುವನು.)

ಖಂಬೀರ: (ಬೆದರಿ) ಅಯ್ಯೊಯ್ಯೋ! ನನ ರುಂಡಾ ಹ್ಯಾಂಗ ಕತ್ತರಿಸಿ ಕೊಡಲಿ? ಬ್ಯಾರೆ ಏನರ ಕೊಡತೇನಿ. ಈ ವನಿಕಿ ತಗೋಳ್ರಿ.

ಸಾರಥಿ: ಎಷ್ಟ ಶ್ಯಾಣ್ಯಾ ನೋಡು ನಮ್ಮ ಖಂಬೀರಾ! ಯಾವ್ದರ ಕೆಲಸಕ್ಕೆ ಬರ್ತದ ಅಂತ ಮದಲ ವಿಚಾರ ಮಾಡಿ ಹ್ಯಾಂಗ ವನಿಕಿ ತಂದಾ.

ಬೈರಾಗಿ: ಅದರ್ಲೇ ಆಗೊದುಲ್ಲಾ

ಖಂಬೀರ: ಹಂಗರ ಈ ಛತ್ರಿ ತಗೊಳ್ರಿ.

ಸಾರಥಿ: ಎಷ್ಟ ಶ್ಯಾಣ್ಯಾ ನೋಡು ನಮ್ಮ ಖಂಬೀರಾ! ಯಾವ್ದರ ಕೆಲಸಕ್ಕೆ ಬರ್ತದ ಅಂತ ಮದಲ ವಿಚಾರ ಮಾಡಿ ಹ್ಯಾಂಗ ಛತ್ರಿ ತಂದಾ.

ಬೈರಾಗಿ: ಅದರ್ಲೇ ಆಗೊದುಲ್ಲಾ

ಖಂಬೀರ: ಹಂಗರ ಈ ಟೊಪಗಿ ತಕ್ಕೊಳ್ರೀ.

ಸಾರಥಿ: ಎಷ್ಟ ಶ್ಯಾಣ್ಯಾ ನೋಡು ನಮ್ಮ ಖಂಬೀರಾ! ಯಾವ್ದರ ಕೆಲಸಕ್ಕೆ ಬರ್ತದ ಅಂತ ಮದಲ ವಿಚಾರ ಮಾಡಿ ಹ್ಯಾಂಗ ಟೊಪಗೀ ತಂದಾ.

ಬೈರಾಗಿ: ಅದರ್ಲೇ ಆಗೊದುಲ್ಲಾ.

ಖಂಬೀರ: ಹಂಗರ ಈ ಚನ್ನ್ಯಾನ ರುಂಡಾ ತಕ್ಕೊಳ್ರೀ.

ಸಾರಥಿ: ಎಷ್ಟ ಶ್ಯಾಣ್ಯಾ ನೋಡು ನಮ್ಮ ಖಂಬೀರಾ! ಯಾವ್ದರ ಕೆಲಸಕ್ಕೆ ಬರ್ತೇನಿ ಅಂತ ಮದಲ ವಿಚಾರ ಮಾಡಿ ನನ್ನ ಜೋಡಿ ಕರ್ಕೊಂಡು ಬಂದಾ. (ಹೀಗೆ ಅಂದ ನಂತರ ಖಂಬೀರನ ಮಾತಿನ ಅರ್ಥ ತಲೆಗೆ ಮುಟ್ಟಿ, ಹೌಹಾರಿ) ಏನೋ ಮಾರಾಯಾ! ನನ್ನ ತಲೀ ತಗ್ಯಾಕ ನಿಂತೀ ಅಲ್ಲಾ! ನಾ ಒಲ್ಯ್ಯೊ ಯಪ್ಪಾ! ಏನ ಬಡವರ ಮಕ್ಕಳ್ನ ಬಾಳೀಗೇಡ ಮಾಡತೀ ಏನ?

ಖಂಬೀರ: ಚನ್ನ್ಯಾ, ನಾ ಮದಲ ಹೇಳಿಲ್ಲೇನಲೇ ನಾವಿಬ್ರು ಎರಡು ದೇಹಾ, ಒಂದ ಜೀವಾ ಅಂತ? ಏನಾತ ನಿನ್ನ ತಲೀ ಹೋದ್ರ? ಬಾ ಇಲ್ಲೆ. ನಿನ್ನ ತಲೀ ಕೊಡು. (ಕತ್ತಿ ಎತ್ತುವನು. ಚನ್ನ ತಪ್ಪಿಸಿ ಕೊಳ್ಳಲು ಗುಡಿಯಲ್ಲಿ ಓಡಾಡುವನು.)

ಚನ್ನ: ಕಾಪಾಡ್ರ್ಯಪೋ. ಯಾರರು ಕಾಪಾಡ್ರ್ಯಪೋ. ನನ್ನ ಪ್ರಾಣಾ ಕಾಪಾಡ್ರ್ಯಪೋ.

ಖಂಬೀರ: (ಅವರ ಹಿಂದೆ ಓಡುತ್ತ) ಚನ್ನ್ಯಾ. ಜೀವಗಳ್ಯಾ! ಎಲ್ಲಿ ಓಡಿ ಹೋಗ್ತಿ! ಕೊಡು ನಿನ್ನ ತಲೀನ. (ಎಡಗೈಯಿಂದ ಚನ್ನನ ಕೂದಲು ಹಿಡಿಯುವನು. ಚನ್ನ ಮೊಳಕಾಲೂರುವನು.)

ಸಾರಥಿ: ಕೈ ಮುಗಿತೇನಪಾ. ನನ್ನ ತಲೀ ಕಡೀಬ್ಯಾಡಾ. ನೀ ಸತ್ಕುಲ ಪ್ರಸೂತ ಅದಿ. ವಿದ್ಯಾವಂತ ಅದಿ. ಬುದ್ಧಿಜೀವಿ ಅದಿ. ನಿನ್ನ ತಲೀ ಕಿಮ್ಮತ್ತು ನನ್ನ ತಲೀಗೆ ಹ್ಯಾಂಗಪಾ ಬಂದೀತು? ತಿರಗಿ ನೋಡಿದ್ರೆ ಆ ವನಿಕಿ, ಛತ್ರಿ, ಟೊಪಗಿ, ಅಷ್ಟ ಸುದ್ಧಾ ನನ್ನ ತಲೀಗೆ ಕಿಮ್ಮತ್ತಿಲ್ಲಾ.

ಖಂಬೀರ: (ಕತ್ತಿ ಎತ್ತುವನು) ಚನ್ನ್ಯಾ, ನೀ ಏನ ಹೇಳು. ಬೇವರ್ಸಿ ಸೂಳೆ ಮಗನ. ನಿನ್ನ ತಲೀ ಕಡದ ತೀರ್ತೇನಿ.

ಬೈರಾಗಿ: ಅವನ್ನ ಬಿಡು. ಈ ಕೆಲಸ ಆಗಬೇಕಂದ್ರೆ ನಿನ್ನ ತಲೀ ಬೀಳಲಿಕ್ಕೇ ಬೇಕು.

ಖಂಬೀರ: (ವಿಚಾರ ಮಾಡುತ್ತ) ಹಂಗಾದ್ಮೇಲೆ ನನ್ನ ತಲೀ ಕತ್ತರಿಸಿಗೊಳ್ಳಿಕ್ಕೇ ಬೇಕು. ಇಲ್ಲಿದ್ರೆ ಬದಕ್ಯೊ ಸತ್ಹಾಂಗ! ಎಷ್ಟು ದಿವಸಂತ ಹೀಂಗ ಗೊಳ್ಳಾಗಿರೋದು? ಈ ನಾಟಕಕ್ಕ ಮುಕ್ತಾಯ ಮಾಡಲೇ ಬೇಕು. ಚನ್ನ್ಯಾ, ನಿರ್ಧಾರ ಮಾಡಿದೆ. ತಲೀ ಕತ್ತರಿಸಿಕೊಳ್ಳತೇನಿ.

ಸಾರಥಿ: ಬರೋಬರಿ ನಿರ್ಧಾರ ಧಣೀ.

ಖಂಬೀರ: (ಗೊಂಬೆಗಳಿಗೆ) ನೀವು ಕಡೀ—ಕಡೀ—ಕಡೀ ಅಂತ ಜೋರಲೇ ಕೂಗಿಕೋತ ಇರ್ರಿ ಆ ಗದ್ದಲದಾಗ ನೋವಾಗಿದ್ದ ತಿಳಿಯೂದುಲ್ಲಾ. ಚನ್ನ್ಯಾ, ನೀ ಮೂರ ಎಣಸು.

(ಖಂಬೀರ ಕತ್ತಿಯನ್ನೆತ್ತಿ ತಯಾರಾಗಿ ನಿಲ್ಲುವನು. ಮುಖದ ಮೇಲೆ ನಿರ್ಧಾರದ ಕಳೆ ಬೆಳಗುತ್ತಿದೆ. ಗೊಂಬೆಗಳು ಕಡೀ—ಕಡೀ—ಕಡೀ—ಎಂದು ಬೊಬ್ಬಿಡುವಾಗ)

ಚನ್ನ: ಒಂದು......ಎರಡು......

ಖಂಬೀರ: (ಒಮ್ಮೆಲೇ ಆರ್ತ, ಸೋತದನಿಯಲ್ಲಿ) ಚನ್ನ್ಯಾ,

ಚನ್ನ: ಧಣೀ

ಖಂಬೀರ: ತಲೀ ಕಡಕೋಳ್ಳ್ಯೋ, ಬ್ಯಾಡಲೇ?

(ತೆರೆ)

## ಈ ಸಂಪುಟದ ಸಂಪಾದಕರು—ನಾಟಕಕಾರರು

**ಸಿಂಧುವಳ್ಳಿ ಅನಂತಮೂರ್ತಿ:** ಮೈಸೂರು ಜಿಲ್ಲೆಯ ಕಂಪಲಾಪುರದಲ್ಲಿ ಜನನ 1931. ಮೈಸೂರು ಮತ್ತು ಧಾರವಾಡಗಳಲ್ಲಿ ವಿದ್ಯಾಭ್ಯಾಸ (ಎಂ. ಎ;) 'ಗುಬ್ಬಿಕಂಪನಿ' ಮಹಾ ಪ್ರಬಂಧಕ್ಕೆ ಮೈಸೂರು ವಿಶ್ವವಿದ್ಯಾನಿಲಯ ಪಿ ಎಚ್. ಡಿ; ಪದವಿ ನೀಡಿದೆ. ಕೆಲವು ಕಾಲ ಮೈಸೂರಿನ ಬನುಮಯ್ಯ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು ಹಾಗೂ ವಿಭಾಗಮುಖ್ಯರು, ಪ್ರಕಟಣೆಗಳು—ವಿಚಾರ: 'ರಂಗ', ನಾಟಕ: 'ಕಾಡುಪ್ರಾಣಿ' (ರೂಪಾಂತರ); ರಂಗಕ್ಕೆ ಸಂಬಂಧಿಸಿದಂತೆ ಕೆಲವು ಲೇಖನಗಳು. ಮೈಸೂರಿನ ಸುಪ್ರಸಿದ್ಧ ಹವ್ಯಾಸಿಗಳ ತಂಡ 'ಸಮತೆಂತೋ' ಚಟುವಟಿಕೆಗಳ ಕೇಂದ್ರ ವ್ಯಕ್ತಿ. 'ರಕ್ತಾಕ್ಷಿ', 'ಕನ್ನಡ ಮೃಚ್ಛಕಟಿಕ' 'ಗೋಡೆ ಬೇಕೆ? ಗೋಡೆ', 'ಬಿರುದಂತೆಂಬರಗಂಡ', 'ಭಗವದಜ್ಜುಕೀಯ', 'ನಂಕಂಪ್ನಿ', 'ಘಾಸಿರಾಂಕೊತ್ವಾಲ್', 'ಹಯವದನ', 'ಸದಾರಮೆ', 'ವಂಶವೃಕ್ಷ'—ಇವು ಇವರು ನಿರ್ದೇಶಿಸಿದ ಕೆಲವು ನಾಟಕಗಳು. 'ಋಷ್ಯಶೃಂಗ', 'ಖಂಡವಿದೆಕೊ ಮಾಂಸವಿದೆಕೊ', 'ಆಕ್ರಮಣ', 'ಎಲ್ಲಿಂದಲೋ ಬಂದವರು',—ಇವರು ಅಭಿನಯಿಸಿದ ಚಿತ್ರಗಳು. ಈಗ ನಾಟಕ ಶಾಸ್ತ್ರದ ಪ್ರಾಧ್ಯಾಪಕರು ಹಾಗೂ ಪ್ರಿನ್ಸಿಪಲ್, ಮೈಸೂರು ವಿಶ್ವವಿದ್ಯಾನಿಲಯ ಲಲಿತಕಲಾ ಕಾಲೇಜು.

* * * * *

**ಪರ್ವತವಾಣಿ (ಪಿ. ನರಸಿಂಗರಾವ್):** ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಪರ್ವತವಾಡಿಯಲ್ಲಿ ಜನನ 1911. ಬೆಂಗಳೂರು ಮತ್ತು ಮೈಸೂರುಗಳಲ್ಲಿ ವಿದ್ಯಾಭ್ಯಾಸ (ಬಿ. ಎ. ಆನರ್ಸ್). ಸ್ವಲ್ಪಕಾಲ ಹೈಸ್ಕೂಲಿನಲ್ಲಿ ಅಧ್ಯಾಪಕ ವೃತ್ತಿ. ಅರಣ್ಯ ಇಲಾಖೆಯಲ್ಲಿ ಸತತವಾಗಿ ಮೂವತ್ತೆರಡು ವರ್ಷಗಳ ಸೇವೆಯ ನಂತರ ನಿವೃತ್ತಿ. ಕನ್ನಡ ಸಾಹಿತ್ಯ ಪರಿಷತ್ತಿನಿಂದ ಸುವರ್ಣ ಮಹೋತ್ಸವ ಸಮಯದಲ್ಲಿ ಗೌರವ. ಕರ್ನಾಟಕ ಸಾಹಿತ್ಯ ಅಕಾದೆಮಿ ಪ್ರಶಸ್ತಿ. ಕೇಂದ್ರ ಸಂಗೀತ ನಾಟಕ ಅಕಾದೆಮಿ ಪ್ರಶಸ್ತಿ. ಪ್ರಕಟಣೆ—ನಾಟಕಗಳು ಮೂವತ್ತಾರಕ್ಕೂ ಮಿಕ್ಕು ಸ್ವತಂತ್ರ; ಇಪ್ಪತ್ತೈದಕ್ಕೂ ಮಿಕ್ಕು ರೂಪಾಂತರಗಳು; ಆರು ಅನುವಾದಗಳು. ರಂಗನಟ ಹಾಗು ನಿರ್ದೇಶಕರು. ಈಗ ಬೆಂಗಳೂರಿನಲ್ಲಿ ವಾಸವಾಗಿರುತ್ತಾರೆ.

**ಎನ್ಕೆ (ಎನ್. ಕುಲಕರ್ಣಿ):** ಧಾರವಾಡ ಜಿಲ್ಲೆಯ ಗದುಗಿನಲ್ಲಿ ಜನನ 1913. ಗದಗು, ಧಾರವಾಡ, ಸಾಂಗ್ಲಿ ಮತ್ತು ಬೆಳಗಾವಿಯಲ್ಲಿ ವಿದ್ಯಾಭ್ಯಾಸ

(ಎಂ. ಎ; ಬಿ. ಟಿ.). ಕೆಲವು ವರ್ಷ ಶಿಕ್ಷಕ, ಸಂಪಾದಕ, ಸಂಶೋಧಕ. ಅಖಿಲ ಭಾರತ ಆಕಾಶವಾಣಿಯಲ್ಲಿ ಸತತವಾಗಿ ಪ್ರೋಗ್ರಾಂ ಎಕ್ಸಿಕ್ಯೂಟೀವ್ ಆಗಿ ಇಪ್ಪತ್ತೈದು ವರ್ಷಗಳ ಸೇವೆಯ ನಂತರ ನಿವೃತ್ತಿ. ಪ್ರಕಟಣೆ—ಕಾದಂಬರಿ: 'ಸಾವಿನ ಉಡಿಯಲ್ಲಿ', 'ಎರಡನೆಯ ಸಂಬಂಧ' ಇತ್ಯಾದಿ. ನಾಟಕಗಳು: 'ಹತ್ತು ಏಕಾಂಕ ಸಂಗ್ರಹ'. ಹರಟೆ: ಮೂರು ಸಂಗ್ರಹ. ಸಾಹಿತ್ಯವಿಮರ್ಶೆ: 'ಕನ್ನಡ ಸಾಹಿತ್ಯವಾಹಿನಿ', 'ಕುಮಾರವ್ಯಾಸ ಮತ್ತು ಕೃಷ್ಣ ಕಥೆ' ಇತ್ಯಾದಿ. ಚರಿತ್ರೆ: 'ಗರೂಡ ಸದಾಶಿವರಾಯರು', 'ಲೋಕೂರ ನಾರಾಯಣರಾಯರು' ಇತ್ಯಾದಿ. ಈಗ ಧಾರವಾಡದಲ್ಲಿ ವಾಸವಾಗಿರುತ್ತಾರೆ.

**ಕೀರ್ತಿನಾಥ ಕುರ್ತಕೋಟಿ:** ಧಾರವಾಡ ಜಿಲ್ಲೆಯ ಗದುಗಿನಲ್ಲಿ ಜನನ 1928. ಗದಗು ಮತ್ತು ಧಾರವಾಡಗಳಲ್ಲಿ ವಿದ್ಯಾಭ್ಯಾಸ (ಎಂ. ಎ.) 1971 ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. ಪ್ರಕಟಣೆಗಳು—ನಾಟಕ: ಸ್ವಪ್ನದರ್ಶಿ. ಮತ್ತು ಇತರ ಗೀತ ನಾಟಕಗಳು', 'ಆಮನಿ'. ವಿಮರ್ಶೆ: 'ಯುಗಧರ್ಮ ಮತ್ತು ಸಾಹಿತ್ಯ ದರ್ಶನ', 'ನವ್ಯ—ಕಾವ್ಯ—ಪ್ರಯೋಗ', 'ಅಸಂಗತ ನಾಟಕ', 'ಕುಮಾರವ್ಯಾಸ', 'ಭೃಂಗದ ಬೆನ್ನೇರಿ'. ಸಂಗೀತನಾಟಕಗಳಲ್ಲಿ ಹೆಚ್ಚಿನ ಅಭಿರುಚಿ. ಈಗ ಸರದಾರ ಪಟೇಲ ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ರೀಡರ್ ಆಗಿ ಕೆಲಸ ಮಾಡುತ್ತಿದ್ದಾರೆ.

**ಚಂದ್ರಕಾಂತ ಕುಸನೂರ:** ಕಲ್ಬುರ್ಗಿಯಲ್ಲಿ ಜನನ 1931. ಹೈದರಾಬಾದಿನಲ್ಲಿ ವಿದ್ಯಾಭ್ಯಾಸ (ಎಂ. ಎ; ಬಿ. ಇಡಿ.). ಪ್ರಕಟಣೆಗಳು—ಕಾವ್ಯ: 'ನಂದಿಕೋಲು', ಕಾದಂಬರಿ: 'ಚರ್ಚ್‌ಸ್ಟ್ರೀಟ್', ನಾಟಕ: 'ಹಳ್ಳಾ ಕೊಳ್ಳಾ ನೀರು', 'ಮೂರು ಅಸಂಗತ ನಾಟಕಗಳು', 'ನಾಲ್ಕು ಅಸಂಗತ ನಾಟಕಗಳು', 'ಕನಸು', ಹಿಂದಿಯಲ್ಲಿ ಎರಡು ಪುಸ್ತಕಗಳು. ಈಗ ಬೆಳಗಾವಿ ವಿಭಾಗದಲ್ಲಿ ಕನ್ನಡ—ಸಂಸ್ಕೃತಿ ಕಛೇರಿಯಲ್ಲಿ ಸಹಾಯಕ ನಿರ್ದೇಶಕರು.

**ನ. ರತ್ನ:** ತಮಿಳುನಾಡಿನ ಚಿದಂಬರಂನಲ್ಲಿ ಜನನ 1934. ಬೆಂಗಳೂರು, ಮೈಸೂರು ಮತ್ತು ಅಮೇರಿಕೆಯ ಬ್ಲೂಮಿಂಗ್‌ಟನ್ ಗಳಲ್ಲಿ ವಿದ್ಯಾಭ್ಯಾಸ (ಎಂ. ಎ; ಪಿ ಎಚ್. ಡಿ.). ಪ್ರಕಟಣೆಗಳು—ನಾಟಕ: 'ಎಲ್ಲಿಗೆ?', 'ಗೋಡೆ ಬೇಕೆ? ಗೋಡೆ', 'ಬೊಂತೆ', 'ಹೆದ್ದಾರಿಯಲ್ಲಿ' (ಅನುವಾದ), 'ಕಳ್ಳಾ ಕಳ್ಳಾ ಬಚ್ಚಿಟ್ಕೋ', ಮಕ್ಕಳ ಸಿನಿಮಾ ಕಥೆ: 'ನಿಮ್ಮ ಓಟು ಯಾರಿಗೆ?', 'ರೈಲು', ಹಲವು ನಾಟಕಗಳನ್ನು ನಿರ್ದೇಶಿಸಿದ ಅನುಭವ. 'ಸ್ವಪ್ನ ವಾಸವದತ್ತ', 'ಎಲ್ಲಿಗೆ', 'ಕದಡಿದ ನೀರು',—ಅವರು ನಿರ್ದೇಶಿಸಿದ ಕೆಲವು ನಾಟಕಗಳು. ಋಷ್ಯಶೃಂಗ ಸಿನಿಮಾದಲ್ಲಿನ ಪಾತ್ರಕ್ಕಾಗಿ ಕರ್ನಾಟಕ ಸರ್ಕಾರದ ಬಹುಮಾನ. ಈಗ ಮೈಸೂರಿನ ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯ ನಿರ್ದೇಶಕರು.

**ಪಿ. ಲಂಕೇಶ್:** ಶಿವಮೊಗ್ಗ ಜಿಲ್ಲೆಯ ಕೊನಗವಳ್ಳಿಯಲ್ಲಿ ಜನನ 1935. ಶಿವಮೊಗ್ಗ, ಬೆಂಗಳೂರುಗಳಲ್ಲಿ ವಿದ್ಯಾಭ್ಯಾಸ (ಎಂ. ಎ;). ಪ್ರಕಟಣೆಗಳು—ಕಾವ್ಯ: 'ಬಿಚ್ಚು', 'ತಲೆ ಮಾರು', ಕಥೆ: 'ನಾನಲ್ಲ', 'ಉಮಾಪತಿಯ ಸ್ಕಾಲರ್‌ಷಿಪ್ ಯಾತ್ರೆ', ಕಾದಂಬರಿ: 'ಬಿರುಕು', 'ಮುಸ್ಸಂಜೆಯ ಕಥಾ ಪ್ರಸಂಗ', ವಿಮರ್ಶೆ: 'ಪ್ರಸ್ತುತ', 'ನವ್ಯ ನಾಟಕ', 'ಕಂಡದ್ದು ಕಂಡ ಹಾಗೆ', ನಾಟಕ: 'ಬಿರುಕು', 'ಸಂಕ್ರಾಂತಿ', 'ಏಳು ನಾಟಕಗಳು'. ಅನುವಾದ: 'ದೊರೆ ಈಡಿಪಸ್', 'ಅಂತಿಗೊನೆ', ಚಿತ್ರನಿರ್ದೇಶನ: 'ಪಲ್ಲವಿ', 'ಅನುರೂಪ', 'ಖಂಡವಿದೆಕೊ–ಮಾಂಸವಿದೆಕೊ', 'ಎಲ್ಲಿಂದಲೋ ಬಂದವರು', ಸಂಪಾದಕರು: 'ಲಂಕೇಶ್ ಪತ್ರಿಕೆ', ಈಗ ಬೆಂಗಳೂರಿನಲ್ಲಿ ನೆಲಸಿದ್ದಾರೆ.

**ಗಿರೀಶ ಕಾರ್ನಾಡ:** ಧಾರವಾಡದಲ್ಲಿ ಜನನ 1938. ಧಾರವಾಡ ಮತ್ತು ಇಂಗ್ಲೆಂಡ್‌ನಲ್ಲಿ ವಿದ್ಯಾಭ್ಯಾಸ (ಎಂ. ಎ.). ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್ ಹಾಗೂ ಪುಣೆ ಫಿಲ್ಮ್ ಇನ್ಸ್‌ಟಿಟ್ಯೂಟ್‌ನಲ್ಲಿ ಕೆಲವು ಕಾಲ ವೃತ್ತಿ. ರಾಜ್ಯ ಸರ್ಕಾರದ ಪ್ರಶಸ್ತಿ. ಭಾರತ ಸರ್ಕಾರದಿಂದ ಪದ್ಮಶ್ರೀ ಪ್ರಶಸ್ತಿ. ಪ್ರಕಟಣೆಗಳು—ನಾಟಕ: 'ಯಯಾತಿ', 'ತುಘಲಕ್', 'ಹಯವದನ', 'ಹಿಟ್ಟಿನ ಹುಂಜ', 'ಅಂಜುಮಲ್ಲಿಗೆ', ಚಿತ್ರನಿರ್ದೇಶನ: 'ವಂಶವೃಕ್ಷ', 'ಒಂದಾನೊಂದು ಕಾಲದಲ್ಲಿ', 'ತಬ್ಬಲಿಯು ನೀನಾದೆ ಮಗನೆ', 'ಕಾಡು', ನಾಟಕ ಹಾಗೂ ಸಿನಿಮಾಗಳಲ್ಲಿ ಅಭಿನಯ. ಈಗ ಹೆಚ್ಚಿಗೆ ಹಿಂದೀ ಸಿನಿಮಾಗಳಲ್ಲಿ ಅಭಿಯಿಸುತ್ತಾ ಮುಂಬಯಿಯನ್ನು ಕೇಂದ್ರವಾಗಿ ಮಾಡಿ ಕೊಂಡಿದ್ದಾರೆ.

**ಎಂ. ಎಸ್. ಕೆ. ಪ್ರಭು:** ಮೈಸೂರಿನಲ್ಲಿ ಜನನ 1938. ಮೈಸೂರಿನಲ್ಲಿ ವಿದ್ಯಾಭ್ಯಾಸ (ಎಂ. ಎ.). ರಾಜ್ಯ ಸಾಹಿತ್ಯ ನಾಟಕ ಅಕಾದೆಮಿಯಿಂದ 1979ರಲ್ಲಿ ನಾಟಕ ಪ್ರಶಸ್ತಿ. ಪ್ರಕಟಣೆಗಳು—ನಾಟಕ: 'ಬಕ', 'ಮಹಾಪ್ರಸ್ಥಾನ', 'ಶಬ್ದಕ್ಕಂಜಿದೊಡೆಂತಯ್ಯ', 'ಸಾರ್ವಜನಿಕ ರಸ್ತೆ ಅಲ್ಲ'. ಕಥೆ: 'ಬೆತ್ತಲೆ ಅರಸನ ರಾಜ ರಹಸ್ಯ'. ಈಗ ಆಲ್ ಇಂಡಿಯಾ ರೇಡಿಯೋದಲ್ಲಿ ಪ್ರೋಗ್ರಾಂ ಎಗ್ಸಿಕ್ಯುಟೀವ್ ಆಗಿ ಧಾರವಾಡದಲ್ಲಿರುತ್ತಾರೆ.

**ಚಂದ್ರಶೇಖರ ಕಂಬಾರ:** ಬೆಳಗಾವಿ ಜಿಲ್ಲೆಯ ಘೋಡಗೇರಿಯಲ್ಲಿ ಜನನ 1938. ಘೋಡಗೇರಿ, ಗೋಕಾಕ, ಬೆಳಗಾವಿ ಮತ್ತು ಧಾರವಾಡಗಳಲ್ಲಿ ವಿದ್ಯಾಭ್ಯಾಸ (ಎಂ. ಎ. ಪಿ ಎಚ್. ಡಿ.). ಬೆಳಗಾವಿ, ಸಾಗರ, ಉಡುಪಿ, ಶಿಕಾಗೋಗಳಲ್ಲಿ ಕೆಲವು ಕಾಲ ಅಧ್ಯಾಪಕವೃತ್ತಿ. 1974 ರಲ್ಲಿ ಭಾರತದ ಭಾಷೆಗಳಲ್ಲಿ ಶ್ರೇಷ್ಠ ನಾಟಕವೆಂದು 'ಜೋಕುಮಾರಸ್ವಾಮಿ' ಗೆ ಭಾರತೀಯ ನಾಟ್ಯ ಸಂಘದ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ ಪ್ರಶಸ್ತಿ. ಪ್ರಕಟಣೆಗಳು—ಕಾವ್ಯ: 'ಮುಗುಳು', 'ಹೇಳತೇನ ಕೇಳ', 'ತಕರಾರಿನವರು'. ಸಂಶೋಧನೆ:

'ಉತ್ತರ ಕರ್ನಾಟಕದ ಜನಪದ ರಂಗಭೂಮಿ'. ನಾಟಕ: 'ನಾರ್ಸಿಸಸ್', 'ಚಾಳೇಶ', 'ಋಷ್ಯಶೃಂಗ', 'ಜೋಕುಮಾರಸ್ವಾಮಿ', 'ಜೈ ಸಿದ್ಧನಾಯ್ಕ', 'ಖರೋಖರ', 'ಅಲೀಬಾಬ ಮತ್ತು ನಲವತ್ತು ಕಳ್ಳರು', 'ಸಂಗ್ಯಾಬಾಳ್ಯಾ', 'ಕಾಡುಕುದುರೆ', 'ನಾಯೀ ಕಥೆ', ಚಿತ್ರನಿರ್ದೇಶನ: 'ಕಾಡುಕುದುರೆ, ಸಂಗೀತಾ. ಈಗ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ರೀಡರ್.

**ಚಂದ್ರಶೇಖರ ಪಾಟೀಲ:** ಧಾರವಾಡ ಜಿಲ್ಲೆಯ ಹತ್ತೀ ಮತ್ತೂರಿನಲ್ಲಿ ಜನನ 1939. ಹತ್ತೀ ಮತ್ತೂರು, ಹಾವೇರಿ, ಧಾರವಾಡ, ಹೈದರಾಬಾದ್ ಮತ್ತು ಇಂಗ್ಲೆಂಡುಗಳಲ್ಲಿ ವಿದ್ಯಾಭ್ಯಾಸ (ಎಂ. ಎ, ಎಂ. ಎ;). ಪ್ರಕಟಣೆಗಳು. —ಕಾವ್ಯ: 'ಬಾನುಲಿ', 'ಮಧ್ಯಬಿಂದು', 'ಹತ್ತೊಂಬತ್ತು ಕವನಗಳು', ನಾಟಕ: 'ಎರಡು ನಾಟಕಗಳು', 'ಮೂರು ನಾಟಕಗಳು', 'ಗೋಕರ್ಣದ ಗೌಡಶಾನಿ', 'ಜಗದಂಬೆಯ ಬೀದಿ ನಾಟಕ', ಸಂಪಾದಕರು: 'ಸಂಕ್ರಮಣ' —ಮಾಸಿಕ. ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ರೀಡರ್.

**ವಿಜಯಾ:** ಜನನ 1942. ಪ್ರಕಟಣೆಗಳು—ನಾಟಕ: 'ಬಂದರೋ ಬಂದರು', 'ಧನ್ವಂತರಿಯ ಚಿಕಿತ್ಸೆ', (ಕುವೆಂಪು ಅವರ ಮೂಲಕಥೆಯ ಆಧಾರದ ಮೇಲೆ ರಚಿಸಿದ ನಾಟಕ) 'ಮಾನಿಷಾದ' (ಗಿರೀಶ್ ಕಾರ್ನಾಡರ ನಾಟಕದ ಆಧಾರದ ಮೇಲೆ ರಚಿಸಿದ ಬೊಂಬೆ ರೂಪ). ವಿಮರ್ಶೆ: 'ಸಣ್ಣ ಕತೆಯ ಸೊಗಸು', 'ಮಾತಿನಿಂದ ಲೇಖನಿಗೆ'. ತುಷಾರ ಪತ್ರಿಕೆಯ ಉಪ ಸಂಪಾದಕರು. ಉದಯವಾಣಿ ಪತ್ರಿಕೆಯ ವರದಿಗಾರರು. ಚಲನಚಿತ್ರ ವಿಮರ್ಶಕರು. ಈಗ ಬೆಂಗಳೂರಿನಲ್ಲಿ ಇರುತ್ತಾರೆ.

**ಶ್ರೀನಿವಾಸರಾಜು:** ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರದಲ್ಲಿ ಜನನ 1942. ಚಿಕ್ಕಬಳ್ಳಾಪುರ ಮತ್ತು ಬೆಂಗಳೂರಿನಲ್ಲಿ ವಿದ್ಯಾಭ್ಯಾಸ (ಎಂ. ಎ, ಡಿಪ್ಲೊಮಾ ಇನ್ ಇಂಡಾಲಜಿ). ಪ್ರಕಟಣೆಗಳು—ನಾಟಕ: 'ಐದು ಮೂಕ ನಾಟಕಗಳು', 'ಎರಡು ಏಕಾಂಕ ನಾಟಕಗಳು', ಸಂಕೀರ್ಣ: 'ಕರ್ನಾಟಕ ಸಂಘ ಮತ್ತು ಡಾ. ಜಿ. ಪಿ. ರಾಜರತ್ನಂ', 'ಬಾವಿ ಕಟ್ಟೆಯ ಬಳಿ'. ಈಗ ಬೆಂಗಳೂರಿನಲ್ಲಿ ಕ್ರೈಸ್ಟ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿರುತ್ತಾರೆ.

**ವ್ಯಾಸ ದೇಶಪಾಂಡೆ:** ಇವರು ಕರ್ನಾಟಕ ಸರ್ಕಾರದ ರೆವಿನ್ಯೂ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

(ಎಂ. ಎ; ಬಿ. ಟಿ.). ಕೆಲವು ವರ್ಷ ಶಿಕ್ಷಕ, ಸಂಪಾದಕ, ಸಂಶೋಧಕ. ಅಖಿಲ ಭಾರತ ಆಕಾಶವಾಣಿಯಲ್ಲಿ ಸತತವಾಗಿ ಪ್ರೋಗ್ರಾಂ ಎಕ್ಸಿಕ್ಯೂಟೀವ್ ಆಗಿ ಇಪ್ಪತ್ತೈದು ವರ್ಷಗಳ ಸೇವೆಯ ನಂತರ ನಿವೃತ್ತಿ. ಪ್ರಕಟಣೆ—ಕಾದಂಬರಿ: 'ಸಾವಿನ ಉಡಿಯಲ್ಲಿ', 'ಎರಡನೆಯ ಸಂಬಂಧ' ಇತ್ಯಾದಿ. ನಾಟಕಗಳು: 'ಹತ್ತು ಏಕಾಂಕ ಸಂಗ್ರಹ'. ಹರಟೆ: ಮೂರು ಸಂಗ್ರಹ. ಸಾಹಿತ್ಯವಿಮರ್ಶೆ: 'ಕನ್ನಡ ಸಾಹಿತ್ಯವಾಹಿನಿ', 'ಕುಮಾರವ್ಯಾಸ ಮತ್ತು ಕೃಷ್ಣ ಕಥೆ' ಇತ್ಯಾದಿ. ಚರಿತ್ರೆ: 'ಗರೂಡ ಸದಾಶಿವರಾಯರು', 'ಲೋಕೂರ ನಾರಾಯಣರಾಯರು' ಇತ್ಯಾದಿ. ಈಗ ಧಾರವಾಡದಲ್ಲಿ ವಾಸವಾಗಿರುತ್ತಾರೆ.

**ಕೀರ್ತಿನಾಥ ಕುರ್ತಕೋಟಿ:** ಧಾರವಾಡ ಜಿಲ್ಲೆಯ ಗದುಗಿನಲ್ಲಿ ಜನನ 1928. ಗದಗು ಮತ್ತು ಧಾರವಾಡಗಳಲ್ಲಿ ವಿದ್ಯಾಭ್ಯಾಸ (ಎಂ. ಎ.) 1971 ರಲ್ಲಿ ರಾಜ್ಯ ಸಾಹಿತ್ಯ ಅಕಾದೆಮಿ ಪ್ರಶಸ್ತಿ. ಪ್ರಕಟಣೆಗಳು—ನಾಟಕ: ಸ್ವಪ್ನದರ್ಶಿ. ಮತ್ತು ಇತರ ಗೀತ ನಾಟಕಗಳು', 'ಆಮನಿ'. ವಿಮರ್ಶೆ: 'ಯುಗಧರ್ಮ ಮತ್ತು ಸಾಹಿತ್ಯ ದರ್ಶನ', 'ನವ್ಯ—ಕಾವ್ಯ—ಪ್ರಯೋಗ', 'ಅಸಂಗತ ನಾಟಕ', 'ಕುಮಾರವ್ಯಾಸ', 'ಭೃಂಗದ ಬೆನ್ನೇರಿ'. ಸಂಗೀತನಾಟಕಗಳಲ್ಲಿ ಹೆಚ್ಚಿನ ಅಭಿರುಚಿ. ಈಗ ಸರದಾರ ಪಟೇಲ ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ರೀಡರ್ ಆಗಿ ಕೆಲಸ ಮಾಡುತ್ತಿದ್ದಾರೆ.

**ಚಂದ್ರಕಾಂತ ಕುಸನೂರ:** ಕಲ್ಬುರ್ಗಿಯಲ್ಲಿ ಜನನ 1931. ಹೈದರಾಬಾದಿನಲ್ಲಿ ವಿದ್ಯಾಭ್ಯಾಸ (ಎಂ. ಎ; ಬಿ. ಇಡಿ.). ಪ್ರಕಟಣೆಗಳು—ಕಾವ್ಯ: 'ನಂದಿಕೋಲು', ಕಾದಂಬರಿ: 'ಚರ್ಚ್‌ಸ್ಟ್ರೀಟ್', ನಾಟಕ: 'ಹಳ್ಳಾ ಕೊಳ್ಳಾ ನೀರು', 'ಮೂರು ಅಸಂಗತ ನಾಟಕಗಳು', 'ನಾಲ್ಕು ಅಸಂಗತ ನಾಟಕಗಳು', 'ಕನಸು', ಹಿಂದಿಯಲ್ಲಿ ಎರಡು ಪುಸ್ತಕಗಳು. ಈಗ ಬೆಳಗಾವಿ ವಿಭಾಗದಲ್ಲಿ ಕನ್ನಡ—ಸಂಸ್ಕೃತಿ ಕಛೇರಿಯಲ್ಲಿ ಸಹಾಯಕ ನಿರ್ದೇಶಕರು.

**ನ. ರತ್ನ:** ತಮಿಳುನಾಡಿನ ಚಿದಂಬರಂನಲ್ಲಿ ಜನನ 1934. ಬೆಂಗಳೂರು, ಮೈಸೂರು ಮತ್ತು ಅಮೇರಿಕೆಯ ಬ್ಲೂಮಿಂಗ್‌ಟನ್ ಗಳಲ್ಲಿ ವಿದ್ಯಾಭ್ಯಾಸ (ಎಂ. ಎ; ಪಿ ಎಚ್. ಡಿ.). ಪ್ರಕಟಣೆಗಳು—ನಾಟಕ: 'ಎಲ್ಲಿಗೆ?', 'ಗೋಡೆ ಬೇಕೆ? ಗೋಡೆ', 'ಬೊಂತೆ', 'ಹೆದ್ದಾರಿಯಲ್ಲಿ' (ಅನುವಾದ), 'ಕಳ್ಳಾ ಕಳ್ಳಾ ಬಚ್ಚಿಟ್ಕೋ', ಮಕ್ಕಳ ಸಿನಿಮಾ ಕಥೆ: 'ನಿಮ್ಮ ಓಟು ಯಾರಿಗೆ?', 'ರೈಲು', ಹಲವು ನಾಟಕಗಳನ್ನು ನಿರ್ದೇಶಿಸಿದ ಅನುಭವ. 'ಸ್ವಪ್ನ ವಾಸವದತ್ತ', 'ಎಲ್ಲಿಗೆ', 'ಕದಡಿದ ನೀರು',—ಅವರು ನಿರ್ದೇಶಿಸಿದ ಕೆಲವು ನಾಟಕಗಳು. ಋಷ್ಯಶೃಂಗ ಸಿನಿಮಾದಲ್ಲಿನ ಪಾತ್ರಕ್ಕಾಗಿ ಕರ್ನಾಟಕ ಸರ್ಕಾರದ ಬಹುಮಾನ. ಈಗ ಮೈಸೂರಿನ ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯ ನಿರ್ದೇಶಕರು.

ಪಿ. ಲಂಕೇಶ್: ಶಿವಮೊಗ್ಗ ಜಿಲ್ಲೆಯ ಕೊನಗವಳ್ಳಿಯಲ್ಲಿ ಜನನ 1935. ಶಿವಮೊಗ್ಗ, ಬೆಂಗಳೂರುಗಳಲ್ಲಿ ವಿದ್ಯಾಭ್ಯಾಸ (ಎಂ. ಎ;). ಪ್ರಕಟಣೆಗಳು—ಕಾವ್ಯ: 'ಬಿಚ್ಚು', 'ತಲೆ ಮಾರು', ಕಥೆ: 'ನಾನಲ್ಲ', 'ಉಮಾಪತಿಯ ಸ್ಕಾಲರ್‌ಷಿಪ್ ಯಾತ್ರೆ', ಕಾದಂಬರಿ: 'ಬಿರುಕು', 'ಮುಸ್ಸಂಜೆಯ ಕಥಾ ಪ್ರಸಂಗ', ವಿಮರ್ಶೆ: 'ಪ್ರಸ್ತುತ', 'ನವ್ಯ ನಾಟಕ', 'ಕಂಡದ್ದು ಕಂಡ ಹಾಗೆ', ನಾಟಕ: 'ಬಿರುಕು', 'ಸಂಕ್ರಾಂತಿ', 'ಏಳು ನಾಟಕಗಳು'. ಅನುವಾದ: 'ದೊರೆ ಈಡಿಪಸ್', 'ಅಂತಿಗೊನೆ', ಚಿತ್ರನಿರ್ದೇಶನ: 'ಪಲ್ಲವಿ', 'ಅನುರೂಪ', 'ಖಂಡವಿದೆಕೊ–ಮಾಂಸವಿದೆಕೊ', 'ಎಲ್ಲಿಂದಲೋ ಬಂದವರು', ಸಂಪಾದಕರು: 'ಲಂಕೇಶ್ ಪತ್ರಿಕೆ', ಈಗ ಬೆಂಗಳೂರಿನಲ್ಲಿ ನೆಲಸಿದ್ದಾರೆ.

ಗಿರೀಶ ಕಾರ್ನಾಡ: ಧಾರವಾಡದಲ್ಲಿ ಜನನ 1938. ಧಾರವಾಡ ಮತ್ತು ಇಂಗ್ಲೆಂಡ್‌ನಲ್ಲಿ ವಿದ್ಯಾಭ್ಯಾಸ (ಎಂ. ಎ.). ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್ ಹಾಗೂ ಪುಣೆ ಫಿಲ್ಮ್ ಇನ್‌ಸ್ಟಿಟ್ಯೂಟ್‌ನಲ್ಲಿ ಕೆಲವು ಕಾಲ ವೃತ್ತಿ. ರಾಜ್ಯ ಸರ್ಕಾರದ ಪ್ರಶಸ್ತಿ. ಭಾರತ ಸರ್ಕಾರದಿಂದ ಪದ್ಮಶ್ರೀ ಪ್ರಶಸ್ತಿ. ಪ್ರಕಟಣೆಗಳು—ನಾಟಕ: 'ಯಯಾತಿ', 'ತುಘಲಕ್', 'ಹಯವದನ', 'ಹಿಟ್ಟಿನ ಹುಂಜ', 'ಅಂಜುಮಲ್ಲಿಗೆ', ಚಿತ್ರನಿರ್ದೇಶನ: 'ವಂಶವೃಕ್ಷ', 'ಒಂದಾನೊಂದು ಕಾಲದಲ್ಲಿ', 'ತಬ್ಬಲಿಯು ನೀನಾದೆ ಮಗನೆ', 'ಕಾಡು', ನಾಟಕ ಹಾಗೂ ಸಿನಿಮಾಗಳಲ್ಲಿ ಅಭಿನಯ. ಈಗ ಹೆಚ್ಚಿಗೆ ಹಿಂದೀ ಸಿನಿಮಾಗಳಲ್ಲಿ ಅಭಿಯಿಸುತ್ತಾ ಮುಂಬಯಿಯನ್ನು ಕೇಂದ್ರವಾಗಿ ಮಾಡಿ ಕೊಂಡಿದ್ದಾರೆ.

ಎಂ. ಎಸ್. ಕೆ. ಪ್ರಭು: ಮೈಸೂರಿನಲ್ಲಿ ಜನನ 1938. ಮೈಸೂರಿನಲ್ಲಿ ವಿದ್ಯಾಭ್ಯಾಸ (ಎಂ. ಎ.). ರಾಜ್ಯ ಸಾಹಿತ್ಯ ನಾಟಕ ಅಕಾಡೆಮಿಯಿಂದ 1979ರಲ್ಲಿ ನಾಟಕ ಪ್ರಶಸ್ತಿ. ಪ್ರಕಟಣೆಗಳು—ನಾಟಕ: 'ಬಕ', 'ಮಹಾಪ್ರಸ್ಥಾನ', 'ಶಬ್ದಕ್ಕಂಜಿದೊಡೆಂತಯ್ಯ', 'ಸಾರ್ವಜನಿಕ ರಸ್ತೆ ಅಲ್ಲ'. ಕಥೆ: 'ಬೆತ್ತಲೆ ಅರಸನ ರಾಜ ರಹಸ್ಯ'. ಈಗ ಆಲ್ ಇಂಡಿಯಾ ರೇಡಿಯೋದಲ್ಲಿ ಪ್ರೋಗ್ರಾಂ ಎಗ್ಸಿಕ್ಯುಟೀವ್ ಆಗಿ ಧಾರವಾಡದಲ್ಲಿರುತ್ತಾರೆ.

ಚಂದ್ರಶೇಖರ ಕಂಬಾರ: ಬೆಳಗಾವಿ ಜಿಲ್ಲೆಯ ಘೋಡಗೇರಿಯಲ್ಲಿ ಜನನ 1938. ಘೋಡಗೇರಿ, ಗೋಕಾಕ, ಬೆಳಗಾವಿ ಮತ್ತು ಧಾರವಾಡಗಳಲ್ಲಿ ವಿದ್ಯಾಭ್ಯಾಸ (ಎಂ. ಎ. ಪಿ ಎಚ್. ಡಿ.). ಬೆಳಗಾವಿ, ಸಾಗರ, ಉಡುಪಿ, ಶಿಕಾಗೋಗಳಲ್ಲಿ ಕೆಲವು ಕಾಲ ಅಧ್ಯಾಪಕವೃತ್ತಿ. 1974 ರಲ್ಲಿ ಭಾರತದ ಭಾಷೆಗಳಲ್ಲಿ ಶ್ರೇಷ್ಠ ನಾಟಕವೆಂದು 'ಜೋಕುಮಾರಸ್ವಾಮಿ' ಗೆ ಭಾರತೀಯ ನಾಟ್ಯ ಸಂಘದ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ ಪ್ರಶಸ್ತಿ. ಪ್ರಕಟಣೆಗಳು—ಕಾವ್ಯ: 'ಮುಗುಳು', 'ಹೇಳತೇನ ಕೇಳ', 'ತಕರಾರಿನವರು'. ಸಂಶೋಧನೆ:

'ಉತ್ತರ ಕರ್ನಾಟಕದ ಜನಪದ ರಂಗಭೂಮಿ'. ನಾಟಕ: 'ನಾರ್ಸಿಸಸ್', 'ಜಾಳೀಶ', 'ಋಷ್ಯಶೃಂಗ', 'ಜೋಕುಮಾರಸ್ವಾಮಿ', 'ಜೈ ಸಿದ್ಧನಾಯ್ಕ', 'ಖರೋಖರ', 'ಅಲೀಬಾಬ ಮತ್ತು ನಲವತ್ತು ಕಳ್ಳರು', 'ಸಂಗ್ಯಾಬಾಳ್ಯಾ', 'ಕಾಡುಕುದುರೆ', 'ನಾಯೀ ಕಥೆ', ಚಿತ್ರನಿರ್ದೇಶನ: 'ಕಾಡುಕುದುರೆ, ಸಂಗೀತಾ. ಈಗ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ರೀಡರ್.

**ಚಂದ್ರಶೇಖರ ಪಾಟೀಲ:** ಧಾರವಾಡ ಜಿಲ್ಲೆಯ ಹತ್ತೀಮತ್ತೂರಿನಲ್ಲಿ ಜನನ 1939. ಹತ್ತೀ ಮತ್ತೂರು, ಹಾವೇರಿ, ಧಾರವಾಡ, ಹೈದರಾಬಾದ್ ಮತ್ತು ಇಂಗ್ಲೆಂಡುಗಳಲ್ಲಿ ವಿದ್ಯಾಭ್ಯಾಸ (ಎಂ. ಎ, ಎಂ. ಎ;). ಪ್ರಕಟಣೆಗಳು.—ಕಾವ್ಯ: 'ಬಾನುಲಿ', 'ಮಧ್ಯಬಿಂದು', 'ಹತ್ತೊಂಬತ್ತು ಕವನಗಳು', ನಾಟಕ: 'ಎರಡು ನಾಟಕಗಳು', 'ಮೂರು ನಾಟಕಗಳು', 'ಗೋಕರ್ಣದ ಗೌಡಶಾನಿ', 'ಜಗದಂಬೆಯ ಬೀದಿ ನಾಟಕ', ಸಂಪಾದಕರು: 'ಸಂಕ್ರಮಣ'—ಮಾಸಿಕ. ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ರೀಡರ್.

**ವಿಜಯಾ:** ಜನನ 1942. ಪ್ರಕಟಣೆಗಳು—ನಾಟಕ: 'ಬಂದರೋ ಬಂದರು', 'ಧನ್ವಂತರಿಯ ಚಿಕಿತ್ಸೆ', (ಕುವೆಂಪು ಅವರ ಮೂಲಕಥೆಯ ಆಧಾರದ ಮೇಲೆ ರಚಿಸಿದ ನಾಟಕ) 'ಮಾನಿಷಾದ' (ಗಿರೀಶ್ ಕಾರ್ನಾಡರ ನಾಟಕದ ಆಧಾರದ ಮೇಲೆ ರಚಿಸಿದ ಬೊಂಬೆ ರೂಪ). ವಿಮರ್ಶೆ: 'ಸಣ್ಣ ಕತೆಯ ಸೊಗಸು', 'ಮಾತಿನಿಂದ ಲೇಖನಿಗೆ'. ತುಷಾರ ಪತ್ರಿಕೆಯ ಉಪ ಸಂಪಾದಕರು. ಉದಯವಾಣಿ ಪತ್ರಿಕೆಯ ವರದಿಗಾರರು. ಚಲನಚಿತ್ರ ವಿಮರ್ಶಕರು. ಈಗ ಬೆಂಗಳೂರಿನಲ್ಲಿ ಇರುತ್ತಾರೆ.

**ಶ್ರೀನಿವಾಸರಾಜು:** ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರದಲ್ಲಿ ಜನನ 1942. ಚಿಕ್ಕಬಳ್ಳಾಪುರ ಮತ್ತು ಬೆಂಗಳೂರಿನಲ್ಲಿ ವಿದ್ಯಾಭ್ಯಾಸ (ಎಂ. ಎ, ಡಿಪ್ಲೊಮಾ ಇನ್ ಇಂಡಾಲಜಿ). ಪ್ರಕಟಣೆಗಳು—ನಾಟಕ: 'ಐದು ಮೂಕ ನಾಟಕಗಳು', 'ಎರಡು ಏಕಾಂಕ ನಾಟಕಗಳು', ಸಂಕೀರ್ಣ: 'ಕರ್ನಾಟಕ ಸಂಘ ಮತ್ತು ಡಾ. ಜಿ. ಪಿ. ರಾಜರತ್ನಂ', 'ಬಾವಿ ಕಟ್ಟೆಯ ಬಳಿ'. ಈಗ ಬೆಂಗಳೂರಿನಲ್ಲಿ ಕ್ರೈಸ್ಟ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿರುತ್ತಾರೆ.

**ವ್ಯಾಸ ದೇಶಪಾಂಡೆ:** ಇವರು ಕರ್ನಾಟಕ ಸರ್ಕಾರದ ರೆವಿನ್ಯೂ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

---